# ಕಸ್ತೂರಿ

ಕನ್ನಡ ಡೈಜೆಸ್ಟ್

ವ್ಯವಸ್ಥಾಪಕ ಸಂಪಾದಕ :
ಎಚ್. ಆರ್. ಬಸವರಾಜ್

ಸಂಪಾದಕ :
ಪ. ಸು. ಭಟ್ಟ

ಕಲೆ :
ಕೆ. ಬಿ. ಕುಲಕರ್ಣಿ

ಮುಖಪುಟ :
ನಡೆದುಬಂದ ದಾರಿ
ಚಿತ್ರ :
ವಿ. ಡಿ. ಬಡಿಗೇರ

ಚಂದಾದರ :
ಅರ್ಧವರ್ಷ ಅಂಚೆ ಸೇರಿ ರೂ. ೧೦-೦೦
೧ ವರ್ಷ ,, ರೂ. ೧೮-೦೦
(ವಿಶೇಷ ಸಂಚಿಕೆ ಸೇರಿ)
KASTURI April 1980

## ಬೆಳಕಿಂಡಿ

ಮನುಷ್ಯನೊಬ್ಬ ಹುಲಿ ಬೇಟೆಯಾಡಿದರೆ ಅದನ್ನು 'ಕ್ರೀಡೆ' ಎಂದು ಕರೆಯುತ್ತಾನೆ. ಆದರೆ ಹುಲಿಯೇ ಅತನ ಬೇಟೆಯಾಡಿದರೆ ಅದನ್ನು 'ಕ್ರೌರ್ಯ' ಎನ್ನುತ್ತಾನೆ.

- ಜಾರ್ಜ್ ಬರ್ನಾರ್ಡ್ ಶಾ

*

ನಾವು ನಮ್ಮ ಮುಂಪೀಳಿಗೆಗೆ ಮಾಡಬೇಕಾದ ಒಂದು ದೊಡ್ಡ ಉಪಕಾರವೆಂದರೆ ಅವರ ಸಂಖ್ಯೆಯನ್ನು ಸೀಮಿತಗೊಳಿಸುವುದು.

- ಅಲಿನ್ ಮಿಲ್ಲರ್

*

ಮಗುವಿನ ದೃಷ್ಟಿಯಲ್ಲಿ ಜಗತ್ತಿನಲ್ಲಿ ಏಳು ಅದ್ಭುತಗಳು ಇಲ್ಲವೇ ಇಲ್ಲ - ಏಳು ಅಬ್ಜ ಅದ್ಭುತಗಳಿವೆ.

-ವಾಲ್ಟ ಸ್ಟ್ರೀಟಿಫ್

*

ಅಂತಸ್ತಿಗೇರುವುದು ಮತ್ತು ಕೇಡಿಗಳ ಸಹವಾಸ ಇವೆರಡೂ ಹೃದಯಕ್ಕೆ ಮಾರಕವಾದುವುಗಳು.

•

## ಚಂದಾದಾರರಿಗೆ ಸೂಚನೆ

'ಕಸ್ತೂರಿ' ತಿಂಗಳ ಒಂದನೇ ದಿನಾಂಕದೊಳಗೇ ಪ್ರಕಟವಾಗುವುದು. ತಿಂಗಳ ೫ ನೇ ದಿನಾಂಕದೊಳಗೆ ತಲುಪದೇ ಹೋದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಪತ್ರವ್ಯವಹಾರ ಮಾಡುವಾಗ ಚಂದಾ ನಂಬರು ಹಾಕಿರಬೇಕು.

# ಈ ಸಂಚಿಕೆಯಲ್ಲಿ



**ಪುಸ್ತಕ ವಿಭಾಗ**

# ಸಹಚಿಂತನ

### ಉತ್ತಮ ಸಂಚಿಕೆ

ಮಾರ್ಚ್ 'ಕಸ್ತೂರಿ'ಯ ಪುಟ ಪುಟದಲ್ಲೂ ಕಸ್ತೂರಿಯ ಪರಿಮಳ. ಯಾವುದನ್ನು ಬಣ್ಣಿಸಬೇಕು? ಕಥೆ, ಕವನ, ಹರಟೆ, ಒಂದಕ್ಕಿಂತ ಒಂದು ಮಿಗಿಲು. 'ಪುಲಪೇಡಿ' ಕಣ್ಣನ ಒಲವಿನ–ತ್ಯಾಗದ ದುರಂತ ಕಥೆಯಿಂದ ಹನಿದ ಕಣ್ಣೀರನ್ನು ಒರೆಸಿಕೊಳ್ಳುತ್ತಿರುವಂತೆಯೆ 'ದೇವತೆಗಳ ಚಟ'ಗಳಿಂದಾಗಿ ತುಟಿಯಂಚಿನಲ್ಲಿ ನಗೆ ಮಿನುಗುತ್ತದೆ. ಜತೆಗೆ ಕುಶವಂತಸಿಂಗರೊಡನೆ ದೊರೆಯುವ ಖುಷಿ ಬೇರೆ. 'ಕ್ಲಿಪ್ಟೋಮನಿಯಾ' ಕಥೆಯ ಅಕ್ಷರಗಳನ್ನು ಆದಷ್ಟು ಅವಸರವಾಗಿ ನುಂಗಿದೆನೆಂದರೆ ಮುಗಿಸಿದ ತಕ್ಷಣ ಮಾತೇ ಬರಲಿಲ್ಲ. ಅಲ್ಬರ್ಟ್ ಕಾಮೂರ 'ಅತಿಥಿ' ಕಥೆ ಮಾನವೀಯ ಅನುಕಂಪೆಗೆ ಸಾಕ್ಷಿ. ಪಾಬ್ಲೊ ನೆರುಡಾರ ಕವನ 'ಕುದುರೆಗಳು' ಓದುತ್ತಿರುವಂತೆಯೆ ಮೈ ತುಂಬ ಬಿಸಿ. ಕವನದ ಬಗ್ಗೆ ಬರೆದರೆ ಅದೇ ಒಂದು ಹೊತ್ತಿಗೆಯಾಗಬಹುದು. ಅನುವಾದಕರಿಗೆ ಧನ್ಯವಾದಗಳು, ನೆರುಡಾರ ಭಾರತದ ಭೇಟಿಯ ಕುರಿತು ಲೇಖನ ಅಂದಿನ ರಾಜಕೀಯ ವ್ಯಕ್ತಿ ವಸ್ತುಗಳ ಮೇಲೆ ಬೀರಿದ 'ಕ್ಷ' ಕಿರಣದಂತಿದೆ.

'ಸೋಲೋಮನ್ನನ ರಹಸ್ಯ ನಿಧಿ' ಕಾಣಲೋಸುಗ ಎಪ್ರಿಲ್ ಮೊದಲ ದಿನವನ್ನೆ ಕಾಯುತ್ತಿರುವೆ. ಬಹುಶಃ ಎಪ್ರಿಲ್ ಫೂಲ್ ಆಗಲಿಕ್ಕಿಲ್ಲವಲ್ಲವೆ?

ನಿಮ್ಮ ಶಬ್ದಭಂಡಾರ ಬೆಳಿಯಲಿಯಲ್ಲಿಯ 'ಸನ್ನಿ' ಶಬ್ದದ ಬಗ್ಗೆ ಒಂದು ಮಾತು. ಅದಕ್ಕೆ ಅರ್ಥ ವಿವರಣೆ ಕೊಡುವಾಗ ಅಧಿಕ ಜ್ವರದಿಂದಾಗುವ ಚಿತ್ತಭ್ರಮಣೆ, ಆ ಸ್ಥಿತಿಯಲ್ಲಿ ಮಾತಾಡುವಿಕೆ ಎಂದು ಕೊಟ್ಟಿದ್ದೀರಿ. ಸನ್ನಿ ಶಬ್ದಕ್ಕೆ ಇನ್ನೊಂದು ಅರ್ಥವುಂಟು. ಕನ್ನಡ ಸಾಹಿತ್ಯದಲ್ಲಿ ಮೊತ್ತ ಮೊದಲಿಗೆ 'ಬನ್ನಿ' ಶಬ್ದದ ವಿರುದ್ಧಾರ್ಥ ಪದವಾಗಿ 'ಸನ್ನಿ' ಎಂಬುದನ್ನು ಬಸವಣ್ಣನವರು ಬಳಸಿದ್ದಾರೆ. (ಉದಾ:–"ಬಡ ಭಕ್ತರು ಬಂದರೆ ಎಡೆಯಿಲ್ಲ ಅತ್ತ ಸನ್ನಿ ಎಂಬುರು").

ಧಾರವಾಡ – ಚಂದ್ರಶೇಖರ ವಸ್ತ್ರದ

### ಗಾಂಧೀ ಟೋಪಿ

ಮಾರ್ಚ್ ೧೯೮೦ರ 'ಕಸ್ತೂರಿ'ಯ 'ಟೊಪ್ಪಿಗೆ ಮತ್ತು ಶಿರೋಭೂಷಣಗಳು' ಚೆನ್ನಾಗಿತ್ತು. ಆದರೆ ಪ್ರಸಿದ್ಧ ಗಾಂಧೀ ಟೋಪಿಯ ಉಲ್ಲೇಖವಿಲ್ಲದ್ದು ನೋಡಿ ಖೇದವಾಯಿತು. ಗಾಂಧೀ ತತ್ವಗಳನ್ನು ನಮ್ಮ ರಾಜಕಾರಣಿಗಳು ಬಹಿಷ್ಕರಿಸಿದಂತೆ ತಾವೂ ಗಾಂಧೀ ಟೋಪಿಯನ್ನು ಈ ಲೇಖನದಲ್ಲಿ ದೂರವಿಟ್ಟಿದ್ದೀರೋ ಹೇಗೆ?

ಬೆಂಗಳೂರು – ವಿಜಯಾ ಶ್ರೀಧರ್

### ದೇವತೆಗಳ ಚಟಗಳು

ಮಾರ್ಚ್ ಸಂಚಿಕೆಯಲ್ಲಿ ಪ್ರಕಟವಾದ 'ದೇವತೆಗಳ ಚಟಗಳು' ವಿಡಂಬನೆಯನ್ನೋದಿ ತುಂಬಾ ಖುಷಿಯಾಯಿತು. ಪುರಾಣಗಳಿಂದ ನಂಬಲಾದ ದೇವತೆಗಳನ್ನು ಇಂದಿನ ಸಾಮಾಜಿಕ ಜೀವನಕ್ಕೆ ಎಳೆದು ತಂದು ಅವರ ಪಾತ್ರವನ್ನು ಜೀವಂತಿಕೆಯಿಂದ ಪ್ರಚಲಿತ ಸಮಾಜ ಜೀವಿಗಳೊಡನೆ ಹೋಲಿಸಿ ನೋಡಿ ಅವರನ್ನು ಸಾಮಾನ್ಯ ಸ್ವರೂಪದಿಂದ ಅಳೆಯುವಲ್ಲಿ ಲೇಖಕರು ಸಂಪೂರ್ಣ ಯಶಸ್ವಿಯಾಗಿದ್ದಾರೆ. ಇಂದಿನ ವಾತಾವರಣದಲ್ಲಿ ಸಾಮಾನ್ಯರಾಗಿ ಬದುಕುತ್ತಿರುವ ನಮ್ಮಂತೆ ದೇವತೆಗಳೂ ಸಾಮಾನ್ಯ ಚಟಗಳನ್ನು ಬೆಳೆಸಿಕೊಂಡು ಅವುಗಳ ಪೋಷಣೆಗಾಗಿ ಸಾಮಾನ್ಯ ವ್ಯವಹಾರದಲ್ಲಿ ನಿರತರಾಗಿದ್ದರೆಂಬುದನ್ನು ತೀರ ವಾಸ್ತವವಾಗಿ ಹೃದಯಂಗಮವಾಗಿ, ಓದುಗರ ಮನಸ್ಸಿಗೆ ಮುಟ್ಟುವಂತೆ ಚಿತ್ರಿಸಿದ ಪಿ. ವಿ. ಆಚಾರ್ಯರಿಗೆ ಧನ್ಯವಾದಗಳನ್ನರ್ಪಿಸದಿರಲಾರೆ.

ಹಿಚಕಡ – ವಿಶ್ವನಾಥ ನಾಯಕ

### ಪುಲಪೇಡಿ

ನೈಜ ಪ್ರೇಮವನ್ನು ಒರೆ ಹಚ್ಚುವ 'ಗಂಗಾ' ಪಾದೇಕಲ್ ಅವರ ಕಥೆ 'ಪುಲಪೇಡಿ' ತುಂಬಾ ಸಮಾಧಾನ ನೀಡಿತು. ಕತೆ ಉದ್ದಕ್ಕೂ ಕುತೂಹಲ ತುಂಬಿ ಓದಿಸಿಕೊಳ್ಳುತ್ತದೆ. ಕತೆಯ ಮುಕ್ತಾಯ ಉಸಿರು ಕಟ್ಟಿಸುತ್ತದೆ.

ಬಿಳಿಗೆರೆ – ಕೆ. ಕಾಳಯ್ಯ

### ಜ್ಯೋತಿಶ್ಶಾಸ್ತ್ರ ನಿರಾಧಾರವಲ್ಲ

ಸಂಜಯ ಹಾವನೂರ ಅವರ 'ಜ್ಯೋತಿಷವು ಹಾಸ್ಯಾಸ್ಪದವಾಗಿದೆ' ಎಂಬ ಅಭಿಪ್ರಾಯವನ್ನು (ಸಹಚಿಂತನ ಮಾರ್ಚ್ ೧೯೮೦) ಓದಿ ನಗು ಬಂತು.

ಭಾರದ್ವಾಜ ಋಷಿಗಳ 'ವೈಮಾನಿಕ' ಶಾಸ್ತ್ರ ಇಂದು ತಾಂತ್ರಿಕ ವಿಜ್ಞಾನಿಗಳ ಕುತೂಹಲವನ್ನು ಕೆರಳಿಸಿದೆ. ಚರಕ, ಸುಶ್ರುತ, ಮೊದಲಾದ ಪ್ರಾಚೀನ ಭಾರತೀಯ ವೈದ್ಯರ ಅದ್ಭುತ ಸಾಧನೆಗಳಿಗೆ ಇದೀಗ ಪಾಶ್ಚಾತ್ಯ ವಿದ್ವಾಂಸರು ಮಹತ್ವ ನೀಡಲಾರಂಭಿಸಿದ್ದಾರೆ. ಕ್ರಿ. ಪೂ. ಎರಡು ಸಾವಿರ ವರ್ಷಗಳ ಹಿಂದೆಯೇ ಆಯುರ್ವೇದದ ಸಂಹಿತಕಾರರಿಂದ ಶೋಧಿಸಲ್ಪಟ್ಟ "ಛಾಯೆ" ಮತ್ತು "ಪ್ರಭ" ಎಂಬ ನಮ್ಮ ದೇಹದ ಸುತ್ತಲಿನ ಚೈತನ್ಯ ವಲಯವು ತೀರ ಇತ್ತೀಚೆಗಷ್ಟೇ ಕೀರ್ಲಿಯನ್ ಉಪಕರಣದ ಮೂಲಕ ಇಂದಿನ ವಿಜ್ಞಾನಿಗಳು ಪತ್ತೆ ಹಚ್ಚಿದ್ದಾರೆ.

"ಪ್ರತಿಯೊಂದು ಜೀವಿಯ ಬದುಕು ಲಯಬದ್ಧವಾಗಿದೆ. ಈ ಲಯಬದ್ಧತೆಯು ಶಾರೀರಿಕ ಲಯ ಭಾವನಾ–ಅಥವಾ–ಮಾನಸಿಕ ಲಯ ಹಾಗೂ ಬೌದ್ಧಿಕ ಲಯಗಳಿಂದ ಸಮಾವೇಶಗೊಂಡಿದೆ. ಇವುಗಳಲ್ಲಿ ಶಾರೀರಿಕ ಲಯವು ಪ್ರತಿ ೨೩ ದಿನಗಳಿಗೊಮ್ಮೆ, ಭಾವನಾ ಲಯ ಮತ್ತು ಬೌದ್ಧಿಕ ಲಯಗಳು ಕ್ರಮವಾಗಿ ಪ್ರತಿ ೨೮ ಹಾಗೂ ೩೩ ದಿನಗಳಿಗೊಮ್ಮೆ ಪುನರಾವರ್ತಿಸುತ್ತವೆ. ಭಾವನಾಲಯವು ತನ್ನ ಆವರ್ತನೆಗೆ ತೆಗೆದುಕೊಳ್ಳುವ ಕಾಲಾವಧಿಯು ಚಂದ್ರನು ಭೂಮಿಯ ಸುತ್ತ ಪರಿಭ್ರಮಿಸುವ ಕಾಲಾಂತರಕ್ಕೆ ಸಮೀಪವರ್ತಿಯಾಗಿರುವುದನ್ನು ಗಮನಿಸಿದರೆ ವ್ಯಕ್ತಿಯ ಭಾವನೆಗಳ ಮೇಲೆ ಚಂದ್ರನ ಹತೋಟಿ ಇದೆ ಎಂಬುದು ವ್ಯಕ್ತವಾಗುತ್ತದೆ. ಹೀಗೆಯೇ ಇತರ ಎರಡು ಲಯಗಳ ಆವರ್ತನೆ ಕಾಲವು ನಮಗೆ ತಿಳಿಯದ ಇನ್ನಾವುದೋ ಗ್ರಹಗಳ ಪರಿಭ್ರಮಣ ಕಾಲವಾಗಿದ್ದು, ಅವು ಜೀವಿಯ ಶರೀರ ಮತ್ತು ಬುದ್ಧಿಗಳ ಮೇಲೆ ಪ್ರಭಾವ ಬೀರುತ್ತಿರಬಹುದು" ಎಂಬುದಾಗಿ ವಿಜ್ಞಾನಿಗಳು ಪ್ರಚುರಪಡಿಸಿದ್ದಾರೆ.

ಮೇಲಿನ ಎಲ್ಲ ವಿಚಾರಗಳ ಕ್ರೋಢೀಕರಣದಿಂದ "ಶಾರೀರಿಕ, ಭಾವನಾ ಹಾಗೂ ಬೌದ್ಧಿಕ ಲಯಗಳಿಂದ ಮುಪ್ಪುರಿಗೊಂಡ ಲಯ ಸಿದ್ಧಾಂತವು ಜ್ಯೋತಿಷ್ಯಶಾಸ್ತ್ರದ ಪ್ರಾಥಮಿಕ ಹೆಜ್ಜೆಗೆ ವೈಜ್ಞಾನಿಕ ವಿವರಣೆ ನೀಡುತ್ತದೆ" ಎಂಬ ವಿಚಾರ ವಿದಿತವಾಗುತ್ತದೆ. ಎಂದ ಮೇಲೆ ಜ್ಯೋತಿಷ್ಯವು ನಿರಾಧಾರವಾಗುವುದಾದರೂ ಹೇಗೆ?

ಕೂಡ್ಲಿಗಿ – ಉಡುಪಿ ಅನಂತೇಶರಾವ್

**ಮದ್ದು ಹಾಕಿದರು**

ಮಾರ್ಚ್ 'ಕಸ್ತೂರಿ' ಓದಿ ತುಂಬಾ ಸಂತೋಷವಾಯಿತು. ಡಾ. ಕೆ. ಎಂ. ಧ್ರುವಕುಮಾರ ಅವರು ಬರೆದ 'ಮದ್ದು ಹಾಕಿದರು' ಎಂಬ ಲೇಖನ ಓದಿ ಒಂದೆರಡು ಮಾತು ಬರೆಯುವ ಎಂದಾಯಿತು. ನನ್ನ ಮಿತ್ರನಿಗೂ ಮೂರು ವರ್ಷಗಳ ಹಿಂದೆ ಇದ್ದಕ್ಕಿದಂತೆ ಏನು ಆಯಿತು ಎಂದು ತಿಳಿದಿಲ್ಲ. ಒಂದೇ ಸವನೇ ಹೊಟ್ಟೆನೋವು. ಯಾವ ಡಾಕ್ಟರ ಮದ್ದಿನಿಂದಲೂ ಇದನ್ನು ನಿಲ್ಲಿಸಲಾಗಲಿಲ್ಲ. ಕೆಲಸದಲ್ಲಿ ಮನಸ್ಸಿಲ್ಲ. ಹುಚ್ಚರಂತೆ ನಟನೆ. ದಿನ ಹೋದಂತೆ ಬೆಳೆಯುತ್ತಾ ಹೋಯಿತು. ಮನೆಯವರಿಗೆ ಒಂದು ದೊಡ್ಡ ಸಮಸ್ಯೆಯೆ ಆಯಿತು. ತಜ್ಞರ ಬಳಿ ಹೋದರು. ಅವರು ಅಂಗಾಂಗಗಳೆನ್ನೆಲ್ಲಾ ಸರಿಯಾಗಿ ಪರೀಕ್ಷಿಸಿ ಶಸ್ತ್ರಚಿಕಿತ್ಸೆಯಾಗಬೇಕೆಂದರು. ಸರಿ ಶಸ್ತ್ರಚಿಕಿತ್ಸೆಯೂ ಆಯಿತು. ಆದರೆ ನೋವಿನಲ್ಲಿ ಯಾವ ಬದಲಾವಣೆಯಾಗಲಿಲ್ಲ. ವರ್ತನೆಯಲ್ಲಿಯೂ ಯಾವ ಬದಲಾವಣೆ ಆಗಲಿಲ್ಲ.

ಊರಿನವರೆಲ್ಲ ಇದು ಮದ್ದು ಹಾಕಿದ್ದು ಎಂದು ಹೇಳಿದರು. ಇದನ್ನು ಕೇಳಿ ನನಗೆ ನಗು ಬಂತು. ನಂಬದಿದ್ದರೂ ನನಗೆ ಆ ಕಡೆ ಮನಸ್ಸು ಹೋಯಿತು. ನಮ್ಮೂರಿನಲ್ಲಿ ಒಬ್ಬರು ಪಂಡಿತರಿದ್ದರು. ಅವರು ಮದ್ದು ತೆಗೆಯುವದರಲ್ಲಿ ತಜ್ಞರು ಎಂದು ಕೇಳಿದ್ದೆ. ಅಲ್ಲಿಗೆ ನಮ್ಮ ಮಿತ್ರನನ್ನು ಕರೆದುಕೊಂಡು ಹೋದೆ. ಪಂಡಿತರು ಪ್ರಶ್ನೆ ಇಟ್ಟು ಇದು ಮದ್ದು ಹಾಕಿದ್ದು ಮೂರು ವರ್ಷ ಆಯಿತು ಎಂದರು. ಮದ್ದು ತೆಗೆಯಲು ಒಂದು ದಿನ ಕೊಟ್ಟರು. ಸರಿ ಹೋಗಿ ಏನೊ ಕೊಟ್ಟು ವಾಂತಿ ಮಾಡಿಸಿದಾಗ ಉಂಡೆಯಂತೆ ಹೊರಬಂದಿತು. ನಂತರ ಒಂದು ಮದ್ದು ಕುಡಿಯಲು ಕೊಟ್ಟರು.

ಈಗ ಯಾವ ಹೊಟ್ಟೆನೋವೂ ಇಲ್ಲ. ನನ್ನ ಮಿತ್ರ ಮೊದಲಿನಂತೆ ಆದ. ಈಗ ಕೆಲಸಕ್ಕೂ ಹೋಗುತ್ತಾನೆ. ಇದರಿಂದ ಮದ್ದು ಹಾಕುವದು ಸತ್ಯವೆಂದು ತಿಳಿಯಿತು.

ಮೂಲ್ಕಿ – ಹರಿಶ್ಚಂದ್ರ ಪಿ. ಸಾಲಿಯಾನ್

# ಕಸ್ತೂರಿ

ಸಂಚಿಕೆ: ೮ ಕಸ್ತೂರಿ, ಎಪ್ರಿಲ್ ೧೯೮೦ ವರ್ಷ: ೨೪

# ಸ್ವರ್ಣ ಸೂತ್ರಗಳು

ಎಲ್ಸಾ ವ್ಯಾಕ್ಸವೆಲ್

ಗಂಡಿ; ನನ್ನ ತಂದೆ ಸಾಯುತ್ತಾ ಮಲಗಿದ್ದ. ಕೊನೆಯ ಕ್ಷಣ ಸಮೀಪಿಸುತ್ತಿದ್ದ ಹಾಗೆ ತನ್ನ ಮೈಯ ಶಕ್ತಿಯನ್ನೆಲ್ಲಾ ಒಟ್ಟಿಗೆ ಸೇರಿಸಿ ನನ್ನನ್ನು ಕರೆದು ಹತ್ತಿರ ನಿಲ್ಲಿಸಿಕೊಂಡು ತಲೆಯನ್ನು ನೇವರಿಸುತ್ತಾ ಹೇಳಿದ: "ಮುದ್ದಿನ ಮಗಳೆ, ಇನ್ನೇನೂ ನಾನು ಬಹಳ ಕಾಲ ಬದುಕುವುದಿಲ್ಲ. ಎಲ್ಲರೂ ಒಂದು ದಿನ ಪರಲೋಕಕ್ಕೆ ಹೋಗುವ ಹಾಗೆಯೆ ನಾನೂ ಹೋಗುತ್ತೇನಾದರೂ ಎಲ್ಲರೂ ತಮ್ಮ ಮಕ್ಕಳಿಗೆ ಏನಾದರೂ ಸ್ವಲ್ಪ ಆಸ್ತಿಪಾಸ್ತಿಯನ್ನು ಬಿಟ್ಟುಹೋಗುವಂತೆ ನಿನಗಾಗಿ ಬಿಟ್ಟುಹೋಗಲು ಆಗುತ್ತಿಲ್ಲವಲ್ಲ ಎಂದು ಸಂಕಟವಾಗುತ್ತಿದೆ. ಆದರೆ ನಾನಾದರೂ ಏನು ಮಾಡಲಿ ಹೇಳು? ನಾನೋ ಬಡವ. ದುರ್ದೈವ ಎಂದೂ ನನ್ನ ಬೆನ್ನು ಬಿಡಲಿಲ್ಲ. ಹೊಟ್ಟೆ ತುಂಬಿಕೊಳ್ಳುವುದೇ ಒಂದು ಸಾಹಸವಾದಾಗ ಆಸ್ತಿಯನ್ನು ಹೇಗೆ ಮಾಡಲಿ? ಆದರೆ ಆ ದಯೊಘನನ ಬಳಿ ಹೋಗುವ ಮೊದಲು ನಿನಗೆ ನಾನು ಮೂರು ಮಾತುಗಳನ್ನು ಹೇಳುತ್ತೇನೆ. ಅವುಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು ಆ ರೀತಿ ನಡೆದೆಯಾದರೆ ಜೀವನದಲ್ಲಿ ನಿನಗೆ ಆಪತ್ತು ಒದಗುವುದಿಲ್ಲ. ಇಡೀ ಜೀವನದ ಸ್ವರ್ಣಸೂತ್ರ-ಗಳೇ ಇವು.

"ಹೀಗೆ ಮಾಡಿದರೆ ಜನರು ಏನೆಂದಾರು? ಹಾಗೆ ಮಾಡಿದರೆ ಜನರು ಏನೆಂದಾರು ಎಂದು ತಲೆ ಕೆಡಿಸಿಕೊಂಡು ಕೊನೆಗೆ ಏನನ್ನೂ ಮಾಡದೆ ಇರುವವರೆ ಈ ಜಗತ್ತಿನಲ್ಲಿ ಬಹಳ. ಈ ಜನರ ಸಾಲಿನಲ್ಲಿ ಮಾತ್ರ ನೀನು ಸೇರಬೇಡ. ಜನರು ನಿನ್ನ ಬಗ್ಗೆ ಏನೇ ಅನ್ನಲಿ, ಹೇಗೇ ಯೋಚಿಸಲಿ, ಅದನ್ನು ಲಕ್ಷಿಸಬೇಡ; ಅಂತರಾತ್ಮಕ್ಕೆ ಸರಿಯೆನಿಸಿದಂತೆ ಮಾಡುವುದನ್ನು ಯಾವ ಕಾಲಕ್ಕೂ ಬಿಡಬೇಡ.

"ನಮಗೆ ಬೇಕಾಗಿರಲಿ, ಬೇಡವಾಗಿರಲಿ, ವಸ್ತುಗಳನ್ನು ಸಂಗ್ರಹಿಸುತ್ತ ಹೋಗುವುದು ಬಹುಜನರಿಗಿರುವ ಕೆಟ್ಟ ಗುಣ. ಹೀಗೆ ವಸ್ತುಗಳನ್ನು ಸಂಗ್ರಹಿಸುತ್ತಾ ಹೋಗುವ ಹುಚ್ಚು ಹವ್ಯಾಸಕ್ಕೆ ಮಾತ್ರ ಎಂದೂ ಬಲಿಯಾಗಬೇಡ. ಅದರಿಂದ ತೃಪ್ತಿಯೆನ್ನುವುದೇ ಇಲ್ಲ. ಸಂಗ್ರಹಿಸಿದ ಎಲ್ಲ ವಸ್ತುಗಳೂ ಉಪಯೋಗಕ್ಕೆ ಬರುತ್ತವೆನ್ನುವ ನಿಯಮವೂ ಇಲ್ಲ. ಹಾಸಿಗೆಯಿದ್ದಷ್ಟು ಕಾಲು ಚಾಚು.

"ಇನ್ನು ಕೊನೆಯದಾಗಿ ಒಂದು ಮಾತು. ಮಾನವನೆಂದ ಮೇಲೆ ಅವನಲ್ಲಿ ದುರ್ಗುಣಗಳೂ ಇರತಕ್ಕವೇ, ಸದ್ಗುಣಗಳೂ ಇರತಕ್ಕವೇ. ಹಾಗೆಯೆ ಅವನಿಗೆ ಗೌರವಾಸ್ಪದವಾದ ಅಂಶಗಳೂ ಇರತಕ್ಕವೆ. ಅದೇ ರೀತಿ ಹಾಸ್ಯಾಸ್ಪದವಾದ ಅಂಶಗಳೂ ಇರತಕ್ಕವೆ. ಇದರಲ್ಲಿನ ದುರ್ಗುಣಗಳನ್ನು ಟೀಕೆಮಾಡಿಯೋ ಹಾಸ್ಯಾಸ್ಪದ ಅಂಶಗಳನ್ನು ಎತ್ತಿ ತೋರಿಸಿ ಉಪಹಾಸಮಾಡಿಯೋ ಮನಸ್ಸನ್ನು ರಂಜಿಸಿಕೊಳ್ಳುವವರೇ ಬಹಳ. ನಿನ್ನಲ್ಲಿ ಏನಾದರೂ ಹಾಸ್ಯಾಸ್ಪದವಾದದ್ದು ಕಂಡುಬಂದಾಗ ಇತರರು ಉಪಹಾಸಮಾಡುವ ಮೊದಲು ನೀನೇ ಅವುಗಳನ್ನೆತ್ತಿ ತಮಾಷೆ ಮಾಡಿದರೆ ತಪ್ಪೇನು? ಅದರಿಂದ ಇತರರಿಗೂ ಮನರಂಜನೆ ದೊರೆಯುವುದು. ಅಲ್ಲದೆ ಅವರು ಟೀಕಾಸ್ತ್ರಗಳನ್ನು ಬಿಡುವುದಕ್ಕಿಂತ ಮೊದಲೆ ಅವುಗಳ ವಿರುದ್ಧ ಕವಚವನ್ನು ಧರಿಸಿಕೊಂಡಂತಾಗುತ್ತದೆ. ಅಲ್ಲದೆ ಹೀಗೆ ಮಾಡುವುದು ಜನರಲ್ಲಿ ನಿನ್ನ ಬಗೆಗೆ ಒಳ್ಳೆಯ ಮನೋಭಾವವನ್ನು ಮೂಡಿಸುತ್ತದೆ."

ನಾನು ನನ್ನ ತಂದೆಯ ಈ ಮಾತುಗಳನ್ನು ಯಾವಾಗಲೂ ಅನುಸರಿಸುತ್ತಾ ಬಂದಿದ್ದೇನೆ. ಅವು ಸುಖೀ ಜೀವನದ ಸ್ವರ್ಣಸೂತ್ರಗಳೆಂಬುದನ್ನು ಮನಗಂಡಿದ್ದೇನೆ. ✡

# ಪ್ರಾಣೋಪಾಸನೆ

ಮನುಷ್ಯ ಜೀವ–ಜಗತ್ತುಗಳ ಬಗ್ಗೆ ಇನ್ನೂ ಜಿಜ್ಞಾಸೆಯ ತೀರ ಮೊದಲ ಹೆಜ್ಜೆಯಿಕ್ಕುತ್ತಿದ್ದ ಕಾಲ ಅದು. ಮಹಾ ನದಿ ಶತದ್ರುವಿನ ದಡದಲ್ಲಿ ಒಬ್ಬ ಋಷಿ ವಾಸಿಸುತ್ತಿದ್ದರು. ಸಹೃದಯಿ. ಒಂದು ದಿನ ನಿತ್ಯಕರ್ಮ ಮುಗಿಸಿಕೊಂಡು ಮಧ್ಯಾಹ್ನದ ಹೊತ್ತಿಗೆ ಊಟಕ್ಕೆ ಕುಳಿತರು. ಅಷ್ಟರಲ್ಲೇ ಕುಟೀರದ ಹೊರಗೆ ಬ್ರಹ್ಮಚಾರಿಯೊಬ್ಬ ಕೈ ಮುಗಿದುಕೊಂಡೇ ಒಳಬಂದ. ಆತನ ಮುಖವೇ ಹೇಳುತ್ತಿತ್ತು ಆತ ಬಲು ಹಸಿದಿದ್ದಾನೆಂದು.

ಆದರೆ ಯಾಕೋ ಏನೋ ಆ ಸಹೃದಯಿ ಮುನಿ ಬಂದ ಬ್ರಹ್ಮಚಾರಿಗೆ ಎಡಗೈ ತೋರಿಸಿ ಹೊರಟುಹೋಗುವಂತೆ ಸನ್ನೆ ಮಾಡಿದರು. ಬ್ರಹ್ಮಚಾರಿಗೆ ಅಚ್ಚರಿ, ಊಟದ ಸಮಯದಲ್ಲಿ ಬಂದವನನ್ನು ಬರಿ ಒಡಲಿಂದಲೇ ಕಳಿಸುವುದೇ? ಬ್ರಹ್ಮಚಾರಿ ಹಿಂದಡಿಯಿಡುವುದರ ಬದಲು ಒಂದಡಿ ಮುಂದೆ ಇಟ್ಟು, "ಆಚಾರ್ಯ, ನೀವು ಯಾವುದರ ಉಪಾಸಕರು ಎಂದು ಕೇಳಬಹುದೆ?" ಎಂದು ಪ್ರಶ್ನಿಸಿದ.

"ನಾನು ಪ್ರಾಣದ ಉಪಾಸಕ."

ಸ್ಥಿರಮುದ್ರೆಯಿಂದ ವಿನಮ್ರನಾಗಿ ಬ್ರಹ್ಮಚಾರಿ, "ಹಾಗಾದರೆ ನೀವು ಉಪಾಸಿಸುವ ಪ್ರಾಣ ಎಲ್ಲ ಜೀವಿಗಳಲ್ಲೂ ಒಂದೇ ರೂಪದಲ್ಲಿ ಇರುವುದೆಂಬುದನ್ನು ತಾವು ಅರಿತಿರಲೇಬೇಕು. ನಿಮ್ಮ ಪ್ರಾಣೋಪಾಸನೆಗೆ ಅವಶ್ಯವಿರುವ ಆಹಾರ ಇತರ ಜೀವಿಗಳ ಪ್ರಾಣೋಪಾಸನೆಗೂ ಅತ್ಯವಶ್ಯ ಎಂಬುದು ನಿಮಗೆ ತಿಳಿದೇ ಇರುತ್ತದೆ. ಅಂದಾಗ–ನೀವು ಅನ್ನದಂಶದಾನದಿಂದ ಇತರ ಜೀವಿಗಳನ್ನು ಅದು ಹೇಗೆ ವಂಚಿಸುತ್ತೀರಿ?" ಎಂದು ಕೇಳಿಯೇಬಿಟ್ಟ.

ಅಂದಿನ ಪರಿಸ್ಥಿತಿಯೇ ಇಂದೂ ಇದೆ. ಹೊಟ್ಟೆ ತುಂಬಿದ 'ಮಹಾಮಾನವತಾವಾದಿ'ಗಳು ಅನ್ನಾನ್ನಗತಿಕರಾದವರಿಗೆ ಅನೇಕ ಆಶೆ ತೋರಿಸಿ ಅವರ ಬೆವರಿನ ಉಪ್ಪುಂಡು ಅವರಿಗೇ ಅನ್ಯಾಯ ಮಾಡುತ್ತಾರೆ. ಅವರ ದೃಷ್ಟಿಯಲ್ಲಿ ಮಾತ್ರ ಬದುಕುವುದು ಮುಖ್ಯವಾಗುತ್ತದೆಯೇ ಹೊರತು ಇನ್ನುಳಿದವರು ಸತ್ತರೂ ಗೊತ್ತಾಗಿಯೂ ಗೊತ್ತಾಗದವರಂತಿದ್ದುಬಿಡುತ್ತಾರಲ್ಲ!

– **ಗೋವಾ**

***************

# ಜಪಾನಿನ ಮುಖವಾಡಗಳು

ಒಂದು ಕಳೆಚಿದರೆ ಇನ್ನೊಂದು, ಅದರ ಹಿಂದೆ ಮತ್ತೊಂದು–ಮಗದೊಂದು, ಮತ್ತೂ ಒಂದು. ಹೀಗೇ ಕಳಚುತ್ತ, ಹೋದ ಹಾಗೆ ಮತ್ತೆ ಮತ್ತೆ ಎದುರಾಗುವ ಮುಖವಾಡಗಳು...ಬರಿ ಮುಖವಾಡಗಳು...ನಿಜವಾದ ಮುಖವನ್ನೇ ಮರೆಸಿಬಿಡುವ ಮುಖವಾಡಗಳು...” ಕಾರ್ನಾಡರ ಯಯಾತಿಗೆ ಶರ್ಮಿಷ್ಠೆ ಹೇಳುವ ಈ ಮಾತುಗಳು ಕೇವಲ ಆ ಕಾಲ–ಆ ಸಂದರ್ಭಕ್ಕೆ ಮಾತ್ರ ಅನ್ವಯಿಸುವಂಥವಲ್ಲ. ಸಾರ್ವಕಾಲಿಕ. ಪ್ರತಿಯೊಬ್ಬನಿಗೂ ಎರಡು ಮುಖಗಳಿರುತ್ತವಂತೆ. ಸಾಮಾನ್ಯ ನೋಟಕ್ಕೆ ಕಾಣುವ ಈ ಮುಖದ ಹಿಂದೆ ಮತ್ತೊಂದು ಮುಖ! ಅಂದರೆ ನಮಗೆ ಕಾಣುವುದು ನಿಜವಾದ ಮುಖವಲ್ಲ, ಕೇವಲ ಮುಖವಾಡ.

ಮುಖವಾಡಗಳ ಉದ್ದೇಶ ಒಬ್ಬನ ಮುಖಚರ್ಯೆಯನ್ನು ಬದಲಿಸಿಬಿಡುವುದು. ಇವುಗಳ ಉಪಯೋಗ ಪಾಶ್ಚಿಮಾತ್ಯರಲ್ಲಿ ಗ್ರೀಕ್–ರೋಮನ್ ಸಾಮ್ರಾಜ್ಯಕಾಲದಿಂದಲೂ ಇರುವುದು ತಿಳಿದುಬರುತ್ತದೆ. ಆಗ ನಾಟಕಗಳಲ್ಲಿ ಮೇಕಪ್ ಬದಲಾಗಿ ನಟರು ಮುಖವಾಡಗಳನ್ನೇ ಬಳಸುತ್ತಿದ್ದರು. ಪೌರಸ್ತ್ಯ ದೇಶಗಳಲ್ಲಿ ನಾಟಕಗಳಲ್ಲದೆ ಮಾಟಮಂತ್ರಗಳಲ್ಲಿ, ಧಾರ್ಮಿಕ ಕಾರ್ಯಗಳಲ್ಲಿ, ಸುಗ್ಗಿಯ ಕುಣಿತ ಮುಂತಾದವುಗಳಲ್ಲಿ ಭಯ–ಕುತೂಹಲ ಆಶ್ಚರ್ಯಗಳನ್ನುಂಟುಮಾಡುವ ಉದ್ದೇಶದಿಂದ ಮುಖವಾಡಗಳನ್ನು ಬಳಸಲಾಗುತ್ತಿತ್ತು. ಚೀನ, ಜಪಾನ, ಇಂಡೋನೇಶಿಯ, ಭಾರತಗಳಲ್ಲಿ ಇವುಗಳ ಉಪಯೋಗ ಕಂಡುಬರುತ್ತದೆ. ಅಷ್ಟೇ ಏಕೆ, ಈಗಲೂ ನಮ್ಮ ದಕ್ಷಿಣ ಕನ್ನಡ ಜಿಲ್ಲೆಯ ಕೆಲ ಪೂಜೆಗಳಲ್ಲಿ, ಹಾಗೂ ಬಯಲುನಾಡಿನ ಬೇರೇ ದೇವರ ಕುಣಿತಗಳಲ್ಲಿಯೂ ಮುಖವಾಡಗಳನ್ನು ನಾವು ಕಾಣುತ್ತೇವೆ.

ಜಪಾನಿನ ಮುಖವಾಡಗಳು ಸಂಖ್ಯೆ ಹಾಗೂ ವೈವಿಧ್ಯಗಳಲ್ಲಿ ಬಹುತರವಾಗಿವೆ. ಇಲ್ಲಿ ಕೂಡ ಮುಖವಾಡಗಳ ಕಲ್ಪನೆ ಬಂದದ್ದು ನಾಟಕದ ಉದ್ದೇಶದಿಂದಲೇ. ನೃತ್ಯನಾಟಕಗಳಾದ ‘ಕಾಗುರಾ’ ಮುಂತಾದವುಗಳಲ್ಲಿ ಪಾತ್ರಕ್ಕೆ ತಕ್ಕಂಥ ಸಾಂಕೇತಿಕ ಮುಖವಾಡಗಳು ಬಳಸಲ್ಪಡುತ್ತವೆ, ನಮ್ಮ ಯಕ್ಷಗಾನದ ಪಾತ್ರಗಳಿರುವ ವಿಶಿಷ್ಟ ತಲೆಯುಡುಗೆಗಳ ಹಾಗೆ. ಈ ಮುಖವಾಡಗಳನ್ನು ಹಾಕಿಕೊಂಡು ಬಿದಿರಿನ ಕೊಳಲು ಹಾಗೂ ತಮ್ಮಟೆಗಳ ಲಯಕ್ಕೆ ಸರಿಯಾಗಿ ಹೆಜ್ಜೆ ಇಕ್ಕಿ ನರ್ತಿಸುತ್ತ ಇಷ್ಟ ದೇವ

ತೆಗಳನ್ನು ಆರಾಧಿಸುತ್ತಿದ್ದರು. ಈ ಉದ್ದೇಶಕ್ಕಾಗಿ ಬಳಸುವ ಮುಖವಾಡಗಳಿಗೆ 'ಕಾಗುರಾ' ಮುಖವಾಡಗಳೆಂದೇ ಹೆಸರು.

ಹೀಗೆ ಪ್ರಾಚೀನ ಕಾಲದಿಂದ ಜಪಾನಿನಲ್ಲಿ ಈ ರೀತಿಯ ಮುಖವಾಡಗಳನ್ನು ತಯಾರಿಸುತ್ತ ಬಂದಿದ್ದಾರೆ. ಎಡೊ ಆಳ್ವಿಕೆಯಲ್ಲಿ (೧೬೦೩–೧೮೬೭) ಚಿಕ್ಕ ಮುಖವಾಡಗಳನ್ನು ಮಕ್ಕಳಿಗೆ ಆಡಲು ಆಟಿಕೆ ರೂಪದಲ್ಲಿ ತಯಾರಿಸಲು ಆರಂಭವಾಯಿತು. ಅಲ್ಲದೆ ಇವುಗಳನ್ನು ಬೌದ್ಧ ದೇವಾಲಯ ಮತ್ತು ಶಿಂಟೊ ಸ್ಮಾರಕಗಳಲ್ಲಿ ಸೌಭಾಗ್ಯದ ಸಂಕೇತವೆಂದು ಪರಿಗಣಿಸಲಾಗುತ್ತಿತ್ತು. ಆದ್ದರಿಂದ ಇವುಗಳ ಮಾರಾಟವೊಂದು ದೊಡ್ಡ ವ್ಯವಹಾರವಾಗಿಯೇ ಪರಿಣಮಿಸಿತು. ಇವುಗಳಲ್ಲಿ ದುಷ್ಟಶಕ್ತಿಗಳ, ಉದ್ದ ಮೂಗಿನ ಪ್ರೇತಗಳ, ರಕ್ಕಸಿಯರ ಮುಖವಾಡಗಳಲ್ಲದೆ ಎಬಿಸೊ ಮತ್ತು ಡೈಕೋಕು (ಇವರಿಬ್ಬರೂ ಸಂತಸ–ಸೌಖ್ಯಗಳನ್ನು ದಯಪಾಲಿಸುವ ಏಳು ದೇವತೆಗಳ ಪೈಕಿ) ಹಾಗೂ ಮಂಗ ಮತ್ತು ನರಿಗಳ ಮುಖವಾಡಗಳಿಗೂ ಸಾಕಷ್ಟು ಬೇಡಿಕೆಯಿತ್ತು.

ಕಟ್ಟಿಗೆಯಲ್ಲಿ ಕೊರೆದ ಹಾಗೂ ಕಾಗದದಿಂದ ಮಾಡಿದ ಮುಖವಾಡಗಳು ಸಾಮಾನ್ಯವಾಗಿ ನೋಡಸಿಕ್ಕುತ್ತವೆ. ತೈಶೋ ಆಳ್ವಿಕೆಯಲ್ಲಿ (೧೯೧೨–೧೯೨೫) ಮಾತ್ರ ಕಟ್ಟಿಗೆಯಿಂದ ಮಾಡಿದ ಮುಖವಾಡಗಳು ಜಾನಪದ ಕಲೆಯಲ್ಲಿ ಮಹತ್ವ ಕಳೆದುಕೊಂಡವು. ಅದಕ್ಕೆ ಕಾರಣವೆಂದರೆ ಅವು ಕಾಗದದಿಂದ ಮಾಡಿದವುಗಳಿಗಿಂತ ಭಾರವಾಗಿರುವುದು. ಈಗ ಹೆಚ್ಚಾಗಿ ಎಲ್ಲ ಮುಖವಾಡಗಳೂ ಕಾಗದವೇ. ಇವುಗಳ ತಯಾರಿಕೆ ಬಹು ಕೌಶಲದಿಂದ ಕೂಡಿದ್ದು. ಜಪಾನಿ ಕಾಗದವನ್ನು ಕಟ್ಟಿಗೆಯ ಮೌಲ್ಡಿನ ಮೇಲೆ ಒಂದರ ಮೇಲೊಂದು ಅಂಟಿಸಿ ನಿಶ್ಚಿತ ದಪ್ಪಕ್ಕೆ ಬರುವವರೆಗೆ ಭಾರ ಹಾಕುವರು. ನಂತರ ಬಿಸಿಲಿಗಿಟ್ಟು ಒಣಗಲು ಬಿಡುವರು. ಅದು ಒಣಗಿ ಮೌಲ್ಡಿನಿಂದ ಬೇರ್ಪಟ್ಟಾಗ ಸಿಂಪೆ (ಕಪ್ಪೆ ಚಿಪ್ಪು) ಹಾಗು ಅಂಟಿನಲ್ಲಿ ತಯಾರಿಸಿದ ಬಿಳಿ ದ್ರವವನ್ನು ಒರೆಸುವರು. ನಂತರ ಬೇಕಾದ ಬಣ್ಣಗಳಿಂದ ಅಲಂಕರಿಸುವರು.

ಜಪಾನಿನಲ್ಲಿ ಕಾಗದ ತಯಾರಿಕೆ ಎಲ್ಲೆಲ್ಲಿ ನಡೆಯುತ್ತದೋ ಅಲ್ಲೇ ಈ ಮುಖವಾಡಗಳೂ ತಯಾರಿಸಲ್ಪಡುತ್ತವೆ. ಅಲ್ಲದೇ ಈ ಕಲೆಯಲ್ಲಿ ಹೆಚ್ಚು ನಿಷ್ಣಾತರಾದವರು ಕೆಳ ದರ್ಜೆಯ ಸಮುರಾಯ್ ಯೋಧರು.

ಈ ಮುಖವಾಡಗಳ ಅದ್ಭುತ ತಯಾರಿಕೆಗಳು, ಆ ವರ್ಣ ಸಂಯೋಜನೆ, ಆಕಾರ ವೈವಿಧ್ಯಗಳು ನಮ್ಮನ್ನು ಅಚ್ಚರಿಗೀಡುಮಾಡುತ್ತವೆ.

ಕೋರಿಯಾಮಾ ಫ್ಯುಕುಶಿಮಾದ ಬಳಿಯಿರುವ ತಾಕಾಶಿಬಾ ಹಳ್ಳಿಯಲ್ಲಿ ನಾಲ್ಕುನೂರು ವರ್ಷಗಳಷ್ಟು ಹಳೆಯದಾದ ಮಿಹಾರು ಮುಖವಾಡಗಳನ್ನು ತಯಾರಿಸುವ ಪರಂಪರಾಗತ ಕುಟುಂಬವೊಂದಿದೆ. ಯೋಶಿನೋಬು ಹಾಶಿಮೋಟೋ ಎಂಬಾತ ೧೮ ನೆಯ ತಲೆಮಾರಿನವ. ಈತ ಮುಖವಾಡಗಳ ತಯಾರಿಕೆಯಲ್ಲಿ ಸಿದ್ಧಹಸ್ತ.

## ಪ್ರಮುಖ ಮುಖವಾಡಗಳು

೧ ಟೆಂಗು (ಉದ್ದ ಮೂಗಿನ ಪ್ರೇತ)
೨ ಮಾಯೊಕೆ
೩ ಕಿಟ್ಸೂನ್
೪ ಓಕಿನಾ
೫ ಹಯೋಟೋಕೋ
೬ ಕಾರಾಸು ಟೆಂಗು
೭ ಎಬಿಸೂ
೮ ಟೊಟೊರಿ
೯ ಸಾಗಾ
೧೦ ಟೋಸಾ

ಇವಲ್ಲದೆ ಜಪಾನಿನಲ್ಲಿ ಸುಮಾರು ೬೦೦ಕ್ಕೂ ಹೆಚ್ಚು ಮಾದರಿಯ ಮುಖವಾಡಗಳನ್ನು ತಯಾರಿಸುವ ಹಾಗೂ ಮಾರಾಟ ಮಾಡುವ ಅಂಗಡಿಗಳು ಇವೆ. ಈ ಅಂಗಡಿಗಳ ಹೊರಗೆ ಒಣಗಲು ಇಟ್ಟ ಬಿಳಿ ಮುಖವಾಡಗಳು ಪಕ್ಕದಲ್ಲೇ ಬಣ್ಣಗಳನ್ನು ಅರ್ಧಂಬರ್ಧ ಬಳಿದ ಹಾಗೂ ಪೂರ್ತಿಯಾಗಿ ಸಿದ್ಧಪಡಿಸಿದ ಮುಖವಾಡಗಳು ಕಾಣಸಿಗುತ್ತವೆ. ಅಲ್ಲದೆ ಈ ಮುಖವಾಡಗಳ ರಫ್ತು ಒಂದು ಉದ್ಯೋಗವಾಗಿ ಬೆಳೆದಿರುವಂತೆಯೇ ಜಪಾನಿನ ಮುಖವಾಡ ಕಲೆಯು ಜಗತ್ತಿನ ಇತರ ದೇಶಗಳಲ್ಲೂ ಪರಿಚಿತವಾದಂತಾಗಿದೆ. ★



ಓಹ್." ಆಕೆ ಉದ್ಗರಿಸುತ್ತಾಳೆ. "ನೀವು ಸಿಕ್ಕಿಂನವರು." ನಾನು ಸುಮ್ಮನಾಗುತ್ತೇನೆ. ಅವರಿಂದ ಪುಕ್ಕಟೆ ಡ್ರಿಂಕ್ ದೊರೆಯುತ್ತೆ. ಅವರಿಂದ ಅದಕ್ಕಿಂತ ಹೆಚ್ಚು ಕೇಳಲು ಸಾಧ್ಯವಿಲ್ಲವೆಂದು ನನಗೆ ಹೇಗೋ ಅರಿವಾಗುತ್ತದೆ. ನಾನು ಅವರ ಮಾರ್ಗದರ್ಶನ ಕೇಳುತ್ತೇನೆ. "ನಗರದ ಕೆಲವು ಭಾಗಗಳಲ್ಲಿ ಭದ್ರತೆ ಇಲ್ಲವೆಂದು ಕೇಳಿದ್ದೇನೆ. ಅಂತಹ ಭಾಗಗಳು ಯಾವುವೆಂದು ಹೇಳಬಲ್ಲಿರಾ?" ನಾನು ನನ್ನ ಮ್ಯಾಪ್ ಹರಡಿ ಬಾಲ್ ಪಾಯಿಂಟ್ ಪೆನ್ ಹೊರತೆಗೆಯುತ್ತೇನೆ.

ಆತ ಬುದ್ಧಿವಾತೇ ಮೈವೆತ್ತಂತೆ ವರ್ತಿಸುತ್ತಾನೆ. ನನ್ನ ಪೆನ್ ತೆಗೆದುಕೊಂಡು ಮ್ಯಾಪ್ ಮೇಲೆ ಗುರುತು ಹಾಕುತ್ತಾನೆ. "ಸೆಂಟ್ರಲ್ ಪಾರ್ಕ, ಹಾರ್ಲೆಂ ಸ್ಪಾನಿಷ್ ಹಾರ್ಲೆಂ ಕೂಡ" ಪ್ಯುರ್ಟೋರಿಕನ್ಸ್, ಅಮಲು ಔಷಧ ಚಟದವರು, ಸ್ತ್ರೀಯರು ಆತನ ಪತ್ನಿ ಇನ್ನು ಕೆಲವು ಹೆಸರು ಸೇರಿಸುತ್ತಾಳೆ: "ನೀಡ್ಲ್ ಪಾರ್ಕ್, ಅಪ್ಪರ್ ಬ್ರಾಡವೇ, ಬೆಡ್‌ರ್ಡ್ ಸ್ಟೂವೆಸೆಂಟ್" ಮ್ಯಾಪ್ ಮೇಲೆಲ್ಲ ಗುರುತುಗಳೇ ಹರಡುವ ವರೆಗೂ ಇದು ಸಾಗುತ್ತದೆ. "ಗ್ರಿನ್‌ವಿಚ್ ಹೇಗೆ?" ನಾನು ಕೇಳುತ್ತೇನೆ. "ಈ ಊರಿನ ಬಗ್ಗೆ ಸಾಕಷ್ಟು ಕೇಳಿದ್ದೇನೆ."

"ಹಿಪ್ಪಿಗಳು, ಅಗ್ಗದ ಸ್ತ್ರೀಯರು, ಪೂರ್ವ ಭಾಗದಲ್ಲಿ ಕಳೆದ ವರ್ಷ ಒಂದು ಕೊಲೆ ಕೂಡ ಆಗಿತ್ತು" ಆ ಜಾಗದ ಮೇಲೆ ಆತ ದೊಡ್ಡ ಗುರುತು ಹಾಕುತ್ತಾನೆ.

ನನ್ನ ಮುಖದ ಮೇಲೆ ಕಂಡು ಬಂದ ಕಳವಳವನ್ನು ಆಕೆ ಗಮನಿಸುತ್ತಾಳೆ. "ಜಾಗ ಹಾಗೂ ಹೊತ್ತು ಕೂಡ ಮುಖ್ಯ. ಎಲ್ಲ ಜಾಗವೂ ಹಗಲಲ್ಲಿ ತೊಂದರೆ ಇಲ್ಲದ ಜಾಗವೇ ಎಂದು ನನ್ನ ಭಾವನೆ. ಕತ್ತಲಾದ ನಂತರ ಹೆಚ್ಚಿನ ಕಡೆ ಅಪಾಯ. ಟೈಂಸ್ ಸ್ಕ್ವೇರ್‌ನಲ್ಲೇ ಮಧ್ಯರಾತ್ರಿಯ ನಂತರ ಏನೆಲ್ಲ ನಡೆಯುತ್ತೆ ಅನ್ನುತ್ತಾರೆ ಗೊತ್ತಾ?"

ಅವರು ತಮ್ಮ ವಾಚುಗಳ ಕಡೆಗೆ ನೋಡುತ್ತಾರೆ. ನಾವು ಕೈ ಕುಲುಕುತ್ತೇವೆ. "ನೀವು ಸಿಕ್ಕಿದ್ದು ಉಪಕಾರವಾಯ್ತು." ನನ್ನ ಮಾತಿನಲ್ಲಿ ಅವರಿಗೆ ಅರಿವಾದುದಕ್ಕಿಂತ ಹೆಚ್ಚಿನ ಸತ್ಯವಿತ್ತು. ಹೌದು ಸ್ಟೀಕ್ ಎನ್ನುತ್ತೇನೆ. ಚಿಲ್ಲರೆ ಟಿಪ್ ಬಿಡುತ್ತೇನೆ. ನನಗೆ ನೀಡಲಾದ ಮೊತ್ತದಲ್ಲೇ ದಿನ ಮುಗಿಸಿದ್ದೇನೆ. ನಿಜಕ್ಕೂ ಇದು ಮಜಾವಾಗಿತ್ತೆ?

ನಾನು ನನ್ನ ಹೋಟೇಲಿಗೆ ವಾಪಸು ನಡೆಯುತ್ತೇನೆ. ನಾನು ಖರೀದಿ ಮಾಡಿದ ಪುಸ್ತಕದ ಪುಟಗಳನ್ನು ತಿರುವಿ ಹಾಕುತ್ತೇನೆ. ಜಲಕನ್ಯೆಯರ ಕುರಿತು ಕನಸು ಕಾಣುತ್ತ ರಾತ್ರಿ ಕಳೆಯುತ್ತೇನೆ. ಇದಕ್ಕೆ ೨ ಡಾಲರ್ ಹೆಚ್ಚಾಯಿತೆಂದು ಯಾರೂ ಹೇಳಲು ಸಾಧ್ಯವಿಲ್ಲ.

ಎರಡನೇ ದಿನ ಬೆಳಗಿನಜಾವ ಮೊದಲಿನ ದಿನದಂತೆಯೇ ಆರಂಭ. ನಾನು ಅದೇನು ನೋಡಬೇಕು, ಎಲ್ಲಿ ಊಟ ಮಾಡಬೇಕು ಮತ್ತು ಎಲ್ಲಿ ಕುಡೀಬೇಕು ಅನ್ನೋದರ ಕಾರ್ಯಕ್ರಮ ಸಿದ್ಧಪಡಿಸುತ್ತೇನೆ. ವಿನಾಕಾರಣ ಹಣ ಖರ್ಚುಮಾಡ

ಲಾರೆ. ಟೆಲಿಫೋನ್ ಕೂಡ ಮಾಡೋದಿಲ್ಲ. ಅದಕ್ಕೂ ಹಣ ಬೇಕಲ್ಲ. ಪತ್ರಿಕೆ ಖರೀದಿ ಮಾಡೋದಿಲ್ಲ. ಲಾಬಿಯಲ್ಲಿ ಸಾಕಷ್ಟು ಬಿದ್ದುಕೊಂಡಿರುತ್ತವೆ. ನಾಷ್ಟಾ ಕಡಿಮೆ ಮಾಡ್ತೇನೆ. ಉಳಿದುದರ ಮಟ್ಟಿಗೆ "ಬಜೆಟ್ಟಿಗೆ ಬೆಂಕಿ ಬಿತ್ತು" ನಾನು ಮಜಾ ಮಾಡಿಯೇ ನೋಡುತ್ತೇನೆ.

ಮೊದಲು ಮೆಟ್ರೊಪಾಲಿಟನ್ ಮ್ಯೂಸಿಯಂ ಆಫ್ ಆರ್ಟ್. ನಂತರ ಶಕ್ತಿ ಉಳಿದರೆ ಗುಗೆನ್‌ಹೀಂ. ಮ್ಯೂಸಿಯಂ ಕ್ಯಾಫಿಟೇರಿಯಾದಲ್ಲೇ ತಿಂಡಿ. ನಂತರ ಎಂಪಾಯರ್ ಸ್ಟೇಟ್ ಬಿಲ್ಡಿಂಗ್: ಒಂದು ಸಿನಿಮಾ. ಕೊನೆಗೆ ಗ್ರೀನ್‌ವಿಚ್. ಈ ಊರಿನಲ್ಲಿ ಊಟ ತಿಂಡಿ ಮತ್ತು ದೈಹಿಕ ಸುಖ ಅಗ್ಗವೆಂದು ಕೇಳಿದ್ದೇನೆ.

ನಾಷ್ಟಾದ ವೇಳೆ ನು ಸಬ್‌ವೇ ಮ್ಯಾಪ್ ಪರಿಶೀಲಿಸುತ್ತೇನೆ. ಅರ್ಥವೇ ಆಗುತ್ತಿಲ್ಲ. ಅಲ್ಲದೆ ಟಿಕೆಟ್‌ಗೆ ಬೆಲೆ ಎಷ್ಟು, ಎಲ್ಲಿ ಖರೀದಿ ಮಾಡಬೇಕು ಎಂಬುದೂ ಗೊತ್ತಾಗುತ್ತಿಲ್ಲ. ಆದರೂ ಕೂಡ, ಪ್ರಯತ್ನ ಮಾಡುವುದು ಉತ್ತಮ. ನಾಷ್ಟಾದ ನಂತರ ನಾನು ೪೨ ನೇ ಸ್ಟ್ರೀಟ್ ಸ್ಟೇಷನ್‌ಗೆ ಹೋಗುತ್ತೇನೆ. ಭಾರೀ ಜನದಟ್ಟಣೆ ಕೌಂಟರುಗಳ ಮುಂದೆ ಉದ್ದನೆಯ ಕ್ಯೂಗಳು. ಎಲ್ಲ ಬಾಗಿಲುಗಳಲ್ಲೂ ಸಾವಿರಾರು ಜನ ತುರ್ತಿನಿಂದ ಒಳಗೆ ಹೊರಗೆ ಓಡಾಡುತ್ತಿದ್ದಾರೆ. ಇದು ಹಗಲಲ್ಲೆ ಕರಾಳ ಕನಸು. ನಾನು ಸ್ಟೇಷನ್ನಿನಿಂದ ಹೊರಬರುತ್ತೇನೆ. ನಾನು ಎಲ್ಲಿದ್ದೇನೆಂದು ತಿಳಿಯಲು ಸ್ವಲ್ಪ ಹೊತ್ತಾಗುತ್ತದೆ. ಬಸ್‌ಮ್ಯಾಪ್ ಹೊರ ತೆಗೆಯುತ್ತೇನೆ. ಅದು ಕೂಡ ಸಬ್‌ವೇ ಮ್ಯಾಪನಷ್ಟೇ ನಿರರ್ಥಕ. ಬಸ್ಸುಗಳು ಬಂದು ಮಾಡಿದ ಕೋಶಗಳಂತೆ ಬರುತ್ತವೆ. ಸರಕ್ಕನೆ ಬಾಗಿಲು ತೆಗೆದು ಜನರನ್ನು ಹೊರ ಹಾಕುತ್ತವೆ; ಒಳಗೆ ಎಳೆದುಕೊಳ್ಳುತ್ತವೆ; ನನಗೆ ಗೊತ್ತಿರದ ಗುರಿ ಎಡೆಗೆ ಸಾಗುತ್ತವೆ. ಮೆಟ್ರೊಪಾಲಿಟನ್‌ಗೆ ನಾನು ಯಾವ ಬಸ್ ಹತ್ತಬೇಕು, ಟಿಕೆಟ್ ಎಲ್ಲಿ ಖರೀದಿ ಮಾಡಬೇಕು, ಎಲ್ಲಿ ಇಳೀಬೇಕು–ಇವೆಲ್ಲವನ್ನು ತಿಳಿಸಿ ಹೇಳಲು ಯಾರೂ ಇಲ್ಲ. ತಾಳ್ಮೆ ಇಲ್ಲದೆ ಓಡಾಡುವವರೊಂದಿಗೆ ಇಂತಹ ಪ್ರಶ್ನೆ ಕೇಳಲು, ಅವರ ದೃಷ್ಟಿಯಲ್ಲಿ ಮುಕ್ಕನಂತೆ ಕಾಣಲು ನನಗೆ ಸಂಕೋಚ. ನಡೆದೇ ಹೋದರೆ ಎಲ್ಲವನ್ನು ನೋಡಬಹುದು.

ಸಿಟಿ ಮ್ಯಾಪ್ ನನಗೆ ಮೆಟ್ರೊಪಾಲಿಟನ್‌ಗೆ ಮಾರ್ಗದರ್ಶನ ಮಾಡುತ್ತದೆ. ನಲವತ್ತೈದು ಮಿನಿಟು ಜೋರಾಗಿ ನಡೆದ ನಂತರ ನನಗೆ ಉಲ್ಲಾಸ ಬಂದಂತಾಗುತ್ತದೆ. ರೆಂಬ್ರಾಂಟ್, ವಾನ್ ಗಾಘ್, ಗಾಗಿನ್, ಪಿಕಾಸೋ ಮುಂತಾದವರ ಕೃತಿಗಳನ್ನು ಒಂದು ತಾಸು ಅವಲೋಕಿಸಿದ ನಂತರ ನನಗೆ ಸಂಸ್ಕೃತಿಯ ಅರಿವಾಗುತ್ತದೆ. ನನ್ನ ಕುಟುಂಬದವರಿಗೆ ಕಳುಹಿಸಲು ಪಿಕ್ಚರ್ ಪೋಸ್ಟ್ ಕಾರ್ಡ ಖರೀದಿ ಮಾಡುತ್ತೇನೆ. ಗುಗೆನ್‌ಹೀಂ ದಾಟಿ ಕ್ಯಾಫಿಟೇರಿಯಾದಲ್ಲಿ ಒಂದು ತಾಸು ಉಲ್ಲಾಸದಿಂದಿರುತ್ತೇನೆ. ಮುಂದಿನ ಕಾರ್ಯಕ್ರಮಕ್ಕೆ ಅಣಿಯಾಗುತ್ತೇನೆ.

ಎಂಪಾಯರ್ ಸ್ಟೇಟ್ ಬಿಲ್ಡಿಂಗ್‌ಗೆ ಒಂದು ಗುಣವಿದೆ. ಅದನ್ನು ಪತ್ತೆ ಮಾಡುವುದು ಕಷ್ಟವಲ್ಲ. ನಲವತ್ತು ಮಿನಿಟು ನಡೆದಾಗ ನಾನು ಈ ಕಟ್ಟಡದ ಹತ್ತಿರಕ್ಕೆ ಬಂದಿರುತ್ತೇನೆ. ವೀಕ್ಷಣಾ ಕೇಂದ್ರಕ್ಕೆ ಟಿಕೆಟ್ ಖರೀದಿ ಮಾಡುತ್ತೇನೆ. ನನ್ನನ್ನು ನೇರವಾಗಿ ಮೇಲಕ್ಕೆ ಒಯ್ಯಲಾಗುತ್ತದೆ.

ಅಪರಾಹ್ನ ಆಹ್ಲಾದಕರವಾಗಿತ್ತು. ನನ್ನ ಕೆಳಗೆ ನ್ಯೂಯಾರ್ಕ್ ಹಬ್ಬಿದೆ. ವಾಹನಗಳ ಸದ್ದು ಅಸ್ಪಷ್ಟ. ಹಡ್ಸನ್ ನದಿಯಲ್ಲಿ ದೋಣಿಯೊಂದು ಸದ್ದುಮಾಡಿಕೊಂಡು ವಿಶಾಲ ಸಮುದ್ರದೆಡೆಗೆ ಧಾವಿಸುತ್ತಿದೆ. ಟ್ಯಾಕ್ಸಿ ಡ್ರೈವರ ಹೇಳಿದ್ದಂತೆ ಗಗನಚುಂಬಿ ಕಟ್ಟಡದಿಂದ ನ್ಯೂಯಾರ್ಕ್ ನೋಡುವುದೆಂದರೆ ಅತಿ ಅಗ್ಗದ ಸುಲಭ ವಿಧಾನ. ದ್ವೀಪದ ಕಟ್ಟಡಗಳು ಒಳನಾಡು "ಸ್ಟಾಚ್ಯೂ ಆಫ್ ಲಿಬರ್ಟಿ" ಅದರ ಹಿಂದೆ ಸಮುದ್ರ ಎಲ್ಲವೂ ಕಾಣುತ್ತದೆ.

ನಗರವನ್ನು ನೋಡಲು ಸಾಧ್ಯವಾದಷ್ಟು ನೋಡುತ್ತೇನೆ. ವಿವಿಧ ಭಾಷೆ ಕೇಳುತ್ತದೆ. ಕೆಲವು ಭಾರತೀಯರೊಂದಿಗೆ ಮಾತಾಡುತ್ತೇನೆ. ಅವರು ಸಜ್ಜನರಾಗಿಯೇ ಕಾಣುತ್ತಾರೆ. ಆದರೆ, ಇಲ್ಲಿ ಎಲ್ಲದರ ಬೆಲೆಯೂ ಹೆಚ್ಚೆಂದು ಹೇಳಿದಾಗ, ಅವರ ಮುಖದಲ್ಲಿ ಸಂದೇಹ ಕಾಣುತ್ತದೆ. ಅವಸರವಸರದಿಂದಲೇ "ನಮಸ್ತೇ" ಹೇಳಿ ಹೊರಡುತ್ತಾರೆ.

ಎಂಪಾಯರ್ ಸ್ಟೇಟ್ ಬಿಲ್ಡಿಂಗ್‌ನಿಂದ ನೋಡುವುದಲ್ಲದೆ ಮತ್ತೇನೂ ಮಾಡಲೂ ಅವಕಾಶವಿಲ್ಲ.

ಕೂತು ವಿಶ್ರಾಂತಿ ಪಡೆಯಲೂ ಜಾಗವಿಲ್ಲ. ಈ ಮಹಾನಗರದಲ್ಲಿ ಚಳಿಗಾಲದ ಕೆಲವು ತಾಸುಗಳಾದರೂ ಪುಕ್ಕಟೆಯಾಗಿ ಸುಮ್ಮನಿರಲು ಅವಕಾಶವಾದರೂ ಎಲ್ಲಿ?

## ಅಪ್ಸರೆಯ ಕಥೆ

ನಾನು ಟೈಂಸ್ ಸ್ಕ್ವೇರ್‌ಗೆ ನಡೆಯುತ್ತೇನೆ. ಕೆಲವು ಚಿತ್ರಮಂದಿರಗಳ ಟಿಕೆಟ್ ದರವೇನೆಂದು ನೋಡುತ್ತೇನೆ. ಡೇನಿಷ್ ಚಿತ್ರವೊಂದನ್ನು ನೋಡಲು ನಿರ್ಧರಿಸುತ್ತೇನೆ. ಅದು ಸಣ್ಣ ಚಿತ್ರ. ನನ್ನ ನಿರ್ಧಾರಕ್ಕೆ ಅದೇ ಕಾರಣ. ಒಂದೂವರೆ ಗಂಟೆಯಲ್ಲಿ ಮುಗಿಯುವ ಚಿತ್ರಕ್ಕೆ ೨-೫೦ ಡಾಲರ್.

ಅದು ಮತ್ತೆ ಅಪ್ಸರೆಯ ಕತೆ. ಆಕೆಯ ಅತ್ತೆಯ ಪ್ರೇಮಿಗಳು ಅವಳನ್ನು ಮೋಹಿಸುವ ಕತೆ. ಎರಡನೇ ಗಂಡು ಆಕೆಯನ್ನು ಬಳಸುವ ಹೊತ್ತಿಗೆ ನನಗೆ ನಿದ್ದೆ ಬರುತ್ತದೆ.

ತನ್ನ ಜಾಗಕ್ಕೆ ಹೋಗಬಯಸುವಾತನೊಬ್ಬ ನನ್ನನ್ನು ಎಬ್ಬಿಸುತ್ತಾನೆ. ದೀಪಗಳು ಉರಿಯುತ್ತಿವೆ. ಸುತ್ತ ನೋಡಿದರೆ, ಹಲವರು ನನ್ನನ್ನು ನೋಡಿ ನಗುತ್ತಾರೆ. ಗೊರಕೆ ಹೊಡೆದು ಎಲ್ಲರ ದೃಷ್ಟಿಯಲ್ಲೂ ನಾನು ನಗೆಪಾಟಲಿಗೀಡಾಗಿದ್ದೇನೆಂದು ಅರಿವಾಯಿತು.

ಗ್ರಿನ್‌ವಿಚ್‌ಗೆ ಹೋಗಲು ಸಿದ್ಧನಾಗಿದ್ದೇನೆ. ಮತ್ತೊಮ್ಮೆ ಜೋರಾಗಿ ನಡೆಯುತ್ತೇನೆ. ನನ್ನ ಚಟ ಬಿಡಿಸಲು, ಬಾಯಾರಿಕೆ ತಣಿಸಲು, ಜೀವನದ ಅತಿ ಆಸೆ ತಣಿಸಲು ಜೋರಾಗಿ ನಡೆಯುತ್ತೇನೆ.

ಮ್ಯಾಪ್ ನೋಡಿ ವಾಷಿಂಗ್ಟನ್ ಸ್ಕ್ವೇರ್ ಕಡೆ ನಡೆಯುತ್ತೇನೆ. ಮಹಿಳೆಯರೇ ಪ್ರಧಾನವಾಗಿರುವ ಸರಿಯಾದ ತಾಣ ಹುಡುಕುತ್ತೇನೆ. ನಾನು ಪ್ರವೇಶಿಸಿದ ಮೊದಲನೆಯದರಲ್ಲಿ ಗಂಡುಗಳೇ ಇದ್ದಾರೆ. ನನ್ನನ್ನು ನೋಡಲು ಕತ್ತು ತಿರುಗಿಸಿದವರ ಮುಖಗಳ ಮೇಲೆ ಮೂಡಿದ ಸ್ವಾಗತದ ಮುಗುಳ್ನಗೆ ನನಗೆ ಕಸಿವಿಸಿ ಉಂಟುಮಾಡಿತು. ಅಲ್ಲಿಂದ ಹೊರಬಿದ್ದೆ.

ಇನ್ನು ಕೆಲವು ಬಾರ್‌ಗಳಿಗೆ ಇಣುಕಿ ಕೊನೆಗೆ ಒಂದು ಬಾರ್ ರೆಸ್ಟೋರಾ ಒಂದಕ್ಕೆ ನುಗ್ಗುತ್ತೇನೆ. ಇಲ್ಲಿ ವಿಚಿತ್ರ ಚಿತ್ರಗಳನ್ನು ಪ್ರದರ್ಶಿಸಲಾಗಿದೆ. ಜನರ ಗುಂಪು ಬಹಳ ಖುಷಿಯಿಂದಿದೆ. ಕರಿಯರೂ ಬಿಳಿಯರೂ ಇದ್ದಾರೆ. ಕೆಲವು ಹೆಣ್ಣುಗಳು ಗಂಡುಗಳಂತೆ ಕಾಣುತ್ತವೆ. ಗಂಡುಗಳು ಹೆಣ್ಣುಗಳಂತೆ ಕಾಣುತ್ತಿವೆ. ವೈಟರ್‌ಗಳು ಗಿರಾಕಿಗಳಂತಿದ್ದಾರೆ. ಗಿರಾಕಿಗಳು ವೈಟರ್‌ಗಳಂತಿದ್ದಾರೆ. ಬೀಯರ ಚೆನ್ನಾಗಿದೆ. ಬ್ಯಾರಲ್‌ಗಳಲ್ಲಿ ಶೇಂಗಾ ತುಂಬಿದ್ದಾರೆ. ತಗೊಂಡು ಜಗಿಯಬಹುದು.

ಅಲ್ಲಿರುವವರ ಬಿಸಿ ನನ್ನನ್ನು ಆವರಿಸುತ್ತದೆ. ಪ್ರತಿಯೊಬ್ಬನಿಗೂ ಪ್ರತಿಯೊಬ್ಬನ ಪರಿಚಯವೂ ಇದ್ದಂತೆ ಭಾಸವಾಗುತ್ತದೆ. ನನಗೆ ಮಾತ್ರ ಸಂಗಾತಿಯೇ ಇಲ್ಲ. ಹುಡುಗಿಯೊಬ್ಬಳು ಏಕಾಂಗಿಯಾಗಿ "ರ್‍ಯಾಟ್" ಎಂಬ ಪತ್ರಿಕೆಯನ್ನು ಓದುತ್ತಿದ್ದಾಳೆ. ನಾನು ಅದೃಷ್ಟ ಪರೀಕ್ಷೆ ಮಾಡಲು ನಿರ್ಧರಿಸುತ್ತೇನೆ. ಅವಳ ಹತ್ತಿರ ಹೋಗಿ ಕೇಳುತ್ತೇನೆ. "ನೀನು ಯಾರಿಗಾದರೂ ಕಾಯುತ್ತಿದ್ದಿಯಾ?" ಎಂದು, ಆಕೆ ಇಲ್ಲವೆನ್ನುತ್ತಾಳೆ. ನಾನು ಆಕೆಗೆ ಡ್ರಿಂಕ್ ನೀಡಿ ಸ್ವಲ್ಪ ಹೊತ್ತು ಮಾತಾಡಬಹುದೇ ಎಂದು ಕೇಳುತ್ತೇನೆ. ಆಕೆ "ಖಂಡಿತ" ಅನ್ನುತ್ತಾಳೆ. ಚಶ್ಮಾ ತೆಗೆಯುತ್ತಾಳೆ. ನನ್ನ ಪುಣ್ಯ ಆಕೆ ಸುಂದರಿ.

ಆಕೆಗೆ ಒಂದು ಬಾರ್ಬನ್ ಹಾಗೂ ನನಗೆ ಸ್ಕಾಚ್ ಹೇಳುತ್ತೇನೆ. ಆಕೆ ತನ್ನ ಬಗ್ಗೆ ಹೇಳುತ್ತಾಳೆ. ಆಕೆಗೆ ವಿವಾಹವಾಗಿದೆ. ಆಕೆ ಎಲ್ಲೂ ಕೆಲಸ ಮಾಡುತ್ತಿಲ್ಲ. ಆಕೆ ಹಳ್ಳಿಯಲ್ಲಿದ್ದಾಳೆ–ಅದೇ ಅವನಿಗೆ ಒಡಿಸಿದೆ. "ಸ್ವಲ್ಪ ಕೃತಕ" ನಾನನ್ನುತ್ತೇನೆ. ಆಕೆ ಹೌದೆನ್ನುತ್ತಾಳೆ. ಆದರೆ ತಾನು ಬೇರೆ ಎಲ್ಲೂ ಇರುವುದಕ್ಕಿಂತ ಇಲ್ಲೆ ಇರಬಹುದಾಗಿ ಹೇಳುತ್ತಾಳೆ. "ಇಲ್ಲಿ ಹೆಚ್ಚು ನಾಗರಿಕತೆ ಇದೆ. ಜೀವನ ದುಬಾರಿಯಲ್ಲ."

ನಾನು ನಮ್ಮಿಬ್ಬರಿಗೂ ಇನ್ನು ಒಂದೊಂದು ಡ್ರಿಂಕ್ ಆರ್ಡರ್ ಮಾಡುತ್ತೇನೆ. ನನ್ನೊಂದಿಗೆ ಹೊರಬರಲು ಇಷ್ಟವೇ ಎಂದು ಕೇಳುತ್ತೇನೆ. ನನ್ನನ್ನು ನೇರವಾಗಿ ದಿಟ್ಟಿಸಿದ ಆಕೆ, ಬೇಡಿಕೆ ಈವೇಳಿಕೆ ಅಷ್ಟಕ್ಕೇನೇ ಸೀಮಿತ ಅನ್ನುತ್ತಾಳೆ.

ನಾವು ರೆಸ್ಟೋರಾಗೆ ಹೋಗುತ್ತೇವೆ. ಹಿಪ್ಪಿಗಳೇ ತುಂಬಿದ್ದಾರೆ. ಇದೇನೂ ಹೇಳಿಸಿಕೊಳ್ಳುವಂತಹ ನಾಜೂಕುತನದ ಆದರೆ ತಿಂಡಿ ಮತ್ತು ವೈನ್ ಚೆನ್ನಾಗಿದೆ. ನಾವು ಮಧ್ಯ ರಾತ್ರಿಯ ವರೆಗೂ



ಅಲ್ಲಿ ತಿಂದು ಕುಡಿದು ಹೊತ್ತು ಕಳೆಯುತ್ತೇವೆ. ನಾನು ಆಕೆಯನ್ನು ಮನೆಗೆ ಬಿಡಲು ಸಾಧ್ಯವೇ ಎಂದು ಆಕೆ ಕೇಳುತ್ತಾಳೆ. ಮಧ್ಯರಾತ್ರಿ ವೇಳೆ ನಡೆದು ಹೋಗಲು ಆಕೆ ಹಿಂಜರಿಯುತ್ತಾಳೆ. ನಾನು ಬಿಲ್ ತೆರುತ್ತೇನೆ. ದುಡ್ಡಿನ ಬಗ್ಗೆ ಕಾಳಜಿ ತೋರಿಸುತ್ತಿಲ್ಲ.

ಟ್ಯಾಕ್ಸಿ ಹತ್ತಿ ನಾವು ಹೊರಡುತ್ತೇವೆ. ಆಕೆಯನ್ನು ಆಕೆಯ ಮನೆ ಮುಂದೆ ಡ್ರಾಪ್ ಮಾಡುತ್ತೇನೆ. ನನ್ನ ಸಭ್ಯತನಕ್ಕಾಗಿ ಆಕೆಯಿಂದ ಬಹುಮಾನ ನನ್ನ ಗಡ್ಡದ ಮೇಲೊಂದು ಮುತ್ತು. "ನಮಗೆ ಪರಸ್ಪರ ಹೆಸರು ಕೂಡಾ ಗೊತ್ತಿಲ್ಲ"– ಆಕೆ ಹರ್ಷದಿಂದಲೇ ಹೇಳುತ್ತಾಳೆ, "ಬಹುಶಃ ಇದು ಬೇಕಾಗಿಯೂ ಇಲ್ಲ. ಥ್ಯಾಂಕ್ಸ್ ಫಾರ್ ಎ ಲೌವ್ಲಿ ಈವಿನಿಂಗ್."

ನಾನು ನನ್ನ ಹೊಟೇಲಿಗೆ ಸಾಗುತ್ತೇನೆ. ಹುಡುಗಿ ಟ್ಯಾಕ್ಸಿಯಲ್ಲಿ ಕೆಲವು ಪತ್ರಿಕೆಗಳನ್ನು ಬಿಟ್ಟಿದ್ದಳು. ನಾನು ಅವುಗಳನ್ನು ರೂಮಿಗೆ ಎತ್ತಿಕೊಂಡು ಹೋಗುತ್ತೇನೆ.

ದಿನದ ಖರ್ಚಿನ ಲೆಕ್ಕ ಆರಂಭಿಸುತ್ತೇನೆ. ೧೫ ಡಾಲರುಗಳಿಗಿಂತಲೂ ಹೆಚ್ಚು ಖರ್ಚಾಗಿದೆ ಮಾತ್ರವಲ್ಲ, ರೂಮ್ ಬಾಡಿಗೆ ಇನ್ನೂ ಕೊಟ್ಟಿಲ್ಲ. ನ್ಯೂಯಾರ್ಕ್‌ನಲ್ಲಿ ೧೭ ಡಾಲರಗಳಲ್ಲಿ ಒಂದು ದಿನ ಕಳೆಯಲು ಸಾಧ್ಯ ಆದರೆ ಮಜಾ ಅಸಾಧ್ಯ. ನಾನು ನನ್ನ ನ್ಯೂಯಾರ್ಕ್ ಭೇಟಿಯ ಅವಧಿಯನ್ನು ಮೊಟಕುಗೊಳಿಸಲು ನಿರ್ಧರಿಸುತ್ತೇನೆ. ಮಂಚದ ಮೇಲೆ ಮಲಗಿಕೊಂಡು "ದಿ ರ್‍ಯಾಟ್" ಫೋಟೋಗಳನ್ನು ತಿರುವಿಹಾಕುತ್ತೇನೆ.

**( ಮುಂದುವರೆಯುವುದು )**

# ರಾಸಾಯನಿಕ ವಿಶ್ವ

ಡಾ. ನಾರಾಯಣ ಮಹಿಷಿ

ನಾವಿರುವ ಜಗತ್ತು ರಾಸಾಯನಿಕ ಮಯ ವಾಗಿದೆ ಎಂದರೆ ಏನೂ ಅತಿಶಯೋಕ್ತಿಯೊಗ ಲಾರದು. ನಾವು ತಿಳಿದಿರುವ ಸಾಮಾನ್ಯ ವಿಚಾರ ವೆಂದರೆ, ಪ್ರಯೋಗಶಾಲೆಯಲ್ಲಿ ಉಪಯೋಗಿಸ ಲ್ಪಡುವಷ್ಟೇ ರಾಸಾಯನಿಕಗಳು, ಉಳಿದವು ಅಲ್ಲ ಎಂದು. ತದ್ವಿರುದ್ಧವಾಗಿ, ನಾವು ಬೆಳಗಿನಿಂದ ರಾತ್ರಿಯವರೆಗೆ ಉಪಯೋಗಿಸುವ ಎಲ್ಲ ವಸ್ತು ಗಳೂ ರಾಸಾಯನಿಕ ವರ್ಗಕ್ಕೆ ಸೇರಿದವು ಎಂಬು ದಾಗಿ ಹೇಳಬಹುದು. ನಾವು ಉಪಯೋಗಿಸುವ ನೀರು, ಎರಡು ಜಲಜನಕ ಅಣುಗಳು ಹಾಗೂ ಒಂದು ಪ್ರಾಣವಾಯುವಿನ ಅಣು ಸೇರಿ ಒಂದು ಜಲಾಣು ತಯಾರಾಗಿರುತ್ತದೆ; ಹಲ್ಲುಜ್ಜಲು ಉಪ ಯೋಗಿಸುವ ಟೂಥ್ ಪೇಸ್ಟ್. ಕುಡಿಯುವ ಕಾಫಿ. ಟೀ ಒಂದೇ ಎರಡೇ, ಎಲ್ಲವೂ ರಾಸಾಯನಿಕ ಮಹತ್ವ ಪಡೆದಂಥವು. ನಾವು ತೊಡುವ ಬಟ್ಟೆ, ತಿನ್ನುವ ಆಹಾರ, ಓದುವ ಪುಸ್ತಕ ಎಲ್ಲವೂ ರಾಸಾಯನಿಕ! ನಮಗೆ ಕಾಯಿಲೆಯಾದಾಗ ತೆಗೆದು ಕೊಳ್ಳುವ ಔಷಧಿಗಳು, ಆರೋಗ್ಯ ಕಾಪಾಡಲು ಬೇಕಾದವುಗಳು ಸಹ ರಾಸಾಯನಿಕ ಕಕ್ಷೆಯಲ್ಲಿಯೇ ಬರುವಂಥವು. ಸಲ್ಫಾ ಸಂಯುಕ್ತಗಳು, ಲಸಿಕೆ ಮತ್ತು ಕೀಟಾಣು ಮೂಲ ಔಷಧ ಇವು ಸಹ ರಾಸಾಯನಿಕಗಳು. ವ್ಯವಸಾಯ ಕ್ಷೇತ್ರದಲ್ಲಿ ಉಪಯೋಗಿಸುವ ರಾಸಾಯನಿಕ ಗೊಬ್ಬರ, ಕ್ರಿಮಿನಾಶಕಗಳು, ಮೂಷಕ ನಾಶಕಗಳು ಎಲ್ಲ ರಾಸಾಯನಿಕ ವರ್ಗಕ್ಕೆ ಸೇರಿದವುಗಳು. ಈ ವರ್ಗಕ್ಕೆ ಯಾವವು ಸೇರಿಲ್ಲ ಎಂಬ ವಸ್ತುಗಳ ಪಟ್ಟಿ ಮಾಡುವುದು ಬಹುಶಃ ಸಾಧ್ಯವೋ ಅಲ್ಲವೋ ಎಂದು ಹೇಳುವದು ಕಷ್ಟ.

ರಾಸಾಯನಿಕಗಳು, ಎಲ್ಲವೂ ರಾಸಾಯನಿಕ 'ಸಂಯುಕ್ತಗಳೇ,' ಎಷ್ಟಿದೆ ಎಂದು ಹೇಳುವದು ಈಗ ಸಾಧ್ಯವಾಗಬಹುದು. ವೈಜ್ಞಾನಿಕ ಕ್ಷೇತ್ರ ಗಳಲ್ಲಿ ಪ್ರತಿಯೊಂದರಲ್ಲೂ ಅನೇಕ ಉದ್ಗ್ರಂಥ ಗಳು ಬಂದಿವೆ, ಬರುತ್ತಲೂ ಇವೆ. ಸಾವಿರಾರು ಸಂಶೋಧನ ಗ್ರಂಥಗಳು ಇವೆಯೆಂದೇ ಜಗತ್ತಿ ನಾದ್ಯಂತ ಸಂಶೋಧನೆ ಸಾಧ್ಯವಾಗಿದೆ. ಇಂಥ ಗ್ರಂಥಗಳು ಇಲ್ಲದೇ ಹೋಗಿದ್ದರೆ ಸಂಶೋಧನೆ ಕೂಪಮಂಡೂಕದ ವಿಶ್ವದಂತೆ ಸಂಕುಚಿತವಾಗು ತ್ತಿತ್ತು. ರಾಸಾಯನಿಕ ಕ್ಷೇತ್ರದಲ್ಲೂ ಒಂದು ಅದ್ಭುತ ಗ್ರಂಥವಿದ್ದು ಅದರಲ್ಲಿ ಜಗತ್ತಿನಾದ್ಯಂತ ತಯಾರಾದ ಎಲ್ಲ ರಾಸಾಯನಿಕಗಳೂ ಹೆಸರಿ- ನೊಂದಿಗೆ ಸಿಗುತ್ತವೆ. ಈ ಗ್ರಂಥದ ಹೆಸರು "ರಾಸಾ ಯನಿಕ ಸಾರ" ( Chemical Abstract ) ೧೯೭೭ರ ನವೆಂಬರ ತಿಂಗಳವರೆಗೆ ಅದರಲ್ಲಿ ಪ್ರಸಿ ದ್ಧವಾದ ರಾಸಾಯನಿಕಗಳ ಸಂಖ್ಯೆ ೪೦,೩೯,೯೦೭ ಗಳಷ್ಟು. ಈ ಬೃಹದ್ ಭಂಡಾರಕ್ಕೆ ಪ್ರತಿವಾರವೂ ೬೦೦೦ ಹೊಸ ರಾಸಾಯನಿಕಗಳು ಬಂದು ಸೇರು ತ್ತವೆ.

ರಾಸಾಯನಿಕಸಾರ ಸೇವಾ ಸಂಸ್ಥೆಯು ೧೯೬೫ ರಿಂದಲೇ ಕಂಪ್ಯೂಟರನ್ನು ಉಪಯೋಗಿಸಿ ಸ್ಪಷ್ಟ ವಾದ ಹೆಸರುಳ್ಳ ಎಲ್ಲ ರಾಸಾಯನಿಕಗಳನ್ನೂ ಕಲೆ ಹಾಕುತ್ತಿದೆ. ಇಂಥ ಸಂಯುಕ್ತಗಳ ಅಣುರಚನೆಯು

ಸಹ ಸ್ಪಷ್ಟವಾಗಿತ್ತು ಎಂಬುದು ಸಹ ಒಂದು ವಿಶೇಷ. ರಾಸಾಯನಿಕ ಸಂಯುಕ್ತಗಳಲ್ಲಿರಬೇಕಾದ ವಿವಿಧ ವರ್ಗಗಳನ್ನು ಸಹ ವಿಂಗಡಿಸಲಾಗಿತ್ತೇ ಎಂಬ ಪ್ರಶ್ನೆಗೆ ಉತ್ತರ ಹೆಚ್ಚು ನಕಾರಾತ್ಮಕವಾಗಿದೆ. ಈ ಸಂಯುಕ್ತಗಳಲ್ಲಿ ಶೇಕಡಾ ೯೭ರಷ್ಟು ಸಾವಯುವ ವರ್ಗಕ್ಕೆ ಸೇರಿದವುಗಳು ಎಂದರೆ ಅವುಗಳ ಪ್ರತಿಯೊಂದು ಅಣುವಿನಲ್ಲೂ ಕೊನೆಯ ಪಕ್ಷ ಒಂದಾದರೂ ಇಂಗಾಲದ ಅಣುವಿದೆ. "ರಾಸಾಯನಿಕ ಸಾರ"ದ ಇನ್ನೊಂದು ಮಹತ್ವದ ಅಂಶವೆಂದರೆ, ರಾಸಾಯನಿಕ ಸಂಯುಕ್ತದ ಪ್ರತಿಯೊಂದು ಅಣುವಿನಲ್ಲಿಯೂ ಒಟ್ಟು ೪೩ ಪರಮಾಣುಗಳಿದ್ದು, ಇವುಗಳಲ್ಲಿ ೨೭ ಜಲಜನಕ ಪರಮಾಣುಗಳಿರುತ್ತವೆ.

ಇಂಥ ದೊಡ್ಡ ಪ್ರಮಾಣದ ರಾಸಾಯನಿಕಗಳಲ್ಲಿ ೩೪ ಲಕ್ಷ ಸಂಯುಕ್ತಗಳು ಸಾವಯುವ ಅಥವಾ ನಿರಾದವಯುವ ವರ್ಗಕ್ಕೆ ಸೇರಿದವುಗಳು. ಇವುಗಳಲ್ಲಿ ಸ್ಪಷ್ಟ ರಾಸಾಯನಿಕ ರಚನೆಗಳಿವೆ ಎಂಬುದೂ ಒಂದು ವಿಶೇಷ. ಇದರಲ್ಲಿಯೇ ಮೂ-ವತ್ತು ಲಕ್ಷ ಸಂಯುಕ್ತಗಳಲ್ಲಿ ಕೊನೆಯ ಪಕ್ಷ ಒಂದಾದರೂ ಚಕ್ರೀಯ ಅಂಶವಿದೆ (Cyclic ring). ಇನ್ನೂ ೨,೫೮,೦೦೦ ಸಂಯುಕ್ತಗಳು "ಕೋಆರ್ಡಿನೇಶನ್" ವರ್ಗಕ್ಕೆ ಸೇರಿದ್ದು ಅವುಗಳ ವಿಂಗಡಣೆಗೆ ಪ್ರತ್ಯೇಕ ವಿಧಾನವನ್ನೇ ಬಳಸಬೇಕಾಗುತ್ತದೆ. ಸುಮಾರು ೫೯,೦೦೦ ಸಾವಯುವ ರಾಸಾಯನಿಕ ಸಂಯುಕ್ತಗಳ ಅಣುರಚನೆ ಅಸ್ಪಷ್ಟವಾಗಿಯೇ ಇದೆ. ಸುಮಾರು ೧೨,೦,೦೦೦ ಸಂಯುಕ್ತಗಳು "ರಾಸಾಯನಿಕ ಸಾರ"ದಲ್ಲಿ ಹೆಸರಿನ ಕೆಳಗೆ ಅಥವಾ ಅಣುರಚನಾ ಹೆಸರಿನ ಕೆಳಗೆ ಸಿಗಬಲ್ಲವಾದರೂ ಅವುಗಳ ಬಗ್ಗೆ ಹೆಚ್ಚು ಮಾಹಿತಿ ಇಲ್ಲದ್ದರಿಂದ ಸಾರ ಸಂಗ್ರಹದಲ್ಲಿ ಕಂಪ್ಯೂಟರ್ ಸಹಾಯದಿಂದ ಅವುಗಳ ಸಂಕಲನ ಅಸಾಧ್ಯವಾಗಿದೆ. ರಾಸಾಯನಿಕ ಸಾರದಲ್ಲಿ ಸುಮಾರು ೭೨,೦೦೦ ಮಿಶ್ರ ಧಾತುಗಳು, ೧೨೦,೦೦೦ ಬಹ್ವಣ ಸಂಯುಕ್ತಗಳು (Polymers) ಮತ್ತು ೧೦,೦೦೦ ಸ್ಪಷ್ಟ ಹೆಸರು ಪಡೆದ ಮಿಶ್ರಣಗಳಿರುತ್ತವೆ. ಆಯಾಮ ಪಡೆದ ಅಣುಗಳೂ ಸಾರ ಸಂಗ್ರಹದಲ್ಲಿವೆ.

ಸಾರ ಸಂಗ್ರಹದಲ್ಲಿ ಹೆಚ್ಚಾಗಿ ಸಂಯುಕ್ತಗಳು ನೈಸರ್ಗಿಕ ಸಂಪನ್ಮೂಲಗಳಿಂದ ಬಂದದ್ದು ಅಥವಾ ವಿಶಿಷ್ಟ ಉದ್ದೇಶಕ್ಕಾಗಿ ಪ್ರಯೋಗಶಾಲೆಯಲ್ಲಿ ತಯಾರು ಮಾಡಿದವುಗಳು. ದಿನಬಳಕೆಯಲ್ಲಿಯ ರಾಸಾಯನಿಕ ಸಂಯುಕ್ತಗಳನ್ನು ಹೇಳುವದು ಒಂದು ಜಟಿಲ ಸಮಸ್ಯೆ; ಕಾರಣ ಉದ್ದಿಮೆಗಳಲ್ಲಿ ಉಪಯೋಗಿಸುವ ಅನೇಕ ರಾಸಾಯನಿಕಗಳಿಗೆ ಬೇರೆ ಬೇರೆ ಹೆಸರುಗಳಿರುತ್ತವೆ. ಈ ಅಸ್ಪಷ್ಟತೆಯನ್ನು ತೆಗೆದುಹಾಕಿ ರಾಸಾಯನಿಕ ರಚನೆಯ ಮೇಲೆ ಆಧರಿಸಿದ ಒಂದು ಸಂಗ್ರಹವನ್ನು ಮಾಡಲು ಅಮೇರಿಕದ ಎನ್. ವಿ. ರೋನಮೆಂಟ್ ಪ್ರೊಟೆಕ್ಶನ್ ಏಜನ್ಸಿಯನ್ನು (EPA) ಕೇಳಿಕೊಳ್ಳಲಾಗಿದೆ. ಈ ಕಾರ್ಯದಲ್ಲಿ ಕಂಪ್ಯೂಟರ್ ಬಳಸಲಾಗುವುದರಿಂದ ಸಂಗ್ರಹ ಹೆಚ್ಚು ಆಧುನಿಕವಾಗಬಹುದೆಂದು ಊಹಿಸಲಾಗಿದೆ. ರಾಸಾಯನಿಕ ಸಾರ ಸೇವಾ ಸಂಸ್ಥೆಯವರು ಹೆಚ್ಚು ಬಳಕೆಯ ೩೩,೦೦೦ ರಾಸಾಯನಿಕಗಳನ್ನು ಈ ಸಂಸ್ಥೆಗೆ ಒಪ್ಪಿಸಿದ್ದು ಅವುಗಳು ಪಡೆದ ೧೮೩,೦೦೦ ಹೆಸರುಗಳಲ್ಲಿ ಒಂದು ಸುವ್ಯವಸ್ಥೆ ತರಲು ಕೋರಿದ್ದಾರೆ. ಇನ್ನೊಂದು ಅಂದಾಜಿನ ಪ್ರಕಾರ ೫೦೦೦೦ ದಿನ ಬಳಕೆಯ ರಾಸಾಯನಿಕ ಸಂಯುಕ್ತಗಳಿವೆ; ಇವುಗಳಲ್ಲಿ ಕ್ರಿಮಿನಾಶಕಗಳು, ಔಷಧಿಗಳು ಹಾಗು ಆಹಾರಕ್ಕೆ ಸೇರಿಸುವ ಸಂಯುಕ್ತಗಳು ಸೇರಿಲ್ಲ. ಅಮೇರಿಕದ FDA ಸಹ ತನ್ನ ಅಂದಾಜನ್ನು ಕೊಟ್ಟಿದ್ದು ಎಲ್ಲ ವಿವರಗಳ ಆಧಾರವ ಮೇಲೆ ದಿನ ಬಳಕೆಯ ರಾಸಾಯನಿಕ ಸಂಯುಕ್ತಗಳ ಸಂಖ್ಯೆ ೬೩,೦೦೦ ಆಗಬಹುದು. ಮನುಷ್ಯನ ಆರೋಗ್ಯದ ಮೇಲೆ ಇಂಥ ಸಂಯುಕ್ತಗಳಿಂದ ಆಗಬಹುದಾದ ಸಾಧಕ-ಬಾಧಕ ಪರಿಣಾಮಗಳನ್ನು ಕಂಡು ಹಿಡಿಯುವ ಯೋಜನೆ ಇದ್ದರೂ ಸಹ ಅದಕ್ಕೆ ಅಂತ್ಯವೇ ಇಲ್ಲದಂತೆ ರಾಸಾಯನಿಕ ವಿಶ್ವ ಬೆಳೆಯುತ್ತಲಿದೆ.

ರಾಸಾಯನಿಕ ಜಗತ್ತಿನ ಜಟಿಲತೆಗೆ ಸಿಕ್ಕಿ ಹಾಕಿಕೊಳ್ಳದೆ ಮನುಷ್ಯ ತನ್ನ ಆರೋಗ್ಯ, ಆಯುಷ್ಯವನ್ನು ಕಾಪಾಡಿಕೊಂಡು ಬರಲು ಸರಳ ಜೀವನವನ್ನು ನಡೆಸಬೇಕಾಗಬಹುದೇನೋ ಎಂಬುವನ್ನು ಕಾಲವೇ ನಿರ್ಧರಿಸಬೇಕು.

# ಜನ್ಮದಿನಾಚರಣೆ: ಚಿತ್ರವಿಚಿತ್ರಗಳು

**ಸಿ. ಜಿ. ಪ್ರಾತಃಕಾಲ**

ಜನ್ಮದಿನಾಚರಣೆಯು ಪದ್ಧತಿ ನಾಗರಿಕತೆಗಳಷ್ಟೇ ಪ್ರಾಚೀನವಾಗಿದೆ. ನಾಗರಿಕತೆಯು ಬೆಳೆದಂತೆಲ್ಲ ದೇಶ, ಜಾತಿ, ಕಾಲಕ್ಕನುಸರಿಸಿ ಜನ್ಮದಿನಾಚರಣೆಯು ಉನ್ನತ ಮಟ್ಟದಲ್ಲಿ ನಡೆದರೂ ಆದಿವಾಸಿಗಳು ಮಾತ್ರ ಇನ್ನೂ ಕೂಪ ಮಂಡೂಕಗಳಾಗಿದ್ದಾರೆ.

ಆದಿವಾಸಿ-ವನವಾಸಿ ಜಾತಿಗಳಲ್ಲಿ ಜನ್ಮದಿವಸದ ಲೆಕ್ಕ ಇಟ್ಟಿರುವದಿಲ್ಲ. ಅವರಲ್ಲಿ ಹೆಚ್ಚಾಗಿ "ಸನ್ ಐವತ್ತರ ಕ್ರಾಂತಿಯ ಕಾಲಕ್ಕೆ ಒಟ್ಟಾರೆ ಹತ್ತು ವರ್ಷ, ಇಲ್ಲವೇ ಐದು ವರ್ಷ, ಐವತ್ತಾರರ ಬರಗಾಲಕ್ಕೆ ಏಳು ವರ್ಷದವನಿದ್ದೆ" ಎಂದೇ ಹೇಳುತ್ತಾರೆ.

ಪ್ರಸಿದ್ಧ ಲೇಖಕ ಹರ್ಬರ್ಟರ ಅಭಿಪ್ರಾಯದಂತೆ ಕಾಂಗೋದ ಆದಿವಾಸಿಗಳಲ್ಲಿ ಜನ್ಮದಿವಸಗಳನ್ನು ಬರೆದಿಡುವ ಪದ್ಧತಿಯಿಲ್ಲ. ಭಾರತದ ಭಿಲ್ಲ. ಕೋಳಿ ಜಾತಿಯ ಜನರು ಜನ್ಮದಿನಾಚರಣೆಯಿಂದ ದೂರ ವಿದ್ದಾರೆ. ಕೆಲ ಆದಿವಾಸಿಗಳಂತೂ ಮನುಷ್ಯರ ವಯಸ್ಸನ್ನು ಗಣಿಸುವದೇ ಅಶುಭವೆಂದು ತಿಳಿಯುತ್ತಾರೆ.

ಮಡಾಗಾಸ್ಕರದ ಜನರು ಶಿಶುಗಳ ಮರಣವನ್ನು ಅಶುಭವೆಂದು ತಿಳಿಯುತ್ತಾರೆ. "ಸಾಕಲವಾ" ಜಾತಿಯವರು ಮಂಗಳವಾರದ ದಿನ ಹುಟ್ಟಿದ ಎಲ್ಲ ಶಿಶುಗಳನ್ನೂ ಕೊಲ್ಲುತ್ತಾರೆ.

ಮಧ್ಯ-ಅಮೇರಿಕದ ಕೆಲ ಜಾತಿಗಳಲ್ಲಿ ಜನ್ಮ ಪತ್ರಿಕೆ ತಯಾರಿಸುವ ಪದ್ಧತಿಯೂ ಬಹು ಪ್ರಾಚೀನಕಾಲದಿಂದಲೂ ನಡೆದುಬಂದಿದೆ.

ಪರ್ಸೀ ಜನರು ಬಾಲಕನ ಜನ್ಮದಿನದ ದಿನನಿಂದಲೇ ನಾಮಕರಣ ಮಾಡುತ್ತಾರೆ. ಚೀನದಲ್ಲಿ ಭಾರತದಂತೆಯೇ ಜನ್ಮ ಮುಹೂರ್ತಕ್ಕೆ ಮಹತ್ವ ಕೊಡಲಾಗುತ್ತದೆ. ೯ ಮತ್ತು ೧೧ ಘಂಟೆಯ ನಡುವೆ ಹುಟ್ಟಿದ ಬಾಲಕರು ಮೊದಲು ಅನೇಕ ಕಷ್ಟಗಳನ್ನನುಭವಿಸಿದರೂ ಮುಂದೆ ಐಶ್ವರ್ಯವಂತರಾಗುತ್ತಾನೆಂದು ತಿಳಿಯುತ್ತಾರೆ.

ಜಪಾನಿನಲ್ಲಿ ಹುಟ್ಟಿದ ಕೂಡಲೇ ಒಂದು ವರ್ಷವೆಂದು ಗಣಿಸುತ್ತಾರೆ, ಮತ್ತು ೬೧ನೇ ಜನ್ಮೋತ್ಸವವನ್ನು ಆಚರಿಸುತ್ತಾರೆ.

ಚೀನಿಯರು ೧೫ ವರ್ಷದ ನಂತರ ಜನ್ಮದಿನಾಚರಣೆ ಮಾಡುತ್ತಾರೆ. ೫೦ರ ನಂತರವಂತೂ ಆನಂದದಿಂದ ಆಚರಿಸುತ್ತಾರೆ. ನಂತರ ೧೦ ವರ್ಷಕ್ಕೊಮ್ಮೆ ಸಾರ್ವಜನಿಕವಾಗಿ ಆಚರಿಸಿ "ದೀರ್ಘಾ-ಯುಷಿ"ಯಾಗು ಎಂದು ಹರಸುತ್ತಾರೆ.

ಬರ್ಮೀಯರು ಜನ್ಮೋತ್ಸವದ ವರ್ಷದಷ್ಟು ಮೇಣಬತ್ತಿಗಳನ್ನು ಉರಿಸುತ್ತಾರೆ.

ಪ್ರಾಚೀನಕಾಲದಲ್ಲಿಯೂ ಜನ್ಮದಿನಾಚರಣೆಯು ರೂಢಿಯಲ್ಲಿತ್ತು. ಇರಾಣದಲ್ಲಿ ಹಜರತ ಮಹ್ಮದ ಮತ್ತು ಹಜರತ ಅಲಿಯ ಜನ್ಮದಿನವನ್ನು ಬಹು ವಿಜೃಂಭಣೆಯಿಂದ ಆಚರಿಸುತ್ತಾರೆ. ಯಹೂದಿ-ಗಳಲ್ಲಿ ೧೩ನೇ ವರ್ಷವನ್ನು ವಿಶೇಷ ಸಂಭ್ರಮದಿಂದ ಆಚರಿಸುತ್ತಾರೆ.

ಪ್ರಾಚೀನ ಸಿರಿಯಾದಲ್ಲಿ ಪ್ರತಿ ತಿಂಗಳೂ ಜನ್ಮದಿನಾಚರಣೆಯ ರೂಢಿ ಇದ್ದಿತು.

"ಮಾವರಿ" ಜಾತಿಗಳಲ್ಲಿ ಹುಟ್ಟಿದ ಕೂಡಲೇ ಹೆಸರನ್ನು ಇಟ್ಟು ಮುಂದೆ ಹಲ್ಲು ಬರಲು ಪ್ರಾರಂಭವಾದೊಡನೆ ಆ ಹೆಸರು ಬದಲಿಸುತ್ತಾರೆ. ಅದನ್ನು ತಾರುಣ್ಯದಲ್ಲಿ ಪುನಃ ಬದಲಿಸಬೇಕು. ವಿವಾಹದ ನಂತರ ಮತ್ತೊಂದು ಹೆಸರು, ನಂತರ ಒಂದು ಮಗುವಿನ ತಂದೆಯಾದಾಗ ಪುನಃ ಬದಲಿಸಬೇಕು. 'ಅಪತ್' ಜಾತಿಗಳಲ್ಲಿ ಪ್ರತಿವರ್ಷವೂ ಹೊಸ ನಾಮಕರಣ ಮಾಡಿಕೊಳ್ಳುತ್ತಾರೆ. ✡

# ಜಾನಪದ ಸಾಹಿತ್ಯದಲ್ಲಿ ಒಕ್ಕಲಿಗ

ಐ. ಎಸ್. ಪಾಳೇದ

ಜಾನಪದ ಸಾಹಿತ್ಯ ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಪ್ರಮುಖ ಸ್ಥಾನ ಪಡೆದಿದೆ. ಅದನ್ನು ಬೇಕಾದವರು ಬೇಕಾದಂತೆ ಸೃಷ್ಟಿ ಮಾಡಬಹುದು. ಸಾಹಿತ್ಯವು ಯಾರೊಬ್ಬರ ಸೊತ್ತೂ ಅಲ್ಲ. ಜಾನ-ಪದ ಸಾಹಿತ್ಯ ಹಳ್ಳಿಯ ಮಣ್ಣಿನ ಮಕ್ಕಳಿಂದಲೇ ಹೆಚ್ಚಾಗಿ ಬೆಳೆದಿದೆ, ಉಳಿದಿದೆ. ಇನ್ನೂ ಉನ್ನತ ಮಟ್ಟಕ್ಕೇರುವದೆಂಬ ಮಾತನ್ನು ಒಪ್ಪಲೇಬೇಕು. ಹಳ್ಳಿಯ ಜೀವನ, ಸಂಸ್ಕೃತಿಯು ಒಂದು ಸಾಗರ. ಹಳ್ಳಿಯ ಜನರಿಗೆ ಹಿಂದಿನಿಂದಲೂ ಜನಪದ ಸಾಹಿ-ತ್ಯದ ಮೇಲೆ ಒಲವಿತ್ತೆಂಬುದು ಕಂಡುಬರುತ್ತದೆ. ಓದು ಬರಹ ಬಾರದವರು ಕಟ್ಟಿದ ಹಾಡುಗಳನ್ನು ಕೇಳಿದಾಗ ನಮಗಾಗುವ ಆನಂದ ಅಮಿತ. ಇದೊಂದು ದೈವದತ್ತ ಕಾಣಿಕೆಯೇ ಹೊರತು ಮತ್ತೇನಲ್ಲ. ಮುದ್ರಿಸಿಟ್ಟ ಗ್ರಂಥಗಳು ಎಷ್ಟೋ ಹಾಳಾಗಿವೆ,ಕೈಗೆ ಸಿಗದೆ ಹೋಗಿವೆ. ಆದರೆ ಜಾನಪದ ನುಡಿ ಮಾತ್ರ ಇಂದು ನಾಡಿನ ಮೂಲೆ ಮೂಲೆಯಲ್ಲಿ ನಾಲಿಗೆಯ ಮೇಲೆ ನಲಿದಾಡುವದನ್ನು ನಾವು ಕಾಣುತ್ತೇವೆ. ಹಳ್ಳಿಗರ ಹಾಡಿನಲ್ಲಿ ಸ್ವಂತಿಕೆಯಿದೆ, ತಿರುಳ್ಗನ್ನಡವಿದೆ, ನೀತಿಯ ನೆಲೆಯಿದೆ, ಸ್ಫೂರ್ತಿಯ ಸೆಲೆಯಿದೆ, ಕಲೆಯಿದೆ, ರಸವಿದೆ, ಉಸಿರಿದೆ. ಅಲ್ಲದೆ ಅವರು ಲಯಬದ್ಧವಾಗಿ ತಮ್ಮ ರಸವಾಣಿಯಲ್ಲಿ ಹಾಡುವುದನ್ನು ಕಾಣುತ್ತೇವೆ. ಜಾನಪದವು ಪಾಮರರ ಉಸಿರಾಗಿದ್ದರೂ ರಸಿಕರಾದವರೆಲ್ಲರೂ ಅದನ್ನು ಕೇಳಿ ದುಃಖ ನೋವುಗಳನ್ನು ದೂರ ಮಾಡಿಕೊಳ್ಳುತ್ತಾರೆ.

ಯಾವ ಜಂಜಾಟಕ್ಕೂ ಸಿಕ್ಕದ ಜಾನಪದ ಸಾಹಿತ್ಯಕ್ಕೆ ಅಲಂಕಾರ, ರಸಗಳ ಭಾರವಿಲ್ಲ. ಸ್ವತಂತ್ರವಾಗಿ, ನಿಸರ್ಗದ ಉಸಿರಾಗಿ, ಪಾಮರರ ಕಲ್ಪವೃಕ್ಷವಾಗಿ ಬೆಳೆದಿದೆ.

ಜಾನಪದ ಸಾಹಿತ್ಯ ಬಾಯಿಯಿಂದ ಬಾಯಿಗೆ ಸಾಗಿಬಂದ ಸಜೀವ ಸಾಹಿತ್ಯ. ಸುಮಾರು ೬ನೆಯ ಶತಮಾನಕ್ಕಾಗಲೇ ಬರಹದ ರೂಪ ತಾಳಿತ್ತೆಂಬುದಕ್ಕೆ ತ್ರಿಪದಿಯಲ್ಲಿ ರಚಿತವಾದ ಬಾದಾಮಿಯ ಶಿಲಾಶಾಸನವೊಂದು ನಿದರ್ಶನ. ಕವಿರಾಜಮಾರ್ಗಕಾರ ನೃಪತುಂಗ, 'ಚದುಪದಿ [illegible] ಕಬಿತೆ [illegible] ಬೆದಂಡೆಯುಂ ಕಾವ್ಯ ಪ್ರಯೋಗ ಪರಿಣತಮತಿಗಳ್ ಎಂದು 'ಬೆಳ್ವಲದ ಮುಕ್ಕ' ರೆನಿಸಿಕೊಂಡ ಜನಪದ ಕವಿಗಳನ್ನು ಶತಮಾನಗಳ ಹಿಂದೆಯೇ ತುಂಬು ಹೃದಯದಿಂದ ಹೊಗಳಿದ್ದಾನೆ.

ಆದರೆ ಕೆಲವು ಜನ ಪಂಡಿತ ಕವಿಗಳು ಜಾನಪದವನ್ನು ಕಾವ್ಯದಲ್ಲಿ ಬಳಸುತ್ತ ಬಂದರೂ ಅದನ್ನು ಸಾಹಿತ್ಯವೆಂದು ಪರಿಗಣಿಸಲಿಲ್ಲ. ಅಷ್ಟೇ ಅಲ್ಲ, ಮಧುರನಂತಹ ಕೆಲವು ಕವಿಗಳು—

ಪಂಡಿತರುಂ ವಿವಿಧ ಜನರ।
ಸಂದಿತರುಂ ಕೇಳತಕ್ಕ ಕೃತಿಯಂ ಕ್ಷಿತಿ-
ಯೊಳ್ ॥
ಕಂಡರ್ ಕೇಳ್ವಡೆ ಗೊರವರ।
ದಂಡೆಗಳುಂ ಬೀದಿವರೆಯ ಬೀರನ
ಕತೆಯೇ॥

ಎಂದು ಅದನ್ನು ಅವಹೇಳನ ಮಾಡಿದ್ದೂ ಉಂಟು. ಕಸ್ತೂರಿ ಹೆಸರು ಕೆಡಿಸಿದರೂ ಸುವಾಸನೆಯನ್ನು ಬೀರುವದು. ಮುತ್ತು ತಿಪ್ಪೆಯಲ್ಲಿ ಬಿದ್ದರೂ ಬೆಳಕನ್ನು ಬೀರುವದು. ಚಿನ್ನ ಕಾಸಿ ಬಡಿದರೂ ತೇಜವನ್ನೇ ಹೊಂದುವುದು. ಹಾಗೆಯೆ ಪ್ರತಿಭಾಪೂರ್ಣ ಜಾನಪದ ಸಾಹಿತ್ಯದಲ್ಲಿ ಮಹತ್ವದ ಬಿಚ್ಚಿನ ಬಾಹ್ಯಾಡಂಬರಗಳಿಲ್ಲದಿದ್ದರೂ ರಸವಂತಿಕೆಯಿದೆ.

ಜಾನಪದ ಸಾಹಿತ್ಯದಲ್ಲಿ ಒಕ್ಕಲಿಗನ ಚಿತ್ರ ಆಕರ್ಷಕವಾಗಿ ಒಡಮೂಡಿದೆ. ಪಂಡಿತರೂ ಕೂಡ ಈ ಹಾಡಿಗೆ ಮಾರುಹೋಗಿದ್ದಾರೆ. ಒಕ್ಕಲಿಗ ಮತ್ತೊಬ್ಬರನ್ನು ಕೈ ಚಾಚಿ ಕೇಳುವವನಲ್ಲ. ಆತ ಕೇಳುವುದು ಭೂತಾಯಿಯನ್ನೇ. ಈ ಹಾಡುಗಳಲ್ಲಿ ಭೂತಾಯಿಯನ್ನು, ತನ್ನ ಬಲದೋಳಾದ ಬಸವಣ್ಣನ ಮೇಲ್ಮೆ, ಅಪಾರ ಭಕ್ತಿಯಿಂದ, ಹೆಮ್ಮೆಯಿಂದ ಅಂದವಾದ ಪದಗಳಿಂದ ದುಡಿತದ ಆಯಾಸವನ್ನು ಅರಗಿಸಿಕೊಳ್ಳುವಂತೆ ಆನಂದದಿಂದ ತನ್ನ ಸಂಪತ್ತಿಗೆ ತನ್ನ ಹತ್ತಿರದ ಬಸವನನ್ನು ಕುರಿತು ಅಂದವಾಗಿ ಹೊಂದಿಸಿ ಹಣೆದುದನ್ನು ಒಂದೊಂದಾಗಿ ಕಂಡುಕೊಳ್ಳಬಹುದು.

ಒಕ್ಕಲಿಗನ ದಿನ ನಿತ್ಯದ ಕೆಲಸದ ಕುರಿತಾಗಿ ಹಸನಾಗಿ ಹೇಳಿದ್ದಾನೆ:

**ಕಸವ ಬಳಿಯುವ ಕೈ ಕಸ್ತೂರಿ ನಾತಾವ।**
**ಬಸವ ನಿನ್ನ ಸಗಣೀಯ ಬಳಿದಾ। ಕೈಗಳು**
**ಯಾಲಕ್ಕಿ ನಾತ ನಾರ್‍ಯಾವೊ॥**

ಒಕ್ಕಲಿಗನಾದವನಿಗೆ ಪ್ರತಿ ಮುಂಜಾನೆ ಎದ್ದು ಕಸ ಬಳಿಯುವದು ಹಸನು ಮಾಡುವದಕ್ಕೆ ಎಂತಹ ಮಹೋಪಮೆಯನ್ನು ಕೊಟ್ಟಿದ್ದಾನೆ ನೋಡಿ. ಬಸವಣ್ಣನ ಸಗಣಿ ಬಳಿದ ಕೈಗಳು ಯಾಲಕ್ಕಿ ನಾತ ನಾರ್‍ಯಾವು ಅಂದರೆ ಮುಂಜಾನೆ ಎದ್ದು ಮಾಡುವ ಕೆಲಸ ಅಷ್ಟೊಂದು ಶ್ರೇಷ್ಠವಾದದ್ದೆಂದು ಕಂಡು ಬರುತ್ತದೆ. ಇದರಂತೆಯೇ,

**ಹಳ್ಳ ಹರಿಯುವದು ಡೊಂಕು। ಮುಳ್ಳ ಕ್ಯಾದಿಗಿ ಡೊಂಕು।**
**ಬೆಳ್ಳಿ ನಾಗಪ್ಪನ ಹೆಡಿ ಡೊಂಕ। ಬಸವನ**
**ಹೆಗಲ ವ್ಯಾಗಿರುವ ನಗ ಡೊಂಕ ॥**
**ಕಂಬಳ ಕಂಡಿ ಸಣ್ಣ। ಕುಡುಗೋಲ ಹಿಡಿ ಸಣ್ಣ।**
**ಜೋಳ ಕೊಯ್ಯುವಳ ನಡು ಸಣ್ಣ। ನಮ್ಮ**
**ಬಸವನ ಹೆಗಲ ವ್ಯಾಗಿನ ನಗ ಸಣ್ಣ॥**

ಎಷ್ಟು ಸುಂದರವಾದ ಪದಗಳಿವು! ಕವಿ ಹೃದಯಿ ಒಕ್ಕಲಿಗನು ಅದನ್ನು ಕಾವ್ಯಮಯವಾಗಿ ಸೃಷ್ಟಿಸಿದ ರೀತಿ ಎಷ್ಟು ಶೃಂಗಾರಮಯ! ಇದನ್ನೆಲ್ಲ ನೋಡಿದಾಗ ಓದು ಬಾರದ ಮುಗ್ಧನ ಮನದಲ್ಲಿ ಎಂತಹ ಮಹೋನ್ನತವಾದ ಪ್ರತಿಭೆಯಿದೆಯೆಂದು ಆಶ್ಚರ್ಯವಾಗುತ್ತದೆ.

**ಬಾಳೀಯ ಗೊನಿಯಂಗ ಬಾಗ್ಯಾವ ನಿನ ಕೋಡು।**
**ಬಾಗಿ ಬಾರಪ್ಪ ಹೆಗಲೀಗಿ। ಸಾರಂಗ**
**ಸಾಗಿ ಬಾರಪ್ಪ ಸಾಲೀಗಿ॥**
**ಬೆಳ್ಳನ್ನ ಬಿಳಿ ಎತ್ತು ಬೆಳ್ಳಿಯ ಬಾರ ಕೋಲ।**
**ಹಳ್ಳದ ಮಾಗಿ ಹೊಡೆದಾವೊ। ನನ್ನೆತ್ತು**
**ಬೆಳ್ಳಕ್ಕಿ ಕಂಡು ಬೆದರ್‍ಯಾವೊ॥**
**ಬೆಳ್ಳನ್ನ ಎರಡೆತ್ತು ಬೆಳ್ಳಿಯ ಕೋಡಣಸ**
**ಹಳ್ಳದ ಹೊಲವ ಹರಗ್ಯಾವೊ। ಬಸವನ**
**ತೆಳ್ಳನ್ನ ಹೊಟ್ಟೆ ಹಸಿದಾವೊ॥**

ಇಲ್ಲಿ ಬಸವಣ್ಣನ ಕೋಡನ್ನು ಬಾಳೆಯ ಗೊನೆಗೆ ಹೋಲಿಸಿದ್ದಾನೆ. ಆನಂದದಿಂದ ಅಧಿಕ ವಾತ್ಸಲ್ಯ

ದಿಂದ ತಂದೆ ಮಗನನ್ನು ಕರೆಯುವಂತೆ ಸಾರಂಗನನ್ನು ಸಾಲಿಗೆ ಬಾ ಎಂದು ಎತ್ತುಗಳು ಹಳ್ಳದ ಹೊಲವನ್ನು ಹರಗುವಾಗ ಬೆಳ್ಳಕ್ಕಿ ಕಂಡು ಬೆದರಿದ್ದನ್ನು ಸುಂದರವಾಗಿ ಹೇಳಿದ್ದಾನೆ. ಆದರೂ ಎತ್ತಿನ ಬಗ್ಗೆ ಕಳಕಳಿ ಒಕ್ಕಲಿಗನಿಗಿದ್ದಷ್ಟು ಮತ್ತಾರಿಗೂ ಇರುವದಿಲ್ಲ. ಯಾರು ಯಾವ ಉದ್ಯೋಗ ಮಾಡುವರೊ ಅವರಿಗೆ ಮಾತ್ರ ಅದು ಗೊತ್ತುಂಟು. ಎತ್ತಿನ ಬೆಳ್ಳಿಯ ಕೋಡಣಸಿನ ಅಂದವನ್ನು ಎತ್ತಿ ತೋರಿಸಿದ್ದಾನೆ. ಎತ್ತಿಗೆ ಹಸಿವಾದದ್ದು ಅವನಿಗೆ ತಿಳಿದಿದೆ. ಒಕ್ಕಲಿಗನಾದವನು ಮೊದಲು ಎತ್ತನ್ನು ಮಾತ್ರ ಕಾಯ್ದುಕೊಳ್ಳಬೇಕು. ಎಲ್ಲವೂ ಎತ್ತಿನಿಂದಲೇ.

ಮಳೆಯಾಗಿ ಬಿತ್ತುವ ತಯಾರಿ ನಡೆಯುತ್ತದೆ.

**ರೋಹಿಣಿಯು ಮಳೆಯಾಗಿ ಓಣೆಲ್ಲ ಕೆಸರಾಗಿ**
**ಜಾರಿ ಬಿದ್ದಿಯೋ ಜತನವ। ಬಸವಣ್ಣನ**
**ತುರಾಯಿದ್ದಾವೆ ತುಳುದೀರೊ॥**
**ಕುಂಟೋಜಿ ಬಸವನ ಕುತನಿ ಜೂಲವ ನೇಸಿ।**
**ಬಾಲ ಬೀಸ್ಯಾನ ವನವನದು। ಬಸವಣ್ಣ**
**ಕೂರಿಗೆಳದಾನ ಕುಣಿಕುಣಿದೊ॥**
**ಗುತ್ತಿಯ ಬಸವಗ ಎತ್ತೋಳ ಹದಿನಾರು।**
**ಬಿತ್ತೀದ ಹೊಲನ ಮೇಯಸ್ತಾವ। ಬಸವಣ್ಣ**
**ಕೊತ್ತಲ ಸರಸಿ ಮಲಗ್ಯಾವೊ॥**

ಒಕ್ಕಲಿಗನಿಗೆ ರೋಹಿಣಿಯ ಮಳೆಯಾಗಿ ಭೂಮಿ ಹಸಿಯಾಗಿದೆ. ಬಿತ್ತಲು ಹೋಗುವ ಸಿದ್ಧತೆ ನಡೆದಿದೆ. ಈಗ ಎತ್ತುಗಳ ಬಗ್ಗೆ ಹೆಚ್ಚಿನ ಗಮನ ಕೊಡುತ್ತಾನೆ. ಕೂರಿಗೆಯನ್ನು ತಯಾರು ಮಾಡಿ ಬೀಜ ತುಂಬಿ, ಸೀರೆ ಕುಪ್ಪಸ ಬಳೆಯೊಡನೆ, ಕೊರಳಲ್ಲಿ ವಸ್ತ್ರ ಒಡವೆಗಳನ್ನು ಹಾಕಿ ಶೃಂಗಾರ ಮಾಡುತ್ತಾರೆ. ಅಂದು ಒಕ್ಕಲಿಗರಿಗೆ ಮಹಾ ಆನಂದದ ದಿನ. ಎತ್ತುಗಳಿಗೆ ಮೈ ತೊಳೆದು ಶೃಂಗಾರಮಾಡಿ ಕೂರಿಗೆಯನ್ನು ಸಾಗಿಸುತ್ತಾನೆ. ಆಗ ಎತ್ತುಗಳು ಕೂರಿಗೆ ಎಳೆಯುವದನ್ನು ಮನತುಂಬಿ ಬಣ್ಣಿಸುತ್ತಾನೆ. ಹುಲುಸಾಗಿ ಬೆಳೆ ಬರುತ್ತದೆ. ಬೆಳೆಯನ್ನು ಎತ್ತುಗಳು ಆನಂದದಿಂದ ಮೆಯ್ದು, ನಲಿದು ಅಂಬೆಗಾಲೂರಿ ಮಲಗಿರುವದನ್ನು ಕಂಡು ಮಹಾ ಆನಂದವಾಗುತ್ತದೆ. ಬೆಳೆ ಮಾಗಿದೆ ಪೈರು ಕೊಯ್ದು, ಗೂಡು ಹಾಕಿ, ಕಣವನ್ನು ಮಾಡಿ ತೆನೆ ಮುರಿದು ಹಾಕುತ್ತಾರೆ. ಇನ್ನು ಹಂತಿ ಹೂಡುತ್ತಾನೆ ಒಕ್ಕಲಿಗ.

**ಹಂತೀಯ ಹೂಡಾಗ ಯಾವ್ಯೊನ್ನ ನೆನಿಬೇಕೊ।**
**ನಾಕಕಾಲೀನ ಬಸವನ। ನೆನೆದರ**
**ನಾಗಂಡಗ ರಾಶಿ ನಡುಮನಿಗೊ॥**

ಹಂತಿಯನ್ನು ಹೂಡಿದ ನಂತರ ದೇವರ ಸ್ತುತಿ ಮಾಡುವದು ಸಹಜ. ಒಕ್ಕಲಿಗನ ಪಾಲಿನ ದೇವರೆಂದರೆ 'ಎತ್ತು' 'ಮನಸ್ಸಿನಂತೆ ಮಹಾದೇವ' ಎಂಬಂತೆ 'ಶಿವ ಶಿವ ಎಂದರೆ ಸಿಡಿಲೆಲ್ಲ ಬಯಲಾಗಿ' ಅನ್ನುವಂತೆ ಬಸವನನು ನೆನೆದರೆ ನಮಗೆ ರಾಶಿ ಹುಲುಸಾಗುವದೆಂದು ಅವರ ನಂಬಿಕೆಯಿದೆಯೆಂದು ಕಂಡುಬರುತ್ತದೆ. ಇಲ್ಲಿ ಮುಖ್ಯವಾಗಿ ಕಂಡುಕೊಳ್ಳುವದು ವಿಶ್ವಾಸ, ಆತ್ಮೀಯತೆ, ಶ್ರದ್ಧೆ.

ಹೆಂಡತಿಯು ತಿರುಗುವ ಎತ್ತನ್ನು ಕಂಡು ಆನಂದವಾಗಿ ಅಲಂಕಾರ ಭರಿತವಾದ ವಸ್ತುಗಳನ್ನು ಮತ್ತು ಬಸವಣ್ಣನ ಹಣೆಯ ಮೇಲಿನ ವಿಭೂತಿ, ಕೊರಳಲ್ಲಿ ಕಟ್ಟಿದ ಜಂಗು, ಕಾಲಲ್ಲಿಯ ಗಗ್ಗರಿ ನುಡಿಸುವದು. ಮೈವನದು ಗೋಣುಹಾಕಿ ನಡೆಯುವದು ಅದನ್ನು ಕಂಡು 'ಬಹಾದ್ದೂರ ನಮ್ಮ ಸಾರಂಗ' ಎಂದು ಹರುಷಭರಿತನಾಗಿದ್ದಾನೆ. ಇಂತಹ ಅಂದವಾದ ವಸ್ತುಗಳ ಮೇಲೆಯೇ ಮನ ಸೆಳೆಯುವಂತೆ, ಆಕರ್ಷಕವಾಗಿ ಎತ್ತು ಗೊತ್ತಿಲ್ಲದವರನ್ನು ಎತ್ತಿನತ್ತ ಮನ ಸೆಳೆಯುವಂತೆ ಹೇಳಿದ್ದನ್ನು ಕೆಳಗಿನ ಪದ್ಯದಲ್ಲಿ ಕಾಣಬಹುದು.

**ಕಡಿಸುತ್ತ ಲೆತ್ತೀಗಿ ಕಾಲಾಗ ಗಗ್ಗರಿ।**
**ಮೇಲೆಲ್ಲ ಆದ ಹುಲಿಹೆಜ್ಜೆ। ಕಾಯ್ಕೊಂಡು**
**ಸಾಗಿ ಬಾರಣ್ಣ ಸಾವಕಾಶ॥**
**ಆರ ಎತ್ತಿನಾಗ ಶೂರ ನಮ್ ಸಾರಂಗ।**
**ಸೇರ ಬಂಗಾರದ ಕೊಡಸಣ। ಬಸವಣ್ಣ**
**ಮಂಡಲದೊಳಗ ಕುಣಿದಾಡೊ॥**

ಬಸವಣ್ಣನ ಹಣೆಮ್ಯಾಲ ಹಸನುಳ್ಳ ಈಬತ್ತಿ ।
ಹಸರ ಗಲ್ಲೀಪ ಮೈಮ್ಯಾಲ । ಹಾಯ್ಕೊಂಡು
ಹಸನುಳ್ಳ ಹಂತಿ ತಿರುಗ್ಯಾವೊ ॥
ಹಂತಿಯು ಹೊಗಸೇವೊ ಗುಂಪಾಗಿ ನಿಂತೇವೊ ।
ಜಾತರ ರಾಗೋಲ ಹಿಡಿದೇವೊ । ಬಸವಣ್ಣನ
ತಗುತರುಬಿ ಕಂಕಿ ತಗದೇವೊ ॥

ಹಂತಿಯೆನ್ನು ಕಟ್ಟಿದ ನಂತರ ಎತ್ತುಗಳು ತೆನೆಯನ್ನು ತುಳಿದು ಸಣ್ಣದಾಗಿ ಕಂಕಿ ಮೇಲೆ ಬರುವದು. ಕಣದ ದುಂಡೆಯು ಮೇಲೆ ಗುಂಪಾಗಿ ನಿಂತವರು ಎತ್ತುಗಳನ್ನು ತರುಬಿ ರಾಗೋಲಿನಿಂದ ಕಂಕಿಯನ್ನು ಕಡೆಗೆ ತೆಗದುಹಾಕುವರು. ಆಗ ಸುಂಕ, ಕಂಕಿ, ಬೇರೆಯಾಗುವದು. ಹಂತಿಯೆನ್ನು ಬಿಟ್ಟ ನಂತರ ಎತ್ತಿನ ಪೂಜೆ ಮೆರವಣಿಗೆಯ ಕಾರ್ಯಗಳು ನಡೆಯುತ್ತವೆ.

ಹಂತೀಯು ಹೊಡದೆತ್ತು ಹಂತೀಲಿ ಬಂದರೆ
ಸುಂಕ ಜಾಡಿಸಿದ ಸೆರಗೀಲೆ । ಕಂದನಿಗೆ
ಹಂತಿಯು ಎತ್ತು ಹದಿನೆಂಟು ॥
ಬಸವನ ಪಾದ ಹಸನಾಗಿ ತೊಳದೇವ ।
ಬಾಗಿ ಬಲಗಾಲ ಹಿಡಿದೇವೊ । ಬಸವಣ್ಣ
ಭಾಗ್ಯ ಕೊಡೆಂದು ಬೇಡುವೆವೊ ॥

ಬಾರಪ್ಪ ಬಸವಣ್ಣ ಬಾಸಿಂಗ ತರತೀನಿ ।
ರೇಶಿಮಿಗೊಂಡೆ ಹಾಯ್ಕೊಳೊ । ಬಸವಣ್ಣ
ವರುಷಕ್ಕೊಮ್ಮೆ ನಿನ್ನ ಮೆರೆಸೇನೊ ॥

ಹಂತಿಯನ್ನು ಬಿಟ್ಟ ನಂತರ ಎತ್ತುಗಳಿಗೆ ಜೂಲು. ರೇಶಮಿಗೊಂಡೆ, ಸರಜಾಗು, ಕಾಲಲ್ಲಿ ಗಗ್ಗರಿ ಅನೇಕ ಶೃಂಗಾರದ ಸಾಮಾನುಗಳನ್ನು ಹಾಕಿ ಬಾಜಾ ಬಜಂತ್ರಿಗಳ ಸಮೇತ ಊರಲ್ಲಿ ಮೆರವಣಿಗೆಯ ಸಂಭ್ರಮವೇ ಸಂಭ್ರಮ. ಈಗ ಒಕ್ಕಲಿಗನಿಗೆ ಬಸವನ ಮೇಲೆ ತಾಯಿಮಮತೆ ಯಿದೆ. ಮೈ ಮುಖ ಪೊಲಸು ಮಾಡಿಕೊಂಡು ಬಂದ ಮಗನ ಮೈ ತೊಳೆದು ಸಿಂಗರಿಸುವಂತೆ ಬಸವನನ್ನು ಸಿಂಗರಿಸಿದ್ದಾನೆ ರೈತ. ಎಂತಹ ಒಂದು ಭಕ್ತಿ. ಕಳಕಳಿ, ಪ್ರೇಮಾದರ ಕಂಡುಬರುತ್ತದೆ. ಇಷ್ಟಲ್ಲದೆ ಬಸವಣ್ಣನ ಪಾದಗಳನ್ನು ಹಸನಾಗಿ ತೊಳೆದು ಮದುಮಗನಿಗೆ ಹೇಗೆ ಅಡ್ಡ ಆರತಿ ಬೆಳಗುವರೋ ಹಾಗೆ ನೆದರಾಗುವದೆಂದು (ದೃಷ್ಟಿ ತಾಕೀತೆಂದು) ಅದೇ ರೀತಿ ಆರತಿ ಬೆಳಗಿ ಪಣಿ ಹಚ್ಚಿ ನಮಗೆ ಅನುಗಾಲ ಇದೇ ರೀತಿ ಹುಲುಸಾದ ಬೆಳಸನ್ನೇ ಕೊಡು ಎಂದು ಬೇಡಿಕೊಳ್ಳುತ್ತಾಳೆ ಒಕ್ಕಲಗಿತ್ತಿ.

ಜಾನಪದ ಸಾಹಿತ್ಯ ಮಣ್ಣಿನ ಮಕ್ಕಳಿಂದ ಬಂದ ಸತ್ವಯುತ ಸಾಹಿತ್ಯ. ಅದಕ್ಕೆ ಭೇದವಿಲ್ಲ. ಮತ್ಸರವಿಲ್ಲ, ಒಣ ಪ್ರತಿಷ್ಠೆಗಳಿಲ್ಲ, ಶ್ರೇಷ್ಠತ್ವದ ಸೋಂಕೂ ಇಲ್ಲ. ಅದು ನಿತ್ಯ ಶ್ರೀಮಂತ, ನಿತ್ಯ ನೂತನ. ಅದಕ್ಕೆ ಅದು ಜನರ ಬಾಯಲ್ಲಿ ನೆಲೆ ನಿಂತಿದೆ, ಹೃದಯಸ್ಥವಾಗಿದೆ. ✡

****************

ಗುರು ನಾನಕರ ಬಳಿ ಬಂದ ಕಳ್ಳನೊಬ್ಬ ಪಾಪದಿಂದ ಮುಕ್ತಗೊಳ್ಳಲು ಉಪಾಯ ಸೂಚಿಸಲು ಅವರನ್ನು ಕೇಳಿಕೊಂಡ. ಅವರು ಕಳ್ಳತನ ಬಿಡಲು ಸೂಚಿಸಿದರು. ಆತ ಪ್ರಯತ್ನಿಸುವುದಾಗಿ ಹೇಳಿಹೋದ. ಕೆಲ ಕಾಲದ ನಂತರ ಆತ ನಾನಕರನ್ನು ಕಂಡಾಗ ಕಳ್ಳತನ ಬಿಡಲಾಗಲಿಲ್ಲವೆಂದೂ, ಪಾಪದಿಂದ ಮುಕ್ತಗೊಳ್ಳಲು ಬೇರೊಂದು ಉಪಾಯ ಸೂಚಿಸಲು ವಿನಂತಿಸಿದ. ನಾನಕರು ಕಳ್ಳತನ ಮಾಡಿದ್ದನ್ನೆಲ್ಲ ಜನರೆದುರು ಹೇಳುವಂತೆ ತಿಳಿಸಿದರು. ಆತ ಒಪ್ಪಿ ಹಿಂದಿರುಗಿದ. ಕೆಲ ಕಾಲದ ನಂತರ ಆತ ನಾನಕರನ್ನು ಕಂಡಾಗ ಕಳ್ಳತನ ಮಾಡಿದ್ದನ್ನೆಲ್ಲ ಜನರೆದುರು ಹೇಳುವುದು ಕಷ್ಟವೆನಿಸಿತು, ಆದ್ದರಿಂದ ಕಳ್ಳತನ ಮಾಡುವುದನ್ನೇ ಬಿಟ್ಟುಬಿಟ್ಟೆ ಎಂದ.

# ಸಿಂಹಸ್ವಪ್ನ

**ಕೆ. ಚಂದ್ರಮೌಳಿ**

"ಡೆನಿಸ್ ದಿ ಮೆನೇಸ್"ನ ಹೆಸರು ಕೇಳಿದರೆ, ಅವನನ್ನು ನೋಡಿದರೆ, ತಕ್ಷಣ ಅವನ ನೆರೆಮನೆಯ ವಿಲ್ಸನ್ ಮುದುಕನಿಗೆ ಮೈಯೆಲ್ಲಾ ಬೆವರುತ್ತದೆ. ಡೆನಿಸ್‌ನ ಮಾತಿಗೆ ಮುಗ್ಧ ಚಕಮಕಿ, ತರಲೆ ಮತ್ತು ಎಲ್ಲಕ್ಕೂ ಹೆಚ್ಚಾಗಿ ಡೆನಿಸ್‌ನ ಮುಂದಿನ ಹೆಜ್ಜೆಯ 'ಹೀಗೆಂದೇ ಹೇಳಲಾಗದ' ಪುಂಡಾಟ ಇವೆಲ್ಲದರಿಂದ ವಿಲ್ಸನ್ ಮಹಾಶಯನಿಗೆ ಡೆನಿಸ್ ಅಂದರೆ ಒಂದು ಸಿಂಹಸ್ವಪ್ನ. ಹೀಗೆ ಪ್ರತಿಯೊಬ್ಬರಿಗೂ ಒಂದೊಂದು ತರಹದ ಸಿಂಹಸ್ವಪ್ನ ಇರಬಹುದು. ಗಡ್ಡ ಬಿಟ್ಟಿರುವ ನಮ್ಮ ಮಾದನನ್ನು ಕೇಳಿದರೆ, ತಾನೆಲ್ಲಿ ಹೆಣ್ಣಾಗಿ ಬಿಡುತ್ತಿದ್ದೇನೋ ಅನ್ನುವುದೇ ಅವನ ಸಿಂಹಸ್ವಪ್ನವಂತೆ. ಎರಡು ಮಕ್ಕಳ ವೆಂಕೂ ಇಂದಿಗೂ ಅವನು ಪರೀಕ್ಷೆಯಲ್ಲಿ ಕೂತವನು ಉತ್ತರ ಬರೆಯಲಾಗದೆ ಬೆವರುತ್ತಿದ್ದೇನೆಂದೇ ಕನಸು ಬಿದ್ದು ಅರ್ಧರಾತ್ರಿಯಲ್ಲಿ ಎದ್ದು ಕೂರುತ್ತಾನಂತೆ. ತಲೆ ನರೆತು, ಹಲ್ಲೆಲ್ಲಾ ಉದುರುತ್ತಿದ್ದು ಮೊಮ್ಮಗಳ ಮದುವೆಗೆ ಗಂಡು ಹುಡುಕುತ್ತಿರುವ ಗಂಗಜ್ಜಿಯ ಸಿಂಹಸ್ವಪ್ನ ಏನೆಂದು ಕೇಳಿದರೆ ಇಂದಿನ ಹರೆಯದ ಹೆಣ್ಣುಗಳೂ ನಾಚಬೇಕು– ಯಾರೋ ಇಬ್ಬರು ಕಟ್ಟುಮಸ್ತಾದ ಗಂಡುಗಳು ಅವಳನ್ನು ಎತ್ತಿಕೊಂಡು ಎಲ್ಲೋ ಕಾಡಿನೊಳಗೆ ಓಡುತ್ತಿದ್ದಾರೆಂದೇ ಅವಳ ಸ್ವಪ್ನ. ಸಿಗ್‌ಮಂಡ್ ಫ್ರಾಯ್ಡ್‌ನಂತಹ ಸೈಕಾಲಜಿಸ್ಟ್‌ಗಳಾದರೆ ಇದಕ್ಕೆ ಏನೋ ಒಂದು ಕಾರಣ ಹುಡುಕಿ ಇದಕ್ಕೆ ಬೆವರಾಲಜಿ ಅಂತಲೋ ಪೆಕಡಿಸಂ ಅಂತಲೋ ಹೆಸರು ಕೊಟ್ಟುಬಿಡುತ್ತಿದ್ದರು. ನಮಗೆ ಅದೆಲ್ಲ ಅರ್ಥವಾಗುಲ್ಲ. ಆದ್ದರಿಂದ ಸುಮ್ಮನೆ ಸುಲಭವಾಗಿ ಇದಕ್ಕೆ ಸಿಂಹಸ್ವಪ್ನ ಅಂದುಬಿಟ್ಟರೆ ಸರಿ.

ಸದ್ಯಕ್ಕೆ ಈಗ ನನಗೆ ಹೆಚ್ಚಿನ ಸಿಂಹಸ್ವಪ್ನಗಳಿಲ್ಲದಿದ್ದರೂ – ಪ್ರಾಯಶಃ ನಾನೇ ಯಾರಿಗೋ ಸಿಂಹಸ್ವಪ್ನವಾಗಿರಬಹುದು — ಬಾಲ್ಯದಲ್ಲಿ ಅನೇಕ ಸ್ವಪ್ನಗಳಿದ್ದುವು. ಮನೆಗೊಬ್ಬ ನಾಪಿತನಂತೆ ನಮ್ಮ ಮನೆಗೂ ಒಬ್ಬ ನಾಪಿತ ಇದ್ದ; ಮುದುಕ ನಾಪಿತ. ಅವನಿಗೆ ತಲೆ ಕೊಟ್ಟಾಗಲೆಲ್ಲಾ ಅವನು ನನ್ನ ತಲೆ ಸವರಿ, ಆ ಕಡೆ ಈ ಕಡೆ ನೋಡಿ ಯಾರೂ ಹತ್ತಿರವಿಲ್ಲವೆಂದು ಖಾತ್ರಿ ಮಾಡಿಕೊಂಡು,



"ಸಣ್ಣ ರಾಯ್ರೇ, ಕೂದಲು ತೆಗೀಲೋ ಅಥವಾ ತಲೇನೇ ತೆಗೀಲೋ" ಎಂದು ಕೇಳುತ್ತಿದ್ದ; ಅವನ ಕೈಗೆ ತಲೆ ಕೊಟ್ಟಿದ್ದರಿಂದ ಕತ್ತು ತಿರುಗಿಸಲಾಗುತ್ತಿರಲಿಲ್ಲ, ಆದರೂ ಕಣ್ಣು ತೇಲಿಸಿ ಅವನ ಮುಖ ನೋಡಿದರೆ ಏನೋ ಒಂದು ರೀತಿಯ ವಕ್ರ ನಗೆ ಅವನ ಮುಖದಲ್ಲಿ ತಾಂಡವವಾಡುತ್ತಿರುತ್ತಿತ್ತು. ಇವನ ಬೆದರಿಕೆಯ ವಿಚಾರ ಯಾರಿಗೆ ಹೇಗೆ ಹೇಳಲಿ? ಅಮ್ಮನಿಗೆ ಗುಟ್ಟಿನಲ್ಲಿ ಹೇಳಿದಾಗ ನಕ್ಕುಬಿಟ್ಟಿದ್ದಳು. ಎಂದಿಗೆ ಅವನು ನನ್ನ ತಲೆಗೂದಲು ಕತ್ತರಿಸಿ ಮುಗಿಸುತ್ತಾನೋ ಎಂದು ಎದೆ ಡವಡವ ಹೊಡೆದುಕೊಳ್ಳುತ್ತಿರುತ್ತಿತ್ತು. ಈಗಿನ ಹೊಸ ಫ್ಯಾಶನ್ ಆಗಾದರೂ ಇದ್ದರೆ ಹಿಪ್ಪಿ ತರಹ ಕೂದಲು ತೊಡೆ ಮಾರುದ್ದ ಬಿಟ್ಟುಕೊಂಡು ನಾಪಿತನ ಕಾಟ ತಪ್ಪಿಸಿಕೊಳ್ಳಬಹುದಾಗಿತ್ತು. ಬೇರೆಯವನ ಹತ್ತಿರ ಹೋಗೋಣವೆಂದರೆ ನಮ್ಮಪ್ಪ ಬಿಡರು. ಒಂದು ಸಲ ಅವನು ಮನೆಗೆ ಬಂದ ಅಂದರೆ ಅಪ್ಪ, ನಾನು, ನನ್ನ ನಾಯಿ ಟಾಮಿ ಎಲ್ಲರಿಗೂ ಹಜಾಮತ್ ಆಗಲೇಬೇಕು. ಅದೋ ನಮ್ಮಪ್ಪನಿಗೆ ನಾಲ್ಕು ಕೂದಲಿಗೆ ಹದಿನೈದು ದಿನಕ್ಕೊಂದು ಸಲ ಹಜಾಮತ್ ಆಗಲೇಬೇಕು. ಅವರಿಗೆ ಬಂದಾಗಲೆಲ್ಲಾ ನನಗೂ ನನ್ನ ಟಾಮಿಗೂ ಪಟ್ಟಾಭಿಷೇಕ ತಪ್ಪಿದ್ದಲ್ಲ. ತಿಂಗಳಿಗೆರಡು ಸಲ ಇವನ ಕಾಟ ಮುಗಿದರೆ ಸಾಕು ಎಂದು ನೆಮ್ಮದಿಯಿಂದ ಇರುವ ಹಾಗೇ ಇರಲಿಲ್ಲ. ಶುಭ್ರವಾಗಿ ಸ್ನಾನ ಮಾಡಿ, ಬಟ್ಟೆ ಹಾಕಿಕೊಂಡು ಪುಸ್ತಕ ಹಿಡಿದು ಸ್ಕೂಲಿಗೆ ಹೊರಟು ಅಲ್ಲೆಲ್ಲೋ ಮೈದಾನದಲ್ಲಿ ಹತ್ತು ನಿಮಿಷ ಗೋಲಿ ಆಡುತ್ತಾ ಇರುತ್ತಿದ್ದಾಗ ಎಲ್ಲಿಂದಲೋ ಏನೋ ಒಂದು ಒರಟು ಕೈ ನನ್ನ ತಲೆ ಸವರಿ ಮೈ ಜುಮ್ಮೆನಿಸುತ್ತಿತ್ತು. ಕತ್ತು ಕೊಂಕಿಸಿ ನೋಡಿದರೆ ಮತ್ತೆ ಅದೇ ನಾಪಿತ, ಅದೇ ವಕ್ರ ನಗೆ, ಬಾಯಲ್ಲಿ ಅದೇ ಪ್ರಶ್ನೆ: "ಏನು ರಾಯ್ರೇ? ಕೂದಲು ತೆಗೀಲೋ ಅಥವಾ ತಲೇನೇ ತೆಗೀಲೋ?" ಅವನ ಹಿಡಿತ ಸ್ವಲ್ಪ ಸಡಿಲಾದ ತಕ್ಷಣ ಅಲ್ಲಿಂದ ಒಂದೇ ಓಟ ಕಿತ್ತು ಓಡುತ್ತಿದ್ದೆ–ಸೀದಾ ಮನೆಗೆ. ಎಲ್ಲಿಂದ ನಮ್ಮ ನಾಪಿತ ಬಂದುಬಿಡುತ್ತಾನೋ ಎನ್ನುವುದೇ ಒಂದು ಸಿಂಹಸ್ವಪ್ನವಾಗಿತ್ತು.

ಮನೆಗೊಬ್ಬ ನಾಪಿತ ಇರುವ ಹಾಗೆ ಮನೆಗೊಬ್ಬ ಡಾಕ್ಟರರೂ ಸಾಮಾನ್ಯ ತಾನೆ. ಈ ವೈದ್ಯರ ಹತ್ತಿರ ಔಷಧಿಗೆ ಹೋಗುವುದೇ ಒಂದು ಮಹಾ ಪ್ರಯಾಸ. ಔಷಧಿಗೆಂದು ಒಂದು ಸೀಸೆ ಹಿಡಿದು ಹೊರಟ ತಕ್ಷಣ ಎದುರಿಗೇ ಕುಳಿತಿದ್ದರು ಡಾಕ್ಟರು. ನಗುತ್ತಾ, "ಬಾ ಮಗೂ ಬಾ, ಏನು ಸಮಾಚಾರ" ಅನ್ನುತ್ತಿದ್ದರು. ಅರೇ, ಇಂಥಾ ಒಳ್ಳೆಯ ಸ್ವಾಗತ ಬಯಸಿ, ನಗುನಗುತ್ತಾ ಮಾತಾಡುವ ಡಾಕ್ಟರು ಹೇಗೆ ಸಿಂಹಸ್ವಪ್ನ ಆದರು ಎಂದು ನೀವು ಕೇಳಬಹುದು. ನಿಮಗೆ ನಾನು ಹೇಳಿದ್ದು ಬರೀ ಸ್ವಾಗತದ ನಗು ಮಾತ್ರ. ಆಮೇಲೆ ಏನು



ಕಾಯಿಲೆಯೋ, ಕಸಾಲೆಯೋ ಹೇಳಿಕೊಂಡು ಕೆಂಪು ನೀರೋ, ಹಸಿರು ನೀರೋ ಔಷಧಿ ಬೆರೆಸಿಕೊಂಡು ಕೊಡುವ ತನಕ ಡಾಕ್ಟರರ ಪ್ರಶ್ನಾವಳಿ ಸಾಗುತ್ತಲೇ ಇರುತ್ತದೆ. "ಏನು ಮಗೂ ಏನು ಓದ್ತಾ ಇದ್ದೀಯಾ? ಹೂಂ ಎಲ್ಲಿ ನೋಡೋಣ ಆ ಪೈಥಾಗರಸ್ ಥೀರಮ್ ಹೇಳು ನೋಡೋಣ. ಏನಂದೀ ಮರೆತು ಹೋಗಿದೆಯಾ? ನೀವು ಶಾಲೇಲಿ ಅದೇನು ಓದುತ್ತೀರೋ ಏನೋ..." ಇಂದು ಪೈಥಾಗರಸ್ ಥೀರಮ್ ನಾಳೆ ನ್ಯೂಟನ್ ಲಾ. ಆರ್ಕಿಮಿಡಿಸ್‌ನ ಸಿದ್ಧಾಂತ ಹೀಗೆ ಬರೀ ಪ್ರಶ್ನೆಗಳೇ ಪ್ರಶ್ನೆಗಳು. ಯಾವಾಗಲೋ ಒಂದು ಸಲ ನೆಗಡಿಯೋ, ಕೆಮ್ಮೋ ಆದಾಗ ಅವರ ಹತ್ತಿರ ಹೋಗುವುದಾದರೆ ಪರವಾಗಿಲ್ಲ. ಆದರೆ ಇವತ್ತು ಅಮ್ಮನಿಗೆ ಕಾಲುನೋವು. ನಾಳೆ ಅಪ್ಪನಿಗೆ ತಲೆನೋವು ನಂತರ ಮಕ್ಕಳಿಗೆಲ್ಲಾ ಒಂದಲ್ಲ ಒಂದು ಕಾರಣಕ್ಕೆ ಔಷಧಿ ತರುವ ಕೆಲಸ ನನ್ನ ಮೇಲೇ ಬೀಳುತ್ತಿತ್ತು. ಅಂತೂ ದಿನಕ್ಕೊಂದು ಸಲವಾದರೂ ಡಾಕ್ಟರ ಭೇಟಿ ಆಗಲೇ ಬೇಕು. ಭೇಟಿ ಆದಾಗಲೆಲ್ಲಾ ಅವರ ಪ್ರಶ್ನೆಯ ಸುರಿಮಳೆ. ಅವರ ಪ್ರಶ್ನೆಗೆ ಉತ್ತರ ಹೇಳುವುದರಲ್ಲಿ ನನಗೇ ಜ್ವರ ಬಂದು ಬಿಟ್ಟಿರುವುದು. ಇದು ಬರೀ ಬಾಲ್ಯದ ಸಿಂಹಸ್ವಪ್ನವಲ್ಲ. ಇಂದಿಗೂ ಓದೆಲ್ಲಾ ಮುಗಿದು ಕೆಲಸಕ್ಕೆ ಸೇರಿ ರಜಕ್ಕೆಂದು ಊರಿಗೆ ಹೋದಾಗ ಅವರನ್ನು ಭೇಟಿಯಾದಾಗಲೂ ಮತ್ತೆ ಅದೇ ತರಹದ ಪ್ರಶ್ನಾವಳಿಗಳು...

ಶಾಲೆಗೆ ಹೋಗುವಾಗಲೋ, ಮನೆಗೆ ಬರುವಾಗಲೋ, ಪೇಟೆಗೆ ಹೋಗಿ ಎರಡು ತರಕಾರಿ ತರುವಾಗಲೋ ಎದುರಿಗೊಬ್ಬ ಅರೆಹುಚ್ಚ ದಿನಕ್ಕೊಮ್ಮೆ ಸಿಗುತ್ತಿದ್ದ. ಪೂರ್ತಿ ಹುಚ್ಚನ್ನಾದರೂ ಎದುರಿಸಬಹುದು. ಆದರೆ ಈ ಅರೆಹುಚ್ಚನನ್ನು ಎದುರಿಸುವುದು ಮಹಾ ಕಷ್ಟ. ಅದೆಲ್ಲಿಂದ ಹೇಗೆ ಎದುರಾಗುತ್ತಿದ್ದನೋ ಗೊತ್ತೇ ಆಗುತ್ತಿರಲಿಲ್ಲ. ಎದುರಿಗೆ ಸಿಕ್ಕಾಗಲೆಲ್ಲಾ ಅವನದು ಒಂದೇ ಕೂಗು. "ಏ, ನೀನು ಇವತ್ತು ಆ ಕಮಲಿ ಹಿಂದೆ ಓಡುತ್ತಿದ್ದೆ. ಬಂದು ನಿಮ್ಮಪ್ಪನಿಗೆ ಹೇಳ್ತೀನಿ ಇರು."

ಇವತ್ತು ಕಮಲಿ, ನಾಳೆ ವಿಮಲಿ. ನಾಡಿದ್ದು ರೋಸಿ, ಇನ್ನೊಂದು ದಿನ ಆಕ್ಸರ್‌ಉನ್ನಿಸಾ. ಅಯ್ಯೋ ಅಷ್ಟೊಂದು ಹುಡುಗಿಯರ ಹಿಂದೆ ಅಷ್ಟು ಹಿಂದಿಂದೇ ಓಡಾಡಿದ್ದರೆ! ಛಿ, ಆಗಿನ ಮಾತೇಕೆ ಕೇಳ್ತೀರಿ – ಈಗ ನನ್ನ ಜೊತೆ ಯಾರ್‍ಯಾರು ಇರುತ್ತಿದ್ದರೋ ಏನೋ! ಆಗ 'ಹುಡುಗಿ' ಅನ್ನೋ ಶಬ್ದ ಕೇಳೇ ಏನೋ ಹೆದರಿಕೆ. ಇನ್ನು ಈ ಹುಚ್ಚ ಎಲ್ಲಿ ನಮ್ಮಪ್ಪನಿಗೆ ಹೋಗಿ ಇಲ್ಲಸಲ್ಲದ ಸುಳ್ಳೆಲ್ಲಾ ಹೇಳಿಬಿಡುತ್ತಾನೋ, ಎಲ್ಲಿ ನಮ್ಮಪ್ಪ ದೊಣ್ಣೆ ಹಿಡಿದು ನನ್ನ ಸ್ವಾಗತಕ್ಕೆ ನಿಂತಿರುತ್ತಾರೋ ಎಂದು ಎದೆ ಢವಢವ ಹೊಡೆದುಕೊಳ್ಳುತ್ತಲೇ ಇರುತ್ತಿತ್ತು. ಈಗ ಆ ಹುಚ್ಚ ಸತ್ತಿರಬೇಕು. ಆದರೂ ಊರಿಗೆ ಹೋದಾಗಲೆಲ್ಲ ಎಲ್ಲಿ ದಾರಿಗೆ ಗಟ್ಟ ಬರುತ್ತಾನೋ ಎಂದೇ ಆ ಕಡೆ ಈ ಕಡೆ ನೋಡುವ ಹಾಗಾಗುತ್ತದೆ.

ವೆಂಕ್ಯಾ ನನ್ನ ಸ್ನೇಹಿತ. ಅವನ ಮನೆಗೆ ಹೋದಾಗ ಯಾವಾಗಲೂ ಅವನಜ್ಜ – ಬೊಚ್ಚು ಮುದುಕರು – ಎದುರಿಗೇ ಬೀಳುತ್ತಿದ್ದರು. ಯಾವತ್ತೂ ವೆಂಕ್ಯಾ ನನಗೆ ಮೊದಲು ಸಿಗುತ್ತಲೇ ಇರಲಿಲ್ಲ. ವೆಂಕ್ಯಾ ಸಿಗದಿದ್ದರೆ ಅಷ್ಟೇ ಹೋಯಿತು. ಅವನ ನಾಲ್ಕು ಜನ ಅಣ್ಣಂದಿರು. ಮೂರು ಜನ ಅಕ್ಕಂದಿರು. ಇಬ್ಬರು ತಂಗಿಯರು. ಅವನ ತಾಯಿ, ತಂದೆ. ಯಾರು ಸಿಕ್ಕಿದರೂ ಪರವಾಗುತ್ತಿರಲಿಲ್ಲ. ಆದರೆ ಸಿಗು



ತ್ತಿದ್ದುದು ಅವನ ಅಜ್ಜ– ಒಬ್ಬ ಮುದುಕ; ಬರೀ ಮುದುಕ ಅಲ್ಲ ಘಾಟೀ ಮುದುಕ. ಒಂದೊಂದು ದಿನ ಅಪ್ಪಿತಪ್ಪಿ ಬೇರೆ ಯಾರಾದರೂ ಸಿಕ್ಕು 'ವೆಂಕ್ಟೂ ಇದಾನಾ' ಎಂದು ಕೇಳುವುದರೊಳಗೆ ಅದೆಲ್ಲಿರುತ್ತಿದ್ದರೋ ಏನೋ ಇದೇ ಮುದುಕ ಓಡಿಬಂದುಬಿಡುತ್ತಿದ್ದರು. ಒಬ್ಬ ಮುದುಕ ಓಡಿಬಂದರೆ – ಆ ಮುದುಕ ಸ್ವಲ್ಪ ಘಾಟೀ ಇರಬಹುದು – ನಿಂಗೇನು ಕಷ್ಟ ಅಂತ ಆಶ್ಚರ್ಯ ಪಡಬೇಡಿ. ಸ್ಕೂಲಿನಿಂದ ಬಂದು, ಕೊಳೆ ಬಟ್ಟೆ ಬದಲಾಯಿಸಿ, ಸಂಜೆ ನೀಟಾದ ಬಟ್ಟೆ ಧರಿಸಿ, ತಿಂಡಿ ತಿಂದು, ಆಟ ಆಡಲು ಜೇಬು ತುಂಬಾ ಗೋಲಿಯನ್ನೋ ಕೈಯಲ್ಲಿ ಬುಗುರಿಯನ್ನೋ ಹಿಡಿದುಕೊಂಡು ಹೊರಟಿರುವಾಗ ಈ ಘಾಟೀ ಮುದುಕ ಸಿಕ್ಕು, "ಲೋ ಸುಬ್ಬು, ಬಾರೋ ಇಲ್ಲಿ, ಮನೇ ಮುಂದೆ ಸೌದೆ ಒಡೆದದ್ದು ಹಾಗೇ ಬಿದ್ದಿದೆ. ನೀನೂ ವೆಂಕ್ಟೂ ಇಬ್ಬರೂ ಸೇರಿ ಒಳಗೆ ಬಚ್ಚಲು ಮನೆಗೆ ಹಾಕಿ. ಆಮೇಲೆ ಆಟ ಆಡಿದರೆ ಸರಿ" ಎಂದು ಆಜ್ಞೆ ಮಾಡಿದಾಗ ನಿಮಗೆ ಏನನ್ನಿಸುತ್ತದೆ? ಎರಡೂ ಕೈ ತುಂಬಾ ಸೌದೆ ಎತ್ತಿ ಹಾಕಿದಾಗ ಖಂಡಿತಾಗಿ ಕೈಗೆ ಸಿಗುರು ಸಿಕ್ಕಿ ಇಡೀ ಸಂಜೆ ನೋವಾಗುವುದು ಸಾಮಾನ್ಯ. ಹೇಗಾದರೂ ಮಾಡಿ ಕೆಲಸದಿಂದ ತಪ್ಪಿಸಿಕೊಳ್ಳೋಣ ಅಂದರೆ ಮುದುಕ ದಾರಿಗಡ್ಡವಾಗಿ ನಿಂತು ನಮ್ಮ ಹಿಂದೆ ಮುಂದೇನೇ ಓಡಾಡುತ್ತಿದ್ದರು. "ಲೋ, ವೆಂಕ್ಟೂ ಬರುವುದರಲ್ಲಿ ಈ ತೆಂಗಿನ ಜುಟ್ಟು ತೆಗೆಯೋ" ಅಂತಲೋ, ಗಿಡಕ್ಕೆ ಎರಡು ಬಕ್ಕೀಟು ನೀರು ಹಾಕು ಅಂತಲೋ ಏನಾದರೂ ದಿನಕ್ಕೊಂದು ಕೆಲಸ ಸಿದ್ಧಮಾಡಿಕೊಂಡೇ ಇರುತ್ತಿದ್ದರು. ವೆಂಕ್ಟೂ ಮನೆಗೆ ಯಾಕೆ ಹೋಗಬೇಕು, ಅವನೇ ಬರಲಿ ನಮ್ಮನೆಗೆ ಅಂದರೆ ಅವನನ್ನು ಮನೆಯಿಂದ ಬಿಟ್ಟರೆ ತಾನೆ. ಐದು ಜನ ಗಂಡು, ಐದು ಜನ ಹೆಣ್ಣು ಮೊಮ್ಮಕ್ಕಳು ಇರುವ ಮನೆಯಲ್ಲೆ ಹನ್ನೊಂದನೇ ನೆರೆಮನೆ ಹುಡುಗನಿಗೂ ಕೆಲಸ ಕೊಡುವ ಈ ಮುದುಕನ ಎದೆಗಾರಿಕೆ ನೋಡಿ! ನಾನು ಸ್ಕೂಲು ಬಿಟ್ಟು ಕಾಲೇಜಿಗೆ ಹೊರಟು ಚಡ್ಡಿ ಬಿಟ್ಟು ಪ್ಯಾಂಟಿಗೆ ಇಳಿದ ಮೇಲಾದರೂ ಕೆಲಸ ತಪ್ಪುತ್ತೆ ಏನೋ ಎಂದು ಯೋಚನೆ ಮಾಡಿದ್ದೆ. ಮೊದಲಿನ ಕೆಲಸವೇನೋ ಸ್ವಲ್ಪ ಮಟ್ಟಿಗೆ ತಪ್ಪಿತ್ತು. ಆದರೆ ಬೇರೆ ತರಹದ ಕೆಲಸ ಯಾವಾಗಲೂ ಕಾದೇ ಇರುತ್ತಿತ್ತು. "ಓಹ್, ಬಾ. ನೀನು ಹಿಂದೀ ಬರುತ್ತೆ ಅಂದಿದ್ದೆಯಲ್ಲ, ಎಲ್ಲಿ ಇದನ್ನು ಓದಿ ಹೇಳು ನೋಡೋಣ" ಅಂತಲೋ, "ಇಲ್ಲಿ ಕೂತ್ಕೋ ಬಾರಯ್ಯಾ, ನಂಗೆ ಸರಿಯಾಗಿ ಕಣ್ಣೇ ಕಾಣ್ತಿಲ್ಲ. ಎಲ್ಲಿ ಈ ಮಾಂಡವ್ಯ ಉಪನಿಷತ್ತಿನ ಇಪ್ಪತ್ತೆರಡನೇ ಪುಟದಿಂದ ಓದು ಕೇಳೋಣಂತೆ" ಅಂತಾರೆ. "ನಾನು ವೆಂಕ್ಟೂ ಜೊತೆ ಹೋಗಬೇಕಿತ್ತು," ಅಂದರೆ, "ಕೊತ್ಕೊಳ್ಳೋ ಸಾಕು, ವೆಂಕ್ಟೂ ಬರೋದು ಇನ್ನೂ ಒಂದು ಗಂಟೆ ಆಗುತ್ತೆ. ಅಷ್ಟರೊಳಗೆ ಇದೊಂದು ಸ್ವಲ್ಪ ಓದು" ಎಂದು ಜೋರು ಮಾಡುತ್ತಿದ್ದರು. ಓದಿದ್ದರಲ್ಲಿ ಒಂದೇ ಒಂದು ಪದವೂ ಅರ್ಥವಾಗುತ್ತಿರಲಿಲ್ಲ. ಆದರೂ ಓದಲೇಬೇಕು. ಕಷ್ಟಪಟ್ಟು ಓದಾದ ಮೇಲೆ, "ಏನು ಹುಡುಗರೊ, ಏನು ಕಾಲೇಜು ಓದುತ್ತೀರೋ ದೇವರಿಗೇ ಗೊತ್ತು, ಒಂದು ಸುಲಭವಾದ ಪುಸ್ತಕ ಓದಯ್ಯಾ ಅಂದರೆ, ಅದನ್ನು ಸರಿಯಾಗಿ ಓದಲೂ ಒದ್ದಾಡ್ತೀಯಲ್ಲ" ಎಂದು ಬೈಗಳ. ಆ ಮುದುಕನ್ನ ನೆನೆಸಿಕೊಂಡರೆ ಇಂದಿಗೂ ಸಿಂಹಸ್ವಪ್ನ– ಆದರೂ ಒಂದು ದಿನವೂ ತಪ್ಪದೆ ವೆಂಕ್ಟೂ ಮನೆಗೆ ನಾನೇಕೆ ಹೋಗುತ್ತಿದ್ದೆ ಅನ್ನುವುದು ಇಂದಿಗೂ ನನಗೇ ಅರ್ಥವಾಗಿಲ್ಲ.

ಕ್ರಿಕೆಟ್ ಆಡುವ ಹುಚ್ಚಿನಲ್ಲಿ ಪಕ್ಕದ ಮನೆಯ ಕಿಟಕಿಯ ಗಾಜು ಒಡೆದವರಲ್ಲಿ ನಾನೊಬ್ಬನೇ ಮೊದಲಲ್ಲ. ಇಲ್ಲಿಯವರೆಗೆ ಎಷ್ಟೋ ಜನ ಹುಡುಗರು, ಎಷ್ಟೋ ಕಿಟಕಿಯ ಗಾಜುಗಳನ್ನು ಎಲ್ಲೆಲ್ಲಿ ಒಡೆದಿದ್ದಾರೋ. ಆದರೆ ಗಾಜು ಒಡೆದಿರುವ ಆ ಎಲ್ಲಾ ಹುಡುಗರಿಗೂ ನಮ್ಮ ನೆರೆಮನೆಯಲ್ಲಿದ್ದಂತಹ ಹಿಡಿಂಬೆ ಎದು–ರಾಗಿರಲಾರಳು. ಗಾಜು ಒಡೆದ ಎರಡೇ ನಿಮಿಷದಲ್ಲಿ ಅಲ್ಲಿಂದ ನಾವೆಲ್ಲರೂ ಪರಾರಿಯಾಗಿ ಎಲ್ಲರೂ ದಿಕ್ಕಾಪಾಲಾಗಿ ಓಡಿ ಎಲ್ಲೆಲ್ಲೋ ಅವಿತುಕೊಂಡಿದ್ದೆವು. ನಾನು ಸಾಕಷ್ಟು ದೂರ ಓಡಿ, ತಲೆ ಮರೆಸಿಕೊಳ್ಳಲು ಸರಿಯಾದ ಜಾಗ ಕಾಣದೆ ಮನೆಯ ಹಿಂದಿನ ತೋಟದಲ್ಲಿ ಓಡಿದೆ

ಸಾಕಷ್ಟು ದೊಡ್ಡ ತೋಟ. ಬೇಲಿಯ ಹತ್ತಿರ
ದಲ್ಲೇ ಒಂದು ದೊಡ್ಡ ನೀರಿನ ತೊಟ್ಟಿ. ಅದರ
ಪಕ್ಕದಲ್ಲೇ ಬಟ್ಟೆ ಒಗೆಯಲು ಒಂದು ಕಟ್ಟೆ,
ಕಟ್ಟೆಯ ಪಕ್ಕದಲ್ಲೇ ಬಟ್ಟೆ ಒಗೆಯುತ್ತಾ
ನಿಂತಿದ್ದಳು ಒಬ್ಬ ಹಿಡಿಂಬೆ. ನಾನು ಓಡುತ್ತಿರು
ವಾಗ ನನ್ನ ಹಿಂದೆ ಮನೆಯಾಕೆ, "ಲೇ, ಹಿಡ್ಕೊಳ್ಳೇ
ಆ ಮುಂಡನ್ನ ಗಾಜು ಒಡೆದಿದ್ದಾನೆ" ಅಂತ
ಕಿರುಚುತ್ತಾ ಓಡಿ ಬಂದಳು. ಇತ್ತ ದರಿ,
ಅತ್ತ ಪುಲಿ ಅನ್ನುವ ಹಾಗೆ ನನ್ನ ಹಿಂದೆ
ಮನೆಯಾಕೆ ಏದುಸಿರು ಬಿಡುತ್ತಾ ಓಡುತ್ತಿ
ದ್ದಳು, ನನ್ನ ಮುಂದೆ ಹಿಡಿಂಬೆ ಸೀರೇ ಸೆರಗು
ಕಟ್ಟಿ ನಿಂತಿದ್ದಳು. ಆ ಕಡೆ ಈ ಕಡೆ ಯಾವ
ಕಡೆಯೂ ಹೋಗಲಾರದೆ ಮುಂದಿದ್ದ ಹಿಡಿಂಬೆ
ಯನ್ನು ತಪ್ಪಿಸಿ ಬೇಲಿಯನ್ನು ಹಾರಿ ಹೋಗುವ
ಯೋಚನೆ ಮಿಂಚಿನಂತೆ ಹೊಳೆಯಿತು. ಆದರೆ
ಆ ಮಿಂಚಿನಲ್ಲಿ ಮುಂದಿದ್ದ ಬಕೀಟು ನೀರು
ಕಾಣದೆ ಅದನ್ನು ಎಡವಿ ದೊಪ್ಪೆಂದು ನೀರಿನ
ತೊಟ್ಟಿಯಲ್ಲಿ ಬಿದ್ದೆ. ನನ್ನ ಅದೃಷ್ಟಕ್ಕೆ ನೀರಿನ
ತೊಟ್ಟಿಯೊಳಗೆ ನನ್ನ ಎದೆಯವರೆಗೆ ಮಾತ್ರ
ನೀರಿದ್ದಿತು. ಬಿದ್ದ ರಭಸ, ಹಿಡಿಂಬೆಯ ಆರ್ಭಟ,
ಮನೆಯಾಕೆಯ ಕೂಗು ಇವುಗಳ ಮಧ್ಯ ನೀರಿ
ನಲ್ಲಿ ಒದ್ದೆಮುದ್ದೆಯಾಗಿದ್ದ ನನ್ನ ಪೇಚಾಟ
ಕೇಳಬೇಡಿ. ಅಷ್ಟಕ್ಕೇ ಮುಗಿದಿದ್ದರೆ ಪರವಾಗಿರ
ಲಿಲ್ಲ. ನನ್ನ ನಿಸ್ಸಹಾಯಕ ಸ್ಥಿತಿ ನೋಡಿ
ಹಿಡಿಂಬೆಗೂ ಎಲ್ಲೂ ಇಲ್ಲದ ಧೈರ್ಯ ಬಂದಿರ
ಬೇಕು. ಅವಳು, ಮನೆಯಾಕೆ ಇಬ್ಬರೂ ಓಡಿ
ಬಂದು ನನ್ನನ್ನು ನೀರಿನ ತೊಟ್ಟಿಯಿಂದ ಮೇಲೆ
ತ್ತಿದ್ದರು. ಹೇಗೆ ಗೊತ್ತೆ? ತಾಯಿ ಬೆಕ್ಕು
ಮರಿಯನ್ನು ಕತ್ತಿನ ಹಿಂಭಾಗವನ್ನು ತನ್ನ
ಬಾಯಲ್ಲಿ ಕಚ್ಚಿಕೊಂಡು ಹೋಗುತ್ತದಲ್ಲ,
ಹಾಗೇ ಎಡಗೈನಿಂದ ನನ್ನ ಷರ್ಟಿನ ಕಾಲರ್
ಹಿಡಿದು ನನ್ನನ್ನು ಹಿಡಿಂಬೆ ನೀರಿನಿಂದ ಮೇಲೆತ್ತಿ
ನೆಲಕ್ಕಿಂತ ಒಂದು ಅಡಿ ಮೇಲೆ ನಿಲ್ಲಿಸಿ ಹಿಡಿ
ದಳು. ಇಷ್ಟು ಹೊತ್ತಿಗೆ ನಾನು ಅಲ್ಲೇ ಬೀಳಿ
ಸಿದ್ದ ಕ್ರಿಕೆಟ್ ಬ್ಯಾಟ್ ಹಿಡಿದೆತ್ತಿ ಮನೆಯಾಕೆ
ಸಿದ್ಧವಾಗಿದ್ದವಳು, ನನ್ನ ಮೆತ್ತನೆಯ ಹಿಂಭಾಗಕ್ಕೆ



ಎರಡು ಬಿಗಿದಳು. ನೀರಿನಲ್ಲಿ ಒದ್ದೆ
ಮುದ್ದೆಯಾಗಿದ್ದರೂ ನನ್ನ ಹಿಂಭಾಗ ಚುರ್
ಅನ್ನುತ್ತಿತ್ತು. ಆ ಬಿಸಿಯಿಂದ ಸ್ವಲ್ಪ ತಣ್ಣ-
ಗಾಗಲಿ ಎಂದು ಹಿಡಿಂಬೆ ಮತ್ತೆ ನನ್ನನ್ನು ನೀರಿನ
ತೊಟ್ಟಿಯಲ್ಲಿ ಅದ್ದಿ ಎತ್ತಿದಳು. ಎತ್ತಿದ ಮೇಲೆ
ಮತ್ತೆ ಎರಡೇಟು, ಜೊತೆಗೆ ಹೆಂಗಸರ
ಬಾಯಲ್ಲಿ ಬರಬಾರದೆನ್ನುವ ಅವಾಚ್ಯ ಶಬ್ದಗಳು,
ಬೈಗುಳ. ಇದೇ ರೀತಿ ಕೆಲವು ಬಾರಿ ನಡೆದ
ಮೇಲೆ, ಹಿಡಿಂಬೆ ನನ್ನನ್ನು ದೊಪ್ ಎಂದು
ನೆಲಕ್ಕೆ ಬಿಟ್ಟಳು. ಸೋಪಿನ ನೀರಿನಿಂದ
ತೊಯ್ದು ಕೊಚ್ಚೆಯಾಗಿದ್ದ ನೆಲದ ಮಣ್ಣೆಲ್ಲಾ
ಬಟ್ಟೆ ಮೈ ಮೂತಿಗೆಲ್ಲಾ ಅಂಟಿಕೊಂಡಿತ್ತು.
ಹಿಂಭಾಗ ಇನ್ನೂ ಚುರ್ ಅನ್ನುತ್ತಲೇ ಇತ್ತು,
ಕಿವಿಯಲ್ಲಿ ಆ ಹೆಂಗಸರ ಬೈಗುಳ ಗುಂಯ್
ಅನ್ನುತ್ತಾ ಇತ್ತು. ಜೊತೆಗೆ ನಮ್ಮಪ್ಪನಿಗೆ
ಹೇಳ್ತೀನಿ ಅನ್ನುವ ಹೆದರಿಕೆ — ಇಂತಹ
ಚಿಂತಾಜನಕ ಸ್ಥಿತಿಯಲ್ಲಿ ನಾನು ಮನೆಯ ಕಡೆ
ಹೊರಟೆ. ಇಂದಿಗೂ ಕ್ರಿಕೆಟ್ ಮ್ಯಾಚಿನಲ್ಲಿ ನೂರು
ರನ್ನು ಹೊಡೆದು ಜಯಭೇರಿ ಹೊಡೆಯುತ್ತಾ
ವಾಪಸ್ಸು ಬರುವಾಗಲೂ ನನಗೆ ಆ ಹಿಡಿಂಬೆಯ
ಸಿಂಹಸ್ವಪ್ನ ತಪ್ಪಿದ್ದಲ್ಲ! ✡

ಅವುಗಳ ರೋಮಾಂಚಕ
ಕತೆ ಇಲ್ಲಿದೆ

# ವಜ್ರಗಳು

**ಬಾಳೂಸಾಗರ ಪಾಂಡುರಂಗಯ್ಯ**

ವಜ್ರದ ಕಥೆ ಚಿನ್ನದ ಕಥೆಯಂತೆಯೇ ಪುರಾತನವಾಗಿದೆ. ಶತಮಾನಗಳು ಉರುಳಿದರೂ ವಜ್ರದ ಶ್ರೇಷ್ಠತೆಗೆ, ಮೌಲಿಕತೆಗೆ ಧಕ್ಕೆಯುಂಟಾಗಿಲ್ಲ. ಹಿಂದೆ ಕೇವಲ ಆಭರಣಗಳ ತಯಾರಿಕೆಗೆ ಬಳಸುತ್ತಿದ್ದ ವಜ್ರವನ್ನು ಇಂದು ಔದ್ಯಮಿಕ ಕ್ಷೇತ್ರದಲ್ಲಿ ಹೆಚ್ಚುಹೆಚ್ಚಾಗಿ ಬಳಸುತ್ತಿದ್ದಾರೆ.

ಮಾನವನಿಗೆ ಪ್ರಾಗೈತಿಹಾಸಿಕ ಕಾಲದಿಂದಲೂ ವಜ್ರದ ಪರಿಚಯ ಇದೆ. ವೇದಗಳಲ್ಲಿ ಮತ್ತು ಸಂಸ್ಕೃತ ಗ್ರಂಥಗಳಲ್ಲಿ ವಜ್ರದ ಉಲ್ಲೇಖವಿದೆ. ವಜ್ರದ ವೈಜ್ಞಾನಿಕ ಸ್ವರೂಪ ಜಗತ್ತಿಗೆ ಅರ್ಥವಾದದ್ದು ಮಾತ್ರ ತೀರ ಇತ್ತೀಚೆಗೆ.

ಪ್ರಾಚೀನ ಮಾನವ ವಜ್ರದ ಸುತ್ತ ಅನೇಕ ಕಥೆಗಳನ್ನು ಹೆಣೆದಿದ್ದ. ಚೀನೀ ಲೋಕಗೀತೆಗಳಲ್ಲಿ ವಜ್ರವು ಚಿನ್ನದ ಮತ್ತೊಂದು ಸ್ವರೂಪ ಎಂಬ ಕಲ್ಪನೆಯಿದ್ದರೆ ಐರೋಪ್ಯ ದೇಶಗಳಲ್ಲಿ ವಜ್ರ ಚಿನ್ನದ ಗಟ್ಟಿ ರೂಪ ಎಂಬ ನಂಬಿಕೆಯಿತ್ತು. ವಜ್ರದ ಉತ್ಪತ್ತಿಯ ಬಗೆಗೂ ಅನೇಕ ಮೂಢನಂಬಿಕೆಗಳು ಪ್ರಚಲಿತವಿದ್ದುವು. ಬೌದ್ಧ ಜಾತಕ-ಕಥೆಗಳು ವಜ್ರ ಸಮುದ್ರದಿಂದ ದೊರೆಯುತ್ತದೆಂದು ವರ್ಣಿಸಿದ್ದರೆ, ಹಿಂದೂಗಳ ಕಲ್ಪನೆಯ ಪ್ರಕಾರ ಸರ್ಪದ ಹೆಡೆಯಲ್ಲಿರುವ ಮಣಿಯೇ ವಜ್ರದ ಶುದ್ಧರೂಪ. ಆದರೆ ವಜ್ರ ಪಾಶ್ಚಿಮಾತ್ಯರಿಗೂ ಪೌರ್ವಾತ್ಯರಿಗೂ ಪಾವಿತ್ರ್ಯದ ಪ್ರತೀಕವಾಗಿತ್ತು.

ವಜ್ರವು ಕಲ್ಲಿದ್ದಲಿನ ಶುದ್ಧರೂಪವೆಂಬುದು ಬಹುಕಾಲದವರೆಗೆ ತಿಳಿದಿರಲಿಲ್ಲ. ಬಹುಮೂಲ್ಯ ಹರಳುಗಳಲ್ಲಿ, ಖನಿಜ ಪದಾರ್ಥಗಳಲ್ಲಿ ಕಾಣಸಿಗದ ಕೆಲವು ವಿಶೇಷ ಗುಣಗಳು ವಜ್ರದಲ್ಲಿ ಇರುವುದರಿಂದಲೇ ಅದು ಅತ್ಯಮೂಲ್ಯವಾಗಿದೆ.

ಆಂಗ್ಲ ಭಾಷೆಯಲ್ಲಿ ವಜ್ರಕ್ಕೆ 'ಡೈಮಂಡ್' ಎನ್ನುವರು. ಈ ಶಬ್ದ ಗ್ರೀಕ್ ಮತ್ತು ಲ್ಯಾಟಿನ್ ಭಾಷೆಯ 'ಅಡಾಮಸ್'ನ ಅಪಭ್ರಂಶರೂಪವಾಗಿದೆ: 'ಅಡಾಮಸ್'ನ ಅರ್ಥ ಅಜೇಯ ಎಂದಾಗುತ್ತದೆ. ವಜ್ರ ಉಳಿದೆಲ್ಲ ಧಾತುಗಳಿಗಿಂತಲೂ ಕಠಿಣವಾದುದರಿಂದ ಅದಕ್ಕೆ ಬಹುಶಃ ಈ ಹೆಸರು ಬಂದಿರಬಹುದು.

ಪ್ರಕೃತಿಯಲ್ಲಿ ಪ್ರಕಾಶಮಾನವಾದ ಚಿಕ್ಕ ಚಿಕ್ಕ ಹರಳುಗಳ ರೂಪದಲ್ಲಿ ವಜ್ರ ದೊರೆಯು

ತ್ತದೆ. ಇಂದಿನ ವೈಜ್ಞಾನಿಕ ಯುಗದಲ್ಲೂ ವಜ್ರವನ್ನು ಪ್ರಯೋಗಶಾಲೆಯಲ್ಲಿ ತಯಾರಿಸುವುದು ಕಷ್ಟಸಾಧ್ಯ.

ಮೊತ್ತಮೊದಲಿಗೆ ಭಾರತದಲ್ಲೇ ವಜ್ರ ದೊರೆಯುತ್ತಿತ್ತೆಂಬುದಕ್ಕೆ ಅನೇಕ ಐತಿಹ್ಯಗಳಿವೆ. ಪ್ರಾಚೀನ ರೋಮನ್ನರು ತಮ್ಮ ಜಹಜುಗಳ ಮೇಲೆ ಕಲಾತ್ಮಕ ಚಿತ್ರಗಳನ್ನು ಬಿಡಿಸಲು ವಜ್ರವನ್ನು ಉಳಿಯಂತೆ ಉಪಯೋಗಿಸುತ್ತಿದ್ದರು. ಕಚ್ಚಾ ವಜ್ರವನ್ನು ಕತ್ತರಿಸಿ ಅದನ್ನು ಸುಂದರ ಆಕಾರಗಳಲ್ಲಿ ಮಾರ್ಪಡಿಸುವ ಕುಶಲಕಾರ್ಯ ಭಾರತದಿಂದಲೇ ಉಳಿದೆಲ್ಲ ದೇಶಗಳಿಗೂ ಪ್ರಚುರವಾಯಿತು. ಇದನ್ನು ಹದಿನಾಲ್ಕನೆಯ ಶತಮಾನದಲ್ಲಿ ಮೊತ್ತಮೊದಲಿಗೆ ಐರೋಪ್ಯರು ಕಲಿತುಕೊಂಡರು. ಆದರೆ ವಜ್ರವನ್ನು ವೈಜ್ಞಾನಿಕ ರೀತಿಯಲ್ಲಿ ಕತ್ತರಿಸಿ, ಅದನ್ನು ಸಾಣೆ ಹಿಡಿಯಲು ಪ್ರಯತ್ನಿಸಿದವರಲ್ಲಿ ಲುಡ್ವಿಗ್ ಎಂಬ ವಜ್ರಗಳ ವ್ಯಾಪಾರಿ ಮೊತ್ತಮೊದಲಿಗ. ಅವನು ೧೪೭೬ರಲ್ಲಿ ತನ್ನ ಪ್ರಯತ್ನದಲ್ಲಿ ಸಫಲನಾದ. ಮುಂದೆ ಹದಿನೇಳನೇ ಶತಮಾನದಿಂದೀಚೆ ಅನೇಕ ಸಂಶೋಧನೆಗಳು ನಡೆದು ಈಗ ವಜ್ರವನ್ನು ಸುಲಭವಾಗಿ ಆಭರಣಗಳನ್ನಾಗಿ ಮಾರ್ಪಡಿಸುವ ಸೌಕರ್ಯ ಜಗತ್ತಿನ ಅನೇಕ ಪ್ರಮುಖ ಸ್ಥಳಗಳಲ್ಲಿದೆ.

ವಜ್ರದ ಕಾಠಿಣ್ಯವೇ ಅದರ ರಹಸ್ಯವನ್ನು ಭೇದಿಸಲು ಪ್ರಚೋದಕವಾಯಿತಲ್ಲದೆ ಈ ಬಗ್ಗೆ ನಿರಂತರ ಸಂಶೋಧನೆ ನಡೆದಿದೆ. ೧೬೯೪ರಲ್ಲಿ ಫ್ರೆಂಚ್ ವಿಜ್ಞಾನಿಯೊಬ್ಬ ತನ್ನ ಪ್ರಯೋಗಗಳ ಮೂಲಕ ವಜ್ರ ಭೂತಗನ್ನಡಿಯಿಂದ ಕೇಂದ್ರೀಕರಿಸಿದ ಸೂರ್ಯ ಪ್ರಕಾಶದಲ್ಲಿ ಸುಲಭವಾಗಿ ಸುಟ್ಟುಹೋಗುತ್ತದೆ ಎಂಬುದನ್ನು ಸಿದ್ಧಪಡಿಸಿದ. ವಜ್ರ ಜ್ವಲನಶೀಲ ಪದಾರ್ಥವೊಂದರಿಂದ ಉಂಟಾಗಿದೆ ಎಂಬುದನ್ನು ಸರ್ ಐಸಾಕ್ ನ್ಯೂಟನ್ನನು ತನ್ನ ಪ್ರಯೋಗಗಳ ಮೂಲಕ ಸ್ಥಿರಪಡಿಸಿದ. ವಜ್ರ ಸಂಪೂರ್ಣ ಸುಟ್ಟುಹೋದಾಗ ಅದರಿಂದ ಉಂಟಾಗುವ ಅನಿಲವೇ ಇಂಗಾಲದ ಡೈ-ಆಕ್ಸೈಡ್ ಎಂಬುದು ವಿಜ್ಞಾನಿಗಳಿಗೆ ನಿರಂತರ ಸಂಶೋಧನೆಯಿಂದ ಖಚಿತವಾಯಿತು. ಕಲ್ಲಿದ್ದಲನ್ನು ಸುಟ್ಟಾಗಲೂ ಈ ಅನಿಲ ಉತ್ಪತ್ತಿಯಾಗುತ್ತದೆ. ಆದ್ದರಿಂದ ವಜ್ರ ಕಲ್ಲಿದ್ದಲಿನ ಇನ್ನೊಂದು ರೂಪ ಎಂಬ ವಿಷಯ ಆಧುನಿಕ ಜಗತ್ತಿಗೆ ವಿದಿತವಾಯಿತು.

ಅಂದರೆ ಕಲ್ಲಿದ್ದಲೇ, ವಜ್ರವೇ? ಅಲ್ಲ. ಈ ಎರಡೂ ವಸ್ತುಗಳಲ್ಲಿ ಅಂತರವಿದೆ. ವಜ್ರ ಯಾವರೋ ಜಗತ್ತಿನ ಅತಿ ಕಠಿಣ ವಸ್ತುಗಳಲ್ಲೊಂದಾದರೆ, ಕಲ್ಲಿದ್ದಲು ಅಥವಾ ಗ್ರಾಫೈಟ್ ಅತ್ಯಂತ ಮೃದು. ವಜ್ರ ಪ್ರಕಾಶಮಾನವಾದದ್ದು, ಪಾರದರ್ಶಕವಾದದ್ದು; ಕಲ್ಲಿದ್ದಲು ಅಪ್ರಕಾಶಮಾನವಾದುದು, ಅಪಾರದರ್ಶಕ. ವಜ್ರ ಭಾರವಾಗಿದ್ದರೆ, ಕಲ್ಲಿದ್ದಲು ಹಗುರಾದ ವಸ್ತು. ವಜ್ರ ಸುಲಭವಾಗಿ ಲಭ್ಯವಾದುದಲ್ಲ; ಆದರೆ ಕಲ್ಲಿದ್ದಲು ಎಲ್ಲೆಡೆಯೂ ದೊರೆಯುತ್ತದೆ.

ಪ್ರಕೃತಿಯಲ್ಲಿ ಸಿಗುವ ವಜ್ರ ಅಶುದ್ಧರೂಪದಲ್ಲಿರುತ್ತದೆ. ಅದನ್ನು ನೇರವಾಗಿ ಆಭರಣಗಳಲ್ಲಿ ಬಳಸಲು ಬರುವುದಿಲ್ಲ. ಆದ್ದರಿಂದಲೇ ನೈಸರ್ಗಿಕ ವಜ್ರವನ್ನು ಕತ್ತರಿಸಿ ಪಾಲಿಶ್ ಮಾಡುವ ಮೊದಲು, ಅದನ್ನು ಶುದ್ಧ ವಜ್ರ, ಬೋರ್ಟ್, ಬೇಲಾಸ್ ಹಾಗೂ ಕಾರ್ಬೊನೆಡೋ ಎಂದು ನಾಲ್ಕು ವರ್ಗಗಳಲ್ಲಿ ವಿಂಗಡಿಸಲಾಗುತ್ತದೆ.

ಶುದ್ಧ ವಜ್ರವನ್ನು ಆಭರಣಗಳ ತಯಾರಿಕೆಗೆ ಬಳಸಿದರೆ ಉಳಿದ ಮೂರು ಬಗೆಯ ವಜ್ರವನ್ನು ಔದ್ಯಮಿಕ ಕ್ಷೇತ್ರಗಳಲ್ಲಿ ಹೆಚ್ಚಾಗಿ ಬಳಸುತ್ತಾರೆ.

ಪ್ರಾಕೃತಿಕ ವಜ್ರವನ್ನು ಕತ್ತರಿಸಿ, ಸಾಣೆ ಹಿಡಿದು ಅದನ್ನು ಪ್ರಕಾಶಮಾನವಾಗಿಸುವ ವಿಧಾನವೇ ವಜ್ರದ ಸಂಸ್ಕರಣ. ಇದೂ ಒಂದು ಕಲೆಯೇ. ಇದರಲ್ಲಿ ಕೆಳಕಂಡ ಮೂರು ಹಂತಗಳಿವೆ:

ಆವಶ್ಯಕ ಆಕಾರಕ್ಕೆ ಕತ್ತರಿಸುವುದು, ಪಾರ್ಶ್ವದ ಸಾಣೆ ಹಿಡಿಯುವುದು, ಪಾಲಿಶ್ ಮಾಡಿ ಹೊಳಪನ್ನುಂಟುಮಾಡುವುದು.

ಈ ಕಾರ್ಯಗಳನ್ನು ಮಾಡುವಲ್ಲಿ ಅತ್ಯಂತ ಎಚ್ಚರಿಕೆ ಅಗತ್ಯ. ತುಸು ಅಜಾಗರೂಕತೆಯೂ ಇಡೀ ವಜ್ರದ ಸ್ವರೂಪವನ್ನೇ ಕೆಡಿಸೀತು. ವಜ್ರದ ಸಂಸ್ಕರಣ ಕಾರ್ಯವನ್ನು ಅತ್ಯಂತ ಕುಶಲ ರತ್ನಪರೀಕ್ಷಕನಿಗೆ ಮಾತ್ರ ಒಪ್ಪಿಸುತ್ತಾರೆ.

## ವ್ಯಾಕುಲತೆ

ದಾಪುಗಾಲಲ್ಲಿ ನಡೆಯುತ್ತ
ಹೆಣಗುವ ಬದುಕು—
ಬಯಸುತ್ತದೆ :
ಕಂಪಿತ ನಿಲುವಿನಲ್ಲೂ
ಅನ್ವೇಷಕ ನೋಟಗಳನ್ನು ;
ನಿರೀಕ್ಷಿಸುತ್ತದೆ :
ದೈತ್ಯನಂತೆ ಸಾವು
ಆಗಮಿಸುವ ಅಟ್ಟಹಾಸವನ್ನು.
ಆಳಕ್ಕಿಳಿಯಲಾರದ ಮೂಕರು-
ನಾವೆಲ್ಲ

ಜರ್ಮನ್ ಮೂಲ : ಆಗಸ್ಟ್ ಸ್ಟ್ರಾಮ್
ಕನ್ನಡಕ್ಕೆ : ಡಿ. ಎಲ್. ಮಂಜುನಾಥ

ಒಮ್ಮೊಮ್ಮೆ ಒಂದು ವಜ್ರದ ಸಂಸ್ಕರಣಕ್ಕೆ ಒಂದೆರಡು ವಾರಗಳಿಂದ, ಒಂದೆರಡು ತಿಂಗಳ ಸಮಯವೂ ಹಿಡಿಯುತ್ತದೆ. ವಜ್ರವನ್ನು ಕತ್ತ-ರಿಸುವ ಮೊದಲು ಅದರ ಆಕಾರವನ್ನು ಕೂಲಂಕಷವಾಗಿ ಅಭ್ಯಾಸ ಮಾಡಬೇಕಾಗುತ್ತದೆ. ಅನಂತರ ಅದನ್ನು ಎಷ್ಟು ಭಾಗಗಳಾಗಿ ತುಂಡರಿಸಬೇಕು ಎಂಬುದನ್ನು ನಿಖರವಾಗಿ ಮೊದಲೇ ನಿಶ್ಚಯಿಸಬೇಕಾಗುತ್ತದೆ. ನಂತರ, ಮತ್ತೊಂದು ವಜ್ರದ ತುದಿಯಿಂದ ಕತ್ತ-ರಿಸುವ ವಜ್ರದ ಮೇಲ್ಮೈಯಲ್ಲಿ ಗುರುತುಗಳನ್ನು ಮಾಡಿ, ಉಕ್ಕಿನ ಚೂಪಾದ ಚಾಣದ ಸಹಾಯದಿಂದ ಅದನ್ನು ತುಂಡರಿಸುತ್ತಾರೆ.

ಇತಿಹಾಸ ಪ್ರಸಿದ್ಧ 'ಕಲ್ಲೀನನ್' ವಜ್ರದ ಪ್ರಾಕೃತಿಕ ತೂಕ ೩೧೦೬ ಕ್ಯಾರೆಟ್ ಇತ್ತು. ಅದನ್ನು ೧೯೦೮ರಲ್ಲಿ ಕತ್ತರಿಸಲಾಯಿತು. ಇದಕ್ಕೆ ಪೂರ್ವಭಾವಿಯಾಗಿ ೯ ತಿಂಗಳವರೆಗೆ ಅದರ ವಿವಿಧ ಆಕಾರಗಳನ್ನು ೩ ಮಣ್ಣಿನಲ್ಲಿ ಮಾಡಿ, ಅದನ್ನು ಅಭ್ಯಸಿಸಿ, ಹೇಗೆ ಕತ್ತರಿಸಿದರೆ ಅತಿ ಹೆಚ್ಚು ಭಾಗಗಳನ್ನು ಹೊರತೆಗೆಯಬಹುದೆಂದು ಆಲೋಚಿಸಿ ನಂತರ ಬಹು ಕುಶಲತೆಯಿಂದ ಅದನ್ನು ೯ ದೊಡ್ಡ ಮತ್ತು ೯೬ ಸಣ್ಣ ತುಂಡುಗಳಾಗಿ ಕತ್ತರಿಸಲಾಯಿತು. ಇದಕ್ಕೂ ಮೊದಲು ೧೯೦೩ರಲ್ಲಿ, ಮತ್ತೊಂದು ಜಗತ್ಪ್ರಸಿದ್ಧ ವಜ್ರ 'ಎಕ್ಸೆಲ್ಸಿಯರ'ನ್ನು ಕತ್ತರಿಸಲು ಸುಮಾರು ಎರಡು ತಿಂಗಳುಗಳೇ ಬೇಕಾದವು.

ಪ್ರಾಕೃತಿಕ ವಜ್ರವನ್ನು ಕತ್ತರಿಸಿ ತುಂಡು ಮಾಡಿದ ನಂತರ, ಅದನ್ನು ಉಜ್ಜಿ ಪಾರ್ಶ್ವದ ಸಾಣೆ ಹಿಡಿದು, ನಂತರ ನಿಮಿಷಕ್ಕೆ ೨೫೦೦ ಸುತ್ತು ವೇಗದಿಂದ ತಿರುಗುವ ಕಬ್ಬಿಣದ ಚಕ್ರ (ಸ್ಕೀಫ್)ಗಳ ಸಹಾಯದಿಂದ ಇದನ್ನು ಪಾಲಿಶ್ ಮಾಡುತ್ತಾರೆ.

ಇಂದಿನ ಔದ್ಯಮಿಕ ಕ್ಷೇತ್ರದಲ್ಲಿ ಕೀಳು ತರಗತಿಯ ವಜ್ರಗಳ ಉಪಯೋಗ ಹೆಚ್ಚಾಗಿದೆ. ಅಮೆರಿಕ, ರಶಿಯಾಗಳಲ್ಲಿ ಔದ್ಯಮಿಕ ವಿಕಾಸಕ್ಕೆ ಬೇಕಾದ 'ವಜ್ರಗಳನ್ನು ರಾಸಾಯನಿಕ ವಿಧಾನದಿಂದ ತಯಾರಿಸುತ್ತಿದ್ದಾರೆ.

ಗ್ರೈಂಡಿಂಗ್ ಮತ್ತು ಪಾಲಿಶಿಂಗ್ ಉದ್ದಿಮೆಯಲ್ಲಿ ವಜ್ರದ ಬಳಕೆ ಅನಿವಾರ್ಯ. ಸಾಣೆ ಕಲ್ಲುಗಳ ತಯಾರಿಕೆಯಲ್ಲಿ 'ಬೋರ್ಟ್ಸ್' ವಜ್ರದ ಹುಡಿಯನ್ನು ಉಪಯೋಗಿಸಲಾಗುತ್ತದೆ. ಡ್ರಿಲ್ ಯಂತ್ರಗಳ ತಯಾರಿಕೆಯಲ್ಲೂ, ಗಡಿಯಾರಗಳ ತಯಾರಿಕೆಯಲ್ಲೂ ವಜ್ರ ಬಳಸುವರು. ಫೋನೋಗ್ರಾಫಿನ ಸೂಜಿಗಳ ತುದಿಗೂ, ವಜ್ರ ಲೇಪವಿರುತ್ತದೆ.

ಕೆಲವು ದೇಶಗಳಲ್ಲಿ ಮಾತ್ರ ವಜ್ರ ದೊರೆಯುತ್ತದೆ. ಇದು ಭಾರತ, ಆಫ್ರಿಕ ಮತ್ತು ದಕ್ಷಿಣ ಅಮೇರಿಕಗಳಲ್ಲಿ ವಿಶೇಷವಾಗಿ ಸಿಕ್ಕುತ್ತದೆ.

ಭಾರತದಲ್ಲಿ ವಜ್ರಗಳಿಗಾಗಿ ಬಹು ಪ್ರಾಚೀನ ಕಾಲದಿಂದಲೂ ಗಣಿಗಳನ್ನು ತೋಡುತ್ತಾ ಬಂದಿದ್ದಾರೆ. ತಮಿಳ್ನಾಡು, ಆಂಧ್ರ ಪ್ರದೇಶ, ಮಧ್ಯ ಪ್ರದೇಶ, ಒಡಿಸ್ಸಾ ಮತ್ತು ಗುಜರಾತ್ ರಾಜ್ಯಗಳ ಗಣಿಗಳಿಂದ ಪ್ರತಿ ವರ್ಷ ಸುಮಾರು ೪೦೦೦ ಕ್ಯಾರೆಟ್ ತೂಕದ ವಜ್ರಗಳನ್ನು ತೆಗೆಯಲಾಗುತ್ತಿದೆ.

ಮಧ್ಯಪ್ರದೇಶದ ಪನ್ನಾ ಜಿಲ್ಲೆಯ ಭುಜಗಾಂವ್ ಸಮೀಪದಲ್ಲಿ ಹೇರಳವಾಗಿ ವಜ್ರಗಳು ದೊರೆಯುತ್ತವೆ. ಗೋಲ್ಕೊಂಡ ಹಲವು ವರ್ಷಗಳ ಹಿಂದೆ ಜಗದ್ವಿಖ್ಯಾತ ವಜ್ರಗಳ ಗಣಿ

ಯಾಗಿತ್ತು. ಆದರೆ ಈಗ ಆ ಪ್ರದೇಶ ಪಾಳು ಬಿದ್ದಿದೆ. ಪೆನ್ನಾರ್ ಮತ್ತು ಗೋದಾವರಿ ನದೀ ತೀರಗಳಲ್ಲಿ ಹೇರಳವಾಗಿ ವಜ್ರ ಸಿಕ್ಕುತ್ತಿತ್ತು. ಆ ಸ್ಥಳಗಳನ್ನೆಲ್ಲಾ ಈಗ ಪುನಃ ಪರಿಶೋಧಿಸಿ ಅಲ್ಲಿ ಮತ್ತೊಮ್ಮೆ ವಜ್ರದ ಗಣಿ ಉದ್ಯಮ ಪುನರುಜ್ಜೀವನಗೊಳಿಸುವ ಪ್ರಯತ್ನ ನಡೆದಿದೆ.

ಉತ್ತರ ಭಾರತದ ಬುಂದೇಲ್‌ಖಂಡದಲ್ಲಿ ಕೇನ ಮತ್ತು ಸೋನ ನದಿಗಳ ಮಧ್ಯದ ಕ್ಷೇತ್ರದಲ್ಲಿ ವಜ್ರಗಳು ಈಗಲೂ ಸಿಕ್ಕುತ್ತಿವೆ. ಬಿಹಾರ ಮತ್ತು ಒರಿಸ್ಸಾ ರಾಜ್ಯಗಳಲ್ಲಿ ಶ್ರೇಷ್ಠ ದರ್ಜೆಯ ವಜ್ರಗಳು ಸಿಕ್ಕುತ್ತವೆ. ಪಶ್ಚಿಮ ಘಟ್ಟದ ಕೆಲವು ಭಾಗಗಳಲ್ಲೂ ವಜ್ರಗಳು ದೊರೆತಿವೆ. ಇಲ್ಲಿಗೆ ಈ ವಜ್ರಗಳು ಎಲ್ಲಿಂದ ಬಂದವು ಎಂಬ ಬಗ್ಗೆ ಇನ್ನೂ ವಿವರವಾದ ಮಾಹಿತಿ ದೊರೆತಿಲ್ಲ.

ಹದಿನೆಂಟನೆಯ ಶತಮಾನದ ಮಧ್ಯಭಾಗದಲ್ಲಿ ದಕ್ಷಿಣ ಅಮೇರಿಕದಲ್ಲಿ ವಜ್ರದ ಗಣಿಗಳನ್ನು ಕಂಡು ಹಿಡಿದರು. ಬ್ರೆಜಿಲ್, ಬ್ರಿಟಿಷ್ ಗಯಾನಾ ಮತ್ತು ವೆನಿಜುಅಲಾ ಪ್ರಾಂತ್ಯದಲ್ಲಿ ವಜ್ರ ಹೇರಳವಾಗಿ ದೊರೆಯುತ್ತದೆ. ೧೭೨೫ರಲ್ಲಿ ಬ್ರೆಜಿಲ್ಲಿನ ತೇಜುಕೋ ಎಂಬಲ್ಲಿ ಪ್ರಪ್ರಥಮ ಬಾರಿಗೆ ವಜ್ರದ ಶೋಧನೆ ನಡೆಯಿತು. ೧೭೪೦ ರ ವೇಳೆಗೆ ಅನೇಕ ವಜ್ರದ ಗಣಿಗಳು ಪ್ರಾರಂಭವಾದುವು. ೧೮೬೭ರ ವರೆಗೂ ಬ್ರೆಜಿಲ್ ಜಗತ್ತಿನ ಪ್ರಮುಖ ವಜ್ರಗಳ ವ್ಯಾಪಾರಿ ಕೇಂದ್ರವಾಗಿತ್ತು. ಅನಂತರ ಆಫ್ರಿಕದಲ್ಲಿ ವಜ್ರದ ಗಣಿ ಉದ್ಯಮ ಪ್ರಾರಂಭವಾಯಿತು. ಆಫ್ರಿಕದ ಕಾಂಗೋ, ಘಾನಾ, ದಕ್ಷಿಣ ಆಫ್ರಿಕ, ಗಯಾನಾ, ಟಾಂಗನೀಕ, ಐವರೀ ಕೋಸ್ಟ್ ವಜ್ರಗಳ ತವರೂರಾಗಿವೆ. ವಿಶ್ವದ ಮಾರುಕಟ್ಟೆಯಲ್ಲಿ ಮಾರಾಟವಾಗುವ ವಜ್ರದ ಬಹುಪಾಲು ಆಫ್ರಿಕದ ಗಣಿಗಳಲ್ಲೇ ದೊರೆತಿತ್ತು. ವಿಶ್ವವಿಖ್ಯಾತ ಕಲ್ಲೀನನ್ ಮತ್ತು 'ಸ್ಟಾರ್ ಆಫ್ ಸೌತ್' ವಜ್ರಗಳು ದೊರೆತದ್ದು ಇಲ್ಲಿಯ ಗಣಿಗಳಲ್ಲೇ.

ಬೋರ್ನಿಯೋ, ಆಸ್ಟ್ರೇಲಿಯ, ದಕ್ಷಿಣ ರೊಡೇಶಿಯ, ಅಮೇರಿಕ, ರಷ್ಯಾ ದೇಶಗಳಲ್ಲೂ ವಜ್ರವನ್ನು ತೆಗೆಯಲಾಗುತ್ತಿದೆ.

## ಜಗತ್ಪ್ರಸಿದ್ಧ ವಜ್ರಗಳು

**ಕಲ್ಲೀನನ್**- ಇದು ೧೯೦೫ ಜನವರಿ ೨೫ ರಂದು, ದಕ್ಷಿಣ ಆಫ್ರಿಕದ ಪ್ರಿಟೋರಿಯಾ ಸಮೀಪವಿರುವ ಪ್ರೀಮಿಯರ್ ಗಣಿಯಲ್ಲಿ ಸಿಕ್ಕಿತು. ಆಗ ಇದು ನಾಲ್ಕು ಅಂಗುಲ ಉದ್ದವಾಗಿಯೂ, ಎರಡೂವರೆ ಅಂಗುಲ ಅಗಲವಾಗಿಯೂ, ಎರಡಂಗುಲ ದಪ್ಪವಾಗಿಯೂ ಇತ್ತು. ತೂಕ ೬೨೧.೨ ಗ್ರಾಮ್‌ಗಳು (೩೧೦೬ ಕ್ಯಾರೆಟ್ಟುಗಳು). ಪ್ರೀಮಿಯರ್ ಗಣಿಯ ಡೇರ್‌ಮನ್ ಕಲ್ಲೀನನ್ನನ ಹೆಸರನ್ನೇ ಈ ವಜ್ರಕ್ಕೆ ಇಡಲಾಯಿತು. ೧೯೦೭ರಲ್ಲಿ ಟ್ರಾನ್ಸ್‌ವಾಲಿನ ಸರಕಾರ ಇದನ್ನು ಇಂಗ್ಲೆಂಡಿನ ಚಕ್ರವರ್ತಿ ಏಳನೇ ಎಡ್ವರ್ಡನಿಗೆ ಕಾಣಿಕೆಯಾಗಿ ಅರ್ಪಿಸಲು, ಒಂದೂವರೆ ಲಕ್ಷ ಪೌಂಡುಗಳನ್ನು ತೆತ್ತು ಕೊಂಡುಕೊಂಡಿತು. ಈ ವಜ್ರದ ಸಂಸ್ಕರಣ ನಡೆದದ್ದು ಜರ್ಮನಿಯ ಆಮ್‌ಸ್ಟರ್ಡಾಮ್ ನಗರದಲ್ಲಿ. ಈಗ ಇದು ಬ್ರಿಟಿಷ್ ರಾಜ ಮನೆತನದವರ ಬಳಿ ಇದೆ.

**ಎಕ್ಸೆಲ್ಸಿಯರ್**- ಇದೂ ಆಫ್ರಿಕದಲ್ಲಿ ದೊರೆತ ವಜ್ರವೇ. ಆರೇಂಜ್ ಫ್ರೀ ಸ್ಟೇಟಿನ ಗಣಿಯೊಂದರಲ್ಲಿ ದೊರೆಯಿತು. ಆಗ ಇದರ ತೂಕ ೯೯೫.೨ ಕ್ಯಾರೆಟ್ಟುಗಳು. ಈ ವಜ್ರ ಯಾರ ಕೈ ಸೇರಿದರೂ ಅವರಿಗೆ ಅದರಿಂದ ಅಪಾರ ಹಾನಿಯಾಗುತ್ತಿತ್ತು. ಆದ್ದರಿಂದ ಈ ಅಶುಭ ಸೂಚಕ ವಜ್ರವನ್ನು ಕೊಳ್ಳಲು ಯಾರೂ ಮುಂದೆ ಬರಲಿಲ್ಲ.

**ಜಾಂಕರ್**- ಇದರ ಮೂಲ ಸ್ಥಾನವೂ ಆಫ್ರಿಕದ ಪ್ರೀಮಿಯರ್ ಗಣಿಯೇ. ತೂಕ ೭೨೬ ಕ್ಯಾರೆಟ್ಟು, ೧೯೩೫ರ ಜನವರಿಯಲ್ಲಿ ಡೈಮಂಡ್ ಕಾರ್ಪೋರೇಷನ್ ೭೫,೦೦೦ ಪೌಂಡುಗಳಿಗೆ ಇದನ್ನು ಕೊಂಡುಕೊಂಡಿತು. ಈಗ ಈ ವಜ್ರ ಅಮೇರಿಕದ ಶ್ರೀಮಂತ ಮಹಿಳೆಯೊಬ್ಬಳ ಕಂಠದಲ್ಲಿ ಶೋಭಿಸುತ್ತಿದೆ.

**ಜುಬಿಲೀ**- ಆಫ್ರಿಕಾದ ಆರೇಂಜ್ ಫ್ರೀ ಸ್ಟೇಟಿನ ಜಾಗರ್ಸ್ ಫೌಂಟೇನ್ ಗಣಿಯಲ್ಲಿ ದೊರೆತ ಈ ವಜ್ರದ ತೂಕ ೬೫೦.೮ ಕ್ಯಾರೆಟ್ಟುಗಳಿತ್ತು. ಅನಂತರ ಇದನ್ನು ಕತ್ತರಿಸಿ ಎರಡು ಸುಂದರ

ವಜ್ರಗಳನ್ನು ತಯಾರಿಸಲಾಯಿತು. ಇವೆರಡೂ ಈಗ ಇಂಗ್ಲೆಂಡಿನಲ್ಲಿವೆ.

**ಗ್ರೇಟ್ ಮೊಗಲ್**– ಔರಂಗಜೇಬನ ಖಜಾನೆಯಲ್ಲಿದ್ದ ಈ ಭಾರತೀಯ ವಜ್ರ ಒಂದಾನೊಂದು ಕಾಲಕ್ಕೆ ಪ್ರಸಿದ್ಧಿ ಪಡೆದಿತ್ತು. ಫ್ರಾನ್ಸಿನ ಯಾತ್ರಿಕ ಟವರ್ನಿಯರ್ ತನ್ನ ದಿನಚರಿಯಲ್ಲಿ ಈ ವಜ್ರದ ಬಗ್ಗೆ ಉಲ್ಲೇಖಿಸಿದ್ದಾನೆ. ೨೮೦ ಕ್ಯಾರೆಟುಗಳ ತೂಕದ ಈ ವಜ್ರ ಒಮ್ಮೆಂದೊಮ್ಮೆಗೇ ಅರಮನೆಯ ಖಜಾನೆಯಿಂದ ಮಾಯವಾಯಿತು. ಇದನ್ನು ಕದ್ದುಕೊಂಡು ಹೋದವರೇ ಇದನ್ನು ಎರಡು ಭಾಗಗಳಾಗಿ ಕತ್ತರಿಸಿ, ಜಗತ್ಪ್ರಸಿದ್ಧ 'ಕೋಹಿನೂರ್' ಮತ್ತು 'ಓರ್ಲಾವ್' ವಜ್ರಗಳನ್ನಾಗಿ ಮಾರ್ಪಡಿಸಿದರೆಂಬ ಪ್ರತೀತಿ ಇದೆ.

**ಕೋಹಿನೂರ್**– ಕೋಹಿನೂರ್ ಎಂದರೆ 'ಪ್ರಕಾಶದ ಪರ್ವತ' ಎಂದರ್ಥ. ಇದು ಮೊದಲಿಗೆ ಮಾಳವದ ರಾಜ ವಂಶದವರ ಬಳಿ ಇದ್ದಿತೆಂಬ ಕಥೆಯೊಂದಿದೆ. ೧೩೦೪ರಲ್ಲಿ ಸುಲ್ತಾನ ಅಲ್ಲಾವುದ್ದೀನನು ಇದನ್ನು ಆ ರಾಜವಂಶದಿಂದ ಕಿತ್ತುಕೊಂಡ ನಂತರ ಈ ವಜ್ರ ಅನೇಕ ಕೈದಾಟಿ ಕೊನೆಗೆ ಮೊಗಲ್ ಚಕ್ರವರ್ತಿಗಳ ಖಜಾನೆ ಸೇರಿತು. ೧೭೩೯ರಲ್ಲಿ ನಾದಿರಶಹನ ಕೈವಶವಾದ ಈ ವಜ್ರ, ಪುನಃ ಕೆಲವು ಕಾಲಾನಂತರ ಅದು ಹೇಗೋ ಭಾರತವನ್ನು ಪ್ರವೇಶಿಸಿ, ಅನೇಕ ವರ್ಷಗಳ ಕಾಲ ರಾಜಾ ರಣಜಿತ್‌ಸಿಂಹನ ಬಳಿ ಇತ್ತು. ಆದರೆ ೧೮೪೯ರಲ್ಲಿ ಬ್ರಿಟಿಷರು ಪಂಜಾಬನ್ನು ಗೆದ್ದಮೇಲೆ ಅದು ಈಸ್ಟ್ ಇಂಡಿಯಾ ಕಂಪನಿಯ ವಶಕ್ಕೆ ಹೋಯಿತು. ೧೮೫೦ರಲ್ಲಿ ಕಂಪನಿಯಿಂದ ಕಾಣಿಕೆಯಾಗಿ ವಿಕ್ಟೋರಿಯಾ ರಾಣಿಗೆ ಅರ್ಪಿಸಲಾಯಿತು. ಆಗ ಗುಲಾಬಿ ಪುಷ್ಪದಂತೆ ಚಿತ್ತಾಕರ್ಷಕವಾಗಿತ್ತು. ಈ ವಜ್ರ ರಾಣಿಯ ಕೈವಶವಾದ ಮೇಲೆ ಅದನ್ನು ಮತ್ತೊಮ್ಮೆ ಸಂಸ್ಕಾರಣಗೊಳಿಸಿ, ತೂಕವನ್ನು ೧೮೬.೦೬ ಕ್ಯಾರೆಟ್ಟುಗಳಿಂದ ೧೦೮.೯೩ ಕ್ಯಾರೆಟ್ಟಿಗೆ ಇಳಿಸಲಾಯಿತು. ಈಗ ಈ ಮನ ಮೋಹಕ ವಜ್ರ ಎಲಿಜಬೆಥ್ ರಾಣಿಯ ಕಿರೀಟದಲ್ಲಿ ಶೋಭಿಸುತ್ತಿದೆ.

ಇನ್ನೆರಡು ಪ್ರಸಿದ್ಧ ಭಾರತೀಯ ವಜ್ರಗಳೆಂದರೆ 'ಓರ್ಲಾವ್' ಮತ್ತು 'ಶಾಹ್' ಇವನ್ನು ಇಲ್ಲಿಂದ ರಶಿಯದ ರಾಜಸಂಗ್ರಹಾಲಯಕ್ಕೆ ಸಾಗಿಸಲಾಯಿತು.

'ಸಾಂಸಿ', 'ಪಿಟ್' 'ಹೋಪ್' 'ಡ್ರೆಸ್ಡನ್ ಗ್ರೀನ್' ಮುಂತಾದ ಭಾರತೀಯ ವಜ್ರಗಳ ಕಥೆಯೂ ಸ್ವಾರಸ್ಯಮಯವಾಗಿದೆ.

'ಸಾಂಸಿ' ವಜ್ರವು ನಿಕೊಲಸ್‌ಸಾಂಸಿ. ಒಂದನೆಯ ಜೇಮ್ಸ್, ಹೆನ್ರೀಟಾ ಮೆರಿಯಾ, ಎರಡನೇ ಜೇಮ್ಸ್ ಮತ್ತು ಹದಿನಾಲ್ಕನೇ ಲೂಯಿ– ಇವರ ಬಳಿ ಇತ್ತು. ಈಗ ಈ ವಜ್ರ ಪತಿಯಾಳಾದ ಮಹಾರಾಜರ ಬಳಿ ಇದೆ.

'ಪಿಟ್' ಅಥವಾ 'ರೀಜೆಂಟ್' ವಜ್ರವು ೧೭೦೧ರಲ್ಲಿ ಕೃಷ್ಣಾ ನದೀ ತೀರದಲ್ಲಿ ಸಿಕ್ಕಿತು. ಇದನ್ನು ಮೊತ್ತ ಮೊದಲಿಗೆ ಮದ್ರಾಸಿನ ಗವರ್ನರ್ ಆಗಿದ್ದ ಪಿಟ್ಟನು ೨೦.೦೦೦ ಪೌಂಡುಗಳಿಗೆ ಕೊಂಡುಕೊಂಡನು. ಇದಕ್ಕೆ ಅವನ ಹೆಸರನ್ನೇ ಇಡಲಾಯಿತು. ಆದರೆ ಇದು ಪಿಟ್ಟನ ಬಳಿ ಬಹುಕಾಲ ಉಳಿಯಲಿಲ್ಲ. ಏಕೆಂದರೆ, ಈ ವಜ್ರವನ್ನು ಕೊಂಡ ಬಳಿಕ ಅವನು ಅನೇಕ ವಿಪತ್ಪರಂಪರೆಗಳನ್ನು ಎದುರಿಸಬೇಕಾಯಿತು. ಆದ್ದರಿಂದ ಅವನು ಅದನ್ನು ೧೭೧೭ರಲ್ಲಿ ಫ್ರಾನ್ಸಿನ ಡ್ಯೂಕನಿಗೆ, ೧,೩೫, ೦೦೦ ಪೌಂಡುಗಳಿಗೆ ಮಾರಿದನು. ಆಗ ಅದರ ತೂಕ ೪೧೦ ಕ್ಯಾರೆಟ್. ಇದೂ ಫ್ರಾನ್ಸಿನ ಕ್ರಾಂತಿಯ ಸಮಯದಲ್ಲೇ ಅಪಹರಿಸಲ್ಪಟ್ಟಿತ್ತು. ಅತಿ ಪ್ರಯಾಸದಿಂದ ಕೊನೆಗೆ ಪತ್ತೆ ಹಚ್ಚಲಾದ ಈವಜ್ರ ಈಗ ಪ್ಯಾರಿಸ್ಸಿನ ಸಂಗ್ರಹಾಲಯದಲ್ಲಿ ಸುರಕ್ಷಿತವಾಗಿದೆ.

'ಹೋಪ್' (೪೫.೫ ಕ್ಯಾರೆಟ್), 'ಡ್ರೆಸ್ಡನ್ ಗ್ರೀನ್' (೧೨೮.೫ ಕ್ಯಾರೆಟ್) ಇವು ಪ್ರಸಿದ್ಧ ವರ್ಣಮಯ ವಜ್ರಗಳು. ಚಿತ್ತಾಕರ್ಷಕವರ್ಣವನ್ನು ಹೊಂದಿರುವ ಈ ವಜ್ರಗಳು ಅನೇಕ ಜಗತ್ಪ್ರಸಿದ್ಧ ವಜ್ರಗಳಿಗಿಂತಲೂ ಸೌಂದರ್ಯದಲ್ಲಿ ಮಿಗಿಲಾಗಿವೆಯಂತೆ. ✡

**(ವಿವಿಧ ಮೂಲಗಳಿಂದ)**

***************

ವೆಂಕಟರಾಜ ಪಾನಸ

# ಮಗ

"ಅಯ್ಯಾ..."

"ಅಯ್ಯಾ..."

"ಅಯ್ಯಾ..."

"ಅಯ್ಯಾ..."

ಕಣ್ಣು ಕಾಣದ, ಕೈಯಲ್ಲಿ ಕೋಲು ಹಿಡಿದ ಮುದಿಯನೊಬ್ಬ ಕ್ಷೀಣ ಧ್ವನಿಯಲ್ಲಿ ಕೂಗುತ್ತಲೆ ಇದಾನೆ. ನಾನು ಅಸೂಯೆಯಿಂದ ನೋಡುತ್ತೇನೆ.

ಸಿಗರೇಟು, ಬಾಳೆ ಹಣ್ಣು, ಎಲೆ–ಅಡಿಕೆ ಅಂಗಡಿ ಮುಂದೆ ಗುಂಪು ಜನ. ಪೆಟ್ಟಿನವರು ಎದುರು ಕಟ್ಟಡದಲ್ಲಿಯ ಭಾರೀ ಅಫೀಸಿನವರು. ಮಧ್ಯಾನ್ಹದ ಊಟ ಮುಗಿಸಿ – ಹೊಟ್ಟೆ ತುಂಬ – ನಿತ್ಯ ಈ ಅಂಗಡಿಗೇ ಬರುವ ಜನ. ಒಬ್ಬ ಕಡಲೆ ಬರ್ಫಿ ಕೇಳುತ್ತಿದ್ದ. ಇನ್ನೊಬ್ಬ ಎಲೆ – ಅಡಿಕೆ ಸುಣ್ಣ ಕೊಡು ಎನ್ನುತ್ತಿದ್ದ. "ಇದು ಹಳೆ ಸ್ಟಾಕು, ಬೇರೆ ಸಿಗರೇಟು ಕೊಡು" ಎಂದು ತಕರಾರು ಮಾಡುತ್ತ ವಾಪಸ್ಸು ತಂದ ಎರಡು ಮೂರು ಪ್ಯಾಕ್ ಸಿಗರೇಟನ್ನು ಒಬ್ಬ ಮಹಿಳೆ ಹಿಂತಿರುಗಿಸುತ್ತಿದ್ದಳು, ಮನೆಯಲ್ಲಿದ್ದ ಗಂಡನ ಕೋಪವನ್ನೆಲ್ಲ ಪ್ರಕಟಿಸುತ್ತ.

ಇವರೆಲ್ಲರಿಂದ ದೂರ ನಿಂತಿದ್ದ, ಕಣ್ಣು ಮಸುಕಾಗಿದ್ದ, ಕೋಲು ಹಿಡಿದಿದ್ದ, ಮೈಯಲ್ಲಿ ತ್ರಾಣವಿಲ್ಲದ, ಕೊಳಕು ಹರಕಲು ಬಟ್ಟೆಯ ಮುದುಕ ಮತ್ತೆ "ಅಯ್ಯಾ" ಎಂದ.

ಯಾರಿಗೆ? ಎಲ್ಲರಿಗೂ ಆಗಿರಬಹುದು, ಯಾರೊಬ್ಬರಿಗೋ ಆಗಿರಬಹುದು, ಅಥವಾ ಯಾರಿಗೂ ಅಲ್ಲದಿರಬಹುದೇ?...ನನ್ನ ಸಂಕಟ.

"ಅಯ್ಯಾ..."

"ಅಯ್ಯಾ, ಒಂದು ಬಾಳೆಹಣ್ಣನ್ನಾದರೂ ಕೊಡಿಸಿ."

"ಪರವಾ ಇಲ್ಲ ಮುದುಕ, ಬಾಳೆಹಣ್ಣು ಕೊಂಡುಕೊಡಬೇಕಂತೆ!" ಯಾರೊ ಗೊಣ

ಗುಟ್ಟಿದರು. ಮುದುಕನಿಗೆ ಕೇಳಿಸಿತೋ ಇಲ್ಲವೊ, ನನಗಂತೂ ಕೇಳಿಸಿತು.

"ಅಯ್ಯಾ."

ಎಲೆ – ಅಡಿಕೆ – ತಂಬಾಕು ಹಾಕಿಕೊಂಡವರೊಬ್ಬರು ಮುದುಕನನ್ನು ಕೊಂಚ ಬದಿಗೆ ಸರಿಸಿ ಪಿಚಕ್ ಎಂದು ಉಗುಳಿದರು. ಮುದುಕ ಬೀಳುತ್ತಾನೇನೋ ಎಂದು ಭಯವಾಯಿತು.

ಮುದುಕ ಕಿವುಡನೂ ಆಗಿರಬೇಕೆನಿಸಿತು.

"ಅಯ್ಯಾ."

"ಅಯ್ಯಾ, ಒಂದು ಬಾಳೆಹಣ್ಣು ... ಹಸಿವು ಸಂಕ್ಟ."

"ಇದೊಳ್ಳೆ ಉಪದ್ರವ ಮಾರಾಯ್ರು. ಸಿಗರೇಟಿಗೇ ನನಗೆ ಕಾಸು ಸಾಲದು. ಲೋ ಮುದುಕ ಹೋಗಾಚೆ. ಯಾರೂ ಮಗಾಗಿಗಾ ಇಲ್ವಾ? ಎಲ್ಲಾ ಪುಗಸಟ್ಟೆ..." ಇನ್ನಾರೊ ಬಯ್ಯುತ್ತಿದ್ದರು.

ನಮ್ಮ ಅಪ್ಪನಿಗೂ ಹೀಗೆ ಯಾರಾದರೂ ಬಯ್ಯುತ್ತಿರಬಹುದೆ ಎಂದವನೆ ನಾನು ಅಲ್ಲಿಂದ ಓಟ ಕಿತ್ತಿದೆ.

✡

ಏನಯ್ಯ, ಹೀಗೆ ಪೆಚ್ಚು ಮೋರೆ ಹಾಕಿಕೊಂಡಿದ್ದೀ? ಏನ್ಸಮಾಚಾರ?"

"ಏನೋ ಮೈಗೆ ಹುಷಾರಿಲ್ಲ ಕಣೊ."

"ನೋಡಿದ್ಯಾ, ನಾನು ಹೇಳೋದನ್ನ ನೀನು ಕೇಳೋದಿಲ್ಲ. ನನಗೂ ಆಗಾಗ ನಿನ್ಹಾಗೆ ಆಗ್ತಿತ್ತು. ಈಗ ನನ್ನ ಕೆನ್ನೆ ಸ್ವಲ್ಪ ತುಂಬಿಕೊಂಡಿದೆ, ಕೊಂಚ ಕೆಂಪು ಬಣ್ಣ ಬಂದಿದೆ ಎಂತ ಹೇಳ್ತಾರೆ–ಸಿಗರೇಟು ಬಿಟ್ಟುಬಿಟ್ಟಂದಿನಿಂದ. ಹಾಳಾದ್ದು ಇನ್ನು ಮೇಲಾದರೂ ಬಿಟ್ಟು ಬಿಡಬಾರ್ದೆ?"

•

"ಯಾಕೊ ಹುಷಾರಿಲ್ವೇನೊ?"

"ಅದೇನೋ ಒಂದಿಷ್ಟು ಮೈ ಕೈ ನೋವು..."

"ನಂಗೊತ್ತು ಕಣೊ, ಬೆಳ್ಳುಳ್ಳಿ ಈರುಳ್ಳಿ



ಬದನೆಕಾಯಿ ಮುಂತಾದುವೆಲ್ಲ ಒಳ್ಳೇದಲ್ಲ. ಅಂಥವನ್ನೆಲ್ಲ ಮೊಟ್ಟಮೊದಲು ಬಿಟ್ಟುಬಿಡು. ಅಂದ್ರೇನೆ ಕ್ಷೇಮ."

•

"ಯಾಕೊ ಹೀಗಿದಿ? ಮುಖ ಬಾಡಿದೆ?"

"ಏನೊ ಸ್ವಲ್ಪ ಅನಾರೋಗ್ಯ."

"ನಂಗೊತ್ತು, ನಿನಗೆ ಆಗೋದೆ ಹೀಗೆ. ತಾಪತ್ರಯ ಎಂದು ಪುಷ್ಟಿಕರ ಆಹಾರ ತಗೊಳ್ದಿದ್ದರೆ ಹ್ಯಾಗೆ? ನಾನ್ನೋಡು, ಬೆಳಗ್ಗೆ ಎರಡು ಮೊಟ್ಟೆ, ಬೋರ್ನವಿಟ ಹಾಕಿದ ಹಾಲು, ಮಧ್ಯಾಹ್ನ ಅನ್ನ ಸಾರು, ಸಾಂಬಾರ, ಪಲ್ಯ, ಚಟ್ನಿ, ಉಪ್ಪಿನಕಾಯಿ, ಕೊಸುಂಬರಿ. ರಾತ್ರಿ ಚಪಾತಿ, ಎರಡು ಪಲ್ಯ, ಹಾಲು, ಬಾಳೆಹಣ್ಣು..."

•

"ಏನಾಯ್ತೊ? ಸಪ್ಪೆಮೋರೆ ಮಾಡಿಕೊಂಡಿದ್ದಿ?"

"ಏನೋ ಸ್ವಲ್ಪ ತಲೆ ಸಿಡೀತಾ ಇದೆ. ನೆಗಡಿ ಬರೋ ಹಾಗಿದೆ."

"ನಾನು ಅಪತ್ನಿಂದಾ ಹೇಳತಾನೆ ಇದೀನಿ, ಗಾಳಿ–ಬೆಳಕು ಇಲ್ಲದ ಆ ಮನೆ ಬಿಟ್ಟುಬಿಡು ಅಂತ. ಫ್ರೆಷ್ ಏರ್ ಇಲ್ದಿದ್ರೆ ತಲೆ ನೋವು ಬರ್ತದೆ..."

•

"ಏನೊ ಹೀಗಿದಿ? ಏನಾಯ್ತು?"

"ಮೈಗೆ ಹುಷಾರಿಲ್ಲ." ಎಂದು ಮಾಮೂ

ಲಾಗಿ ನುಡಿದಿದ್ದೆನಾದರೂ ನಿಜವಾಗಿ ಬೆಚ್ಚಿ ಬಿದ್ದೆ. ನನ್ನ ಕಣ್ಣುಗಳ ಬಗ್ಗೆ ನನಗೇ ಅಪನಂಬುಗೆ ಉಂಟಾಯಿತು. ಅನಿಮಿಷವಾಗಿ ನೋಡಿದೆ. ಎಲಾ ಇವನ, ಸತ್ತವನು ಎದ್ದು ಬಂದಿದ್ದಾನೆ. ಎದ್ದೇ ಬಂದಿದ್ದಾನೆ, ಇನ್ನೂ ಹಸಿ ಹೆಣವಾಗಿದ್ದಾನೆ.

"ನಂಗೊತ್ತು, ನಿಮಗೆಲ್ಲ ಇನ್ನೂ ಗೊತ್ತಾಗಿಲ್ಲ – ಹೇಗೆ ಬೇಗನೆ ಸಾಯಬೇಕೆನ್ನುವುದು, –ಅದಕ್ಕೇ ಈ ಗೋಳು..."

ನಾನು ನನ್ನೆಲ್ಲ ಶಕ್ತಿಯನ್ನೂ ಕ್ರೋಢೀಕರಿಸಿಕೊಂಡು, ಸೂರ್ಯ ಕಂತುವ ದಿಕ್ಕಿನಿಂದ ಏಕದಂ ಸಂಪೂರ್ಣ ವಿರುದ್ಧ ದಿಕ್ಕಿಗೆ ಗಿರ್ರನೆ ತಿರುಗಿದೆ–ಪೂರ್ವಕ್ಕೆ ಮುಖ ಮಾಡಿ ಛರಛರನೆ ಹೆಜ್ಜೆ ಹಾಕಿದೆ.

✡

ನೀಳವಾದ, ನೇರವಾದ ರಸ್ತೆ.

ರಸ್ತೆಯ ಎಡ ಅಂಚಿನಲ್ಲಿ ಆಚೆ ಬದಿಗೆ ಕ್ರಾಸುಮಾಡಬೇಕೆಂದು–ನಿಂತುಕೊಂಡಿದ್ದೆ.

ನನ್ನ ಬಲಗಡೆಯಿಂದ ಒಂದು ಸ್ಕೂಟರು ಸದ್ದು ಮಾಡುತ್ತ ಬಂತು. ತಾರುಣ್ಯ ತುಂಬಿ ಹೊರಚೆಲ್ಲುತ್ತಿದ್ದ ಸ್ಫುರದ್ರೂಪಿ ಜೋಡಿ. ಆಕರ್ಷಣೆ ಕೇವಲ ಸಹಜವಾಗಿತ್ತು. ಅವನೂ ಚೆನ್ನಾಗಿಯೆ ಇದ್ದ. ಅವನ ಮುಖವನ್ನು ಚೆನ್ನಾಗಿ ನೋಡೋಣ ಎನ್ನುವಷ್ಟರಲ್ಲೇ ಸ್ಕೂಟರ್ ಭರ್ರನೆ ನನ್ನನ್ನು ದಾಟಿ ಹೋಯಿತು. ನಂತರ ಕಂಡದ್ದು ಅವಳ ಹಿಂಭಾಗ. ಬೆನ್ನಿನ ಮುಖ್ಯ ಭಾಗವನ್ನು ಒಂದು ವಿಚಿತ್ರ ಆಕಾರದಲ್ಲಿ ತೋರಿಸುವಂತೆ ತೊಟ್ಟ ಹಸುರು ರವಿಕೆ ಮೋಹಕವಾಗಿತ್ತು.

ಅಷ್ಟರಲ್ಲೇ ಭರ್ರ್...

ಇನ್ನೊಂದು ಸ್ಕೂಟರು. ಅದರ ಮೇಲೂ ಅಷ್ಟೇ ಸುಂದರವಾದ ಇನ್ನೊಂದು ತರುಣ ಜೋಡಿ. ಆಕರ್ಷಕವಾಗಿಯೆ ಕಂಡಿತು.

ಎರಡನೆಯ ಸ್ಕೂಟರ್ ಮೇಲೆ ಕುಳಿತಿದ್ದ ಗಂಡ ತನ್ನ ಮುಂದೆ ಹೋಗುತ್ತಿದ್ದ ಸ್ಕೂಟರ್ ಮೇಲಿನ ಹೆಣ್ಣಿನ ಬೆನ್ನನ್ನು ನಿಟ್ಟಿಸಿ ನೋಡುತ್ತಿದ್ದ.

ಅಷ್ಟರಲ್ಲೇ ಅವನ ಹೆಂಡತಿ ಏನೋ ಪಿಸುಗುಟ್ಟಿದಂತೆ ಕೇಳಿಸಿತು.

ಕೇಳಿಸುವುದರೊಳಗೇ ಸ್ಕೂಟರು ನನ್ನನ್ನು ದಾಟಿಕೊಂಡು ಹೋಗಿತ್ತು. ಅವಳ ರವಿಕೆಯೂ ಅಂಥದೆ, ದಟ್ಟ ನೀಲಿ ರವಿಕೆಯಲ್ಲಿ ಬೆಳ್ಳಗಿನ ಬೆನ್ನು.

ಇದ್ದಕ್ಕಿದ್ದ ಹಾಗೆ ಸ್ಕೂಟರ್ ವೇಗ ಹೆಚ್ಚಿತು. ಅದು ಮೊದಲಿನ ಸ್ಕೂಟರನ್ನು ಓವರ್‌ಟೇಕ್ ಮಾಡಿಕೊಂಡು ನಂತರ ಅದರ ಮುಂದುಗಡೆ ಚಲಿಸತೊಡಗಿತು.

ಹಿಂದೆ ಬಿದ್ದ ಮೊದಲನೆ ಸ್ಕೂಟರ್ ಮೇಲಿನ ಗಂಡ, ಮುಂದೆ ಬಂದ ಎರಡನೆ ಸ್ಕೂಟರ್ ಮೇಲಿನ ಹೆಣ್ಣಿನ ಬೆನ್ನನ್ನು ನೋಡತೊಡಗಿದ.

●

ನಾವಾಗ ಭಾರತದ ಪೂರ್ವ ಮೂಲೆಯ ಒಂದು ಅಂಚೆ ಘಟಕದಲ್ಲಿದ್ದೆ. ಗುಡ್ಡಗಾಡು ಪ್ರದೇಶ. ಎಲ್ಲಿ ನೋಡಿದರೂ ದಟ್ಟ ಅರಣ್ಯಗಳು. ಹಸಿರು ವನಸಿರಿ. ಅಂಚೆ ಘಟಕದಲ್ಲಿ ನಾವು ಮೂವರು ವಾರಂಟ್ ಆಫೀಸರುಗಳಿದ್ದೆವು. ನಿವಸ್‌ಗಾಡೆ ಮಹಾರಾಷ್ಟ್ರದವರು, ತ್ರಿವೇದಿ ಬಂಗಾಲದವರು ಹೀಗೆ ಮೂರು ವಿಭಿನ್ನ ರಾಜ್ಯದ ಮಿಲನವಾಗಿತ್ತದು. ನಾವು ಮೂವರೇ ಇದ್ದುದ-ರಿಂದ ಊಟಕ್ಕೆ, ವಸತಿಗೆ ಅಲ್ಲಿಯ ಜೆ. ಸಿ. ಓ. ಮೆಸ್‌ನಲ್ಲಿ ಅಟ್ಯಾಚ್ ಮಾಡಲಾಗಿತ್ತು. ನಮ್ಮ ಸಂಗಡವಿದ್ದ ಏಳೆಂಟು ಜನ ಜ್ಯೂನಿಯರ್ ಕಮಿಶನ್ಡ್ ಅಧಿಕಾರಿಗಳೂ ತುಂಬ ವಿನೋದ ಪ್ರವೃತ್ತಿಯವರೇ ಇದ್ದುದರಿಂದ ದಿನಗಳು ತುಂಬಾ ಉಲ್ಲಾಸಮಯವಾಗಿ ಸರಿದು ಹೋಗುತ್ತಿದ್ದುವು. ರಾತ್ರಿ ಬಾರ್‌ನಲ್ಲಿ ಕುಳಿತಾಗ ನಗು, ಹಾಸ್ಯ, ಹರಟೆ ಹತ್ತು ಹನ್ನೊಂದರವರೆಗೂ ಮೆಸ್‌ನ ಗೋಡೆಗಳ ಮಧ್ಯೆ ಪ್ರತಿಧ್ವನಿಸುತ್ತಿರುವುದು ಸಾಮಾನ್ಯವಾಗಿತ್ತು.

ಅಂದು ಶನಿವಾರ. ಮರುದಿನ ಹೇಗೂ ಆದಿತ್ಯ ವಾರ. ಯಾವ ಗಡಿಬಿಡಿಯಿಲ್ಲ ಎಂದು ಮೆಸ್‌ನಲ್ಲಿ ಯಾರಿಗೂ ಸಮಯದ ಪ್ರಜ್ಞೆಯಿರಲಿಲ್ಲ. ಹೊರಗೆ ಚಳಿಯಿತ್ತು. ಎದುರು ಬುಖಾರಿ ಉರಿಯುತ್ತಿತ್ತು. ಮತ್ತೇನು ಬೇಕು? ಎಲ್ಲ ಗ್ಲಾಸ್‌ನಲ್ಲಿಯ ರಮ್ ಗುಟುಕರಿಸುತ್ತ ನಗುತ್ತ ಕಲೆಯುತ್ತ ಕುಳಿತಿದ್ದರು. ಸರದಾರಜೀಯೊಬ್ಬ ಪಂಜಾಬಿಯಲ್ಲಿ ಅಶ್ಲೀಲ ಬೆರೆತ ಹಾಡೊಂದನ್ನು ಹಾಡುತ್ತ ನರ್ತಿಸಿದ. ಬದಿಯಲ್ಲಿದ್ದವರೊಬ್ಬರು ಎದುರಿಗಿನ ಪೆಗ್ ಟೇಬಲನ್ನೇ ತಬಲವಾಗಿ ಪರಿವರ್ತಿಸಿ ಟುಂ ಟಮುಕು...ಟುಂ ಟಮುಕು ಎಂದು ತಾಳ ಹಿಡಿಯತೊಡಗಿದರು. ಎಲ್ಲರಿಗೂ ಹೆಚ್ಚು ಕಡಿಮೆ ಮತ್ತೇರಿತ್ತು. ಆ ಸಮಯದಲ್ಲೇ ಅದ್ಹೇಗೆ ವಿಷಯ ಬಂತೋ ಅಂತೂ ಬಂತು. ಈ ಗುಡ್ಡಗಾಡಿನಲ್ಲಿ ಆರು ಮೈಲು ದೂರದಲ್ಲಿರುವ "ಅ" ಪಿಕೆಟ್‌ಗೆ ಒಂದೇ ಓಟದಲ್ಲಿ ಓಡುತ್ತ ಹೋಗಿ ತಿರುಗಿ ಬರಲಾಗುತ್ತೋ ಇಲ್ಲವೋ ಎಂಬ ಪ್ರಶ್ನೆ ಬಂತು. ಆಗುತ್ತದೆ-ಆಗುವುದಿಲ್ಲ ಎಂದು ತಿಕ್ಕಾಟ ಸುರುವಾಯ್ತು. ಈ ತಿಕ್ಕಾಟದಲ್ಲಿ ಅದ್ಯಾವ ರೀತಿಯಲ್ಲೋ ನಮ್ಮ ನಿವಸ್‌ಗಾಡೆಗೂ ಮತ್ತೊಬ್ಬ ಸುಭೇದಾರರಿಗೆ ಪಂದ್ಯ ಬಿದ್ದೇಬಿಟ್ಟಿತ್ತು. ಈ ನಿವಸ್‌ಗಾಡೆಯ ಸ್ವಭಾವವೇ ಸ್ವಲ್ಪ ಹಾಗೆ. ಒಂಟಿ ಹಿಡಿತ ಹಿಡಿದು ವಾದಿಸುವ ಚಟವಿತ್ತು ಅವರಿಗೆ. ನಾವು ಆಗಾಗ ಅವರನ್ನು ಆ ಬಗ್ಗೆ ಆಕ್ಷೇಪಿಸುತ್ತಿದ್ದುದೂ ಇತ್ತು. ಆದರೆ ಆಸಾಮಿ ಸುತರಾಂ ಬದಲಾಯಿಸಿರಲಿಲ್ಲ. ಇವತ್ತು ಅದೇ ಚಟದಿಂದಾಗಿ ತಿಕ್ಕಾಟ ಸುರುವಾಗಿ ತಮಾಷೆ. ತಮಾಷೆಯಲ್ಲೇ ವಾರಂಟ್ ಆಫೀಸರ್ ನಿವಸ್‌ಗಾಡೆಗೂ ಸುಭೇದಾರ ದರ್ಶನಸಿಂಗರಿಗೂ ಪಂದ್ಯ ಬಿದ್ದೇ ಹೋಯಿತು. ಯಾರು ಮೊದಲು ಓಡುತ್ತ ಹೋಗಿ "ಅ" ಪಿಕೆಟ್ ತಲುಪಿ ತಿರುಗಿ ಇಲ್ಲಿಗೆ ಬಂದು ಮುಟ್ಟುತ್ತಾರೋ ಅವರಿಗೆ ಸೋತವರು ಒಂದು ರಮ್ ಬಾಟಲ್ ಕೊಡಬೇಕು ಎಂದು ಗೊತ್ತು ಮಾಡಿಕೊಂಡರು. ಉಳಿದವರು "ಹುರ್ರಾ" ಎಂದು ಕೂಗಿ ಪಂದ್ಯಕ್ಕೆ ಅನುಮೋದನೆ ನೀಡಿದರು.

"ವಾರಂಟ್ ಆಫೀಸರ್ ಇನ್ನೂ ಯುವಕ, ಒಳ್ಳೇ ಮೈಕಟ್ಟಿದೆ, ಚುರುಕತನವಿದೆ, ಗೆದ್ದೇ ಗೆಲ್ಲುತ್ತಾರೆ" ಎಂದು ಕೆಲವರು ನಿವಸ್‌ಗಾಡೆಯ ಪರವಾಗಿ ಮಾತನಾಡಿದರು..."ಛೆ...ಛೆ ಅವರು ಯುವಕರಾದರೇನಾಯ್ತು? ಸುಭೇದಾರ್ ಅನುಭವದಲ್ಲಿ ತುಂಬಾ ಮುಂದಿದ್ದಾರೆ. ಅವರೇ ಗೆಲ್ಲೋದು ನೋಡುತ್ತೀರಿ..." ಎನ್ನುತ್ತ ಮತ್ತೆ ಕೆಲವರು ಅವರ ಪಕ್ಷವಹಿಸಿ ವಾದಕ್ಕಿಳಿದರು. ಹೀಗೆ ವಾದ-ವಾದದಲ್ಲಿ ಮತ್ತೆ ಅವರವರಲ್ಲಿಯೇ ಗುಂಪಾಗಿ ಒಂದು ಪೆಗ್ ಎರಡು ಪೆಗ್‌ಗಳ ಪಂದ್ಯವನ್ನು ಇವರ ಫಲಿತಾಂಶದ ಮೇಲೆ ಕಟ್ಟಿಕೊಂಡರು. ಮರುದಿನ ರವಿವಾರ. ಬೆಳಿಗ್ಗೆ ಪಂದ್ಯ ಆಗೇ ಹೋಗಲಿ ಎಂದು ಸಮಯವನ್ನೂ ನಿಶ್ಚಯಿಸಿಯಾಯ್ತು.

ನಮಗಂತೂ ಈ ಪಂದ್ಯದಿಂದ ಸಂತೋಷವಾಗದೆ ಇರಲಿಲ್ಲ. ವಾರಂಟ್ ಆಫೀಸರ್ ನಿವಸ್‌ಗಾಡೆ

ಒಳ್ಳೇ ಓಟಗಾರ. ಯುವಕ, ಚುರುಕುತನವಿದೆ. ಎಲ್ಲ ಒಪ್ಪಿಕೊಳ್ಳುವಂಥದ್ದೇ ಆದರೂ ನಮ್ಮೆಲ್ಲರಿಗೂ ದೀರ್ಘ ಅನುಭವವಿರುವುದನ್ನು ಅಲ್ಲಗಳೆಯುವಂತಿಲ್ಲ. ನೇರವಾಗಿ ಈ ಗ್ರೇಡಿಗೆ ಆಯ್ಕೆಯಾಗಿ ಬರುವುದರಿಂದಲೂ ನೌಕರಿಯೆಲ್ಲಾ ಆಫೀಸಿನಲ್ಲಿಯೇ ಇರುವುದರಿಂದಲೂ ಇಲ್ಲಿಯ ನೆಲದಲ್ಲಿ ಅಷ್ಟು ನಿರ್ಲಕ್ಷ್ಯವಾಗಿ ಪಂದ್ಯ ಕಟ್ಟುವಂತಿಲ್ಲ. ಮುಗಿಲಿಗೇ ಸವಾಲಾಗಿ ಸೂರ್ಯನನ್ನೂ ಮುಚ್ಚಿ ನುಂಗುತ್ತೇನೆ ಎಂಬಂತೆ ಎದ್ದು ನಿಂತ ಪರ್ವತದ ಕೋಡುಗಳಲ್ಲಿ ಕಾರ್ಗತ್ತಲೆ ಕವಿಸುವಂತೆ ಮಲೆತು ನಿಂತ ಅರಣ್ಯದಲ್ಲಿ ಹಾಯ್ದು ಹೋಗುವ ಕಿರು ರಸ್ತೆಯಲ್ಲಿ ಈ ನೆಲದಲ್ಲಿ ಹತ್ತಾರು ವರ್ಷಗಳನ್ನು ಸವೆಸಿ ಅರಣ್ಯದಲ್ಲಿ ತಿರುಗಿ ನಲುಗಿ ಕಷ್ಟ ಸಹಿಸಿ ಅನುಭವವಿದ್ದ ಸುಭೇದಾರರಿಗೆ ನಿವ್‌ಗಾಡೆ ಸಾಟಿಯಾಗುವುದು ಅಷ್ಟು ಸುಲಭವಲ್ಲ ಎಂಬುದು ನನಗೆ ಗೊತ್ತಿತ್ತು. ನಿವ್‌ಗಾಡೆಗೆ ಅದನ್ನೇ ರಾತ್ರಿ ಹೇಳಿದರೆ ಯಾವ ಪ್ರಯೋಜನವೂ ಆಗಲಿಲ್ಲ. ಅದು ನಮಗೂ ಗೊತ್ತಿದ್ದದ್ದೇ ಆಗಿತ್ತು. ಹೀಗಾಗಿ ಸುಮ್ಮನಾದೆವು. ಮುಂದಿನದನ್ನು ನಾನೇ ಹೇಳುವುದಕ್ಕಿಂತ ಅವರವರ ಬಾಯಲ್ಲೇ ಕೇಳಿ :

*

ಬೆಳಿಗ್ಗೆ ಎಂಟು ಗಂಟೆಗೆಲ್ಲ ನಾನು ಮತ್ತು ವಾರಂಟ್ ಆಫೀಸರ್ ನಿವ್‌ಗಾಡೆ ಓಡತೊಡಗಿದೆವು. ಅವರು ತುಂಬಾ ನುರಿತ ಓಟಗಾರ ಎಂಬುದು ಅವರ ಹೆಜ್ಜೆಯಿಡುವ ರೀತಿಯೇ ಹೇಳುತ್ತಿತ್ತು. ಇಬ್ಬರೂ ಒಂದೇ ಗತಿಯಲ್ಲಿ ಒಂದೇ ಅಂತರದಲ್ಲಿ ಓಡುತ್ತಿದ್ದೆವು. ಹೀಗೆ ಹತ್ತು ನಿಮಿಷ ಓಡಿರಬಹುದು. ರಸ್ತೆ ಸಂಪೂರ್ಣ ಅರಣ್ಯ ಮಧ್ಯದಲ್ಲಿ ಪರ್ವತದ ಕೋಡನ್ನು ಏರತೊಡಗಿತ್ತು. ಸುತ್ತಲೂ ಅರಣ್ಯವನ್ನು ಬಿಟ್ಟು ಏನೂ ಉಳಿದಿರಲಿಲ್ಲ. ವೇಗವನ್ನು ಕುಗ್ಗಿಸಿದೆ. ನಿವ್‌ಗಾಡೆ ಕ್ರಮೇಣ ಮುಂದಾಗುತ್ತ ಮುಂದಾಗುತ್ತ ಮುಂದಿನ ತಿರುವಿನಲ್ಲಿ ಮಾಯವಾಗಿ ಹೋದರು. ನಾನು ಮೊದಲೇ ನಿರ್ಧರಿಸಿಕೊಂಡಂತೆ ದೊಡ್ಡ ರಸ್ತೆಯನ್ನು ಬಿಟ್ಟು ಅರಣ್ಯದೊಳಗೆ ನುಗಿದ್ದೆ.

ಅದು ಕಾಡೆಮ್ಮೆ, ಕಡವೆ ಮುಂತಾದ ವನ್ಯ ಮೃಗಗಳು ತಿರುಗಾಡಿ ಮಾಡಿದ ರಸ್ತೆ. ನಾಗಾಗಳು ಇಂಥ ರಸ್ತೆಯನ್ನೇ ಬಳಸಿ ಒಂದು ಗುಡ್ಡದಿಂದ ಇನ್ನೊಂದು ಗುಡ್ಡಕ್ಕೆ ಇಲಿಯಂತೆ ಸರಾಗವಾಗಿ ಸಂಚರಿಸುತ್ತಾರೆ. ಕೊರಕಲು ಬಂಡೆಗಲ್ಲುಗಳನ್ನು ದಾಟುತ್ತ ಮೂರು ನಾಲ್ಕು ಹಳ್ಳಗಳನ್ನು ಹಾಯಬೇಕಾದ ಆ ದಾರಿ ನಿಕಟ ಪರಿಚಯವಿಲ್ಲದ ಯಾರೂ ಉಪಯೋಗಿಸುವಂಥದಾಗಿರಲಿಲ್ಲ. ಅಲ್ಲಿಯ ಕಾಡಿನ ಅಂಗುಲ ಅಂಗುಲ ಪರಿಚಯವಿದ್ದ ನನಗಿದು ಅಂಥ ಹೆದರಿಕೆಯ ಸಂಗತಿಯಾಗಿರಲಿಲ್ಲ. ಈ ದಾರಿಯಲ್ಲಿ ಹೋದರೆ "ಅ" ಪಿಕೆಟ್‌ನ ಅಂತರ ಅರ್ಧದಷ್ಟು ಕಡಿಮೆಯಾಗುತ್ತದೆ. ಇನ್ನು ಯಾಕೆ ಚಿದಲಿ? ಅರಣ್ಯದ ತಂಪಾದ ಹವೆಯಲ್ಲೂ ಗುಡ್ಡ ಇಳಿದು, ಕಣಿವೆ ದಾಟಿ, ಗುಡ್ಡವೇರಿ ಮೂರು ಮೈಲು ಕ್ರಮಿಸಲು ಒಂದು ಗಂಟೆಯೇ ಹಿಡಿಯಿತು. ದೂರದಲ್ಲಿ "ಅ" ಪಿಕೆಟ್ ಕಾಣಿಸಿಕೊಂಡಾಗ ನನಗೆ ತುಂಬಾ ಆಯಾಸವಾಗಿತ್ತು. ಪಿಕೆಟ್‌ನಲ್ಲಿ ನೀರು ಕುಡಿದು ವಿಶ್ರಮಿಸಿಕೊಳ್ಳತೊಡಗಿದೆ. ನಿವ್‌ಗಾಡೆ ಇನ್ನು ಬಂದಿರಲಿಲ್ಲ. ಪಾಪ! ಹಾದಿಯಲ್ಲಿ ಇನ್ನೂ ಬೆವರು ಸುರಿಸುತ್ತ ಓಡುತ್ತಿರಬಹುದು. ಸುಭೇದಾರ ಹಿಂದೆ ಬಿದ್ದಿದ್ದಾರೆ ಎಂದು ತಿಳಿದು ಸಂತೋಷದಿಂದ ಧಾವಿಸುತ್ತಿರುವ ಅವರಿಗೆ ದೆವ್ವದಂತೆ ಕುಳಿತ ನಾನು ಕಂಡಾಗ ಆಘಾತವಾಗಹುದು ಎಂಬ ಕುತೂಹಲದಿಂದ ನಗು ಉಕ್ಕಿ ಬರುತ್ತಿತ್ತು. ಅಂತೂ ಕಾಣುತ್ತ ಕಾಣುತ್ತ ಒಂದು ರಮ್ ಬಾಟಲು ಕೈ ಬಿಟ್ಟಿತು ಎಂದು ಯೋಚಿಸುತ್ತ ಅವರಿಗಾಗಿ ಕಾಯತೊಡಗಿದೆ. ಅವರು ನಾನು ಬಂದು ಎರಡು ಗಂಟೆಯಾದರೂ ಬರಲಿಲ್ಲ. ಆಶ್ಚರ್ಯವಾಯ್ತು. ಆರು ಮೈಲು ಕ್ರಮಿಸಲು—ಅದೂ ಅವರಂಥವರಿಗೆ—ಈ ಗುಡ್ಡಗಾಡನ್ನು ಲಕ್ಷ್ಯದಲ್ಲಿ ತೆಗೆದುಕೊಂಡರೂ ಎರಡು ತಾಸಿಗಿಂತ ಜಾಸ್ತಿ ಬೇಡ. ಆಗಲೇ ಮೂರು ತಾಸಾಯ್ತು, ಯಾಕೆ ಬಂದಿಲ್ಲ ಎಂದು ಚಿಂತೆ ಸುರುವಾಯ್ತು. ಮತ್ತೆ ಅರ್ಧ ತಾಸು ಕಳೆದರೂ ಬಾರದೇಹೋದಾಗ ಹೆದರಿಕೆಗೆ ಮೊದಲಿಟ್ಟಿತು. ಯಾಕೆ ಬಂದಿಲ್ಲ ಇವರು? ರಸ್ತೆಯಲ್ಲಿ ಎಲ್ಲಿಯಾದರೂ ಬಿದ್ದುಗಿದ್ದು ಅಥವಾ ಆಯಾಸದಿಂದ ಪ್ರಜ್ಞೆ ತಪ್ಪಿ...? ಇದು ಈ ಅರವತ್ತಂಶ ಕೋನದಲ್ಲಿ ಏರಬೇಕಾದ ಗುಡ್ಡದ ರಸ್ತೆಯಲ್ಲಿ ಅಸಂಭವವೇನೂ ಆಗಿರಲಿಲ್ಲ. ಒಂದಕ್ಕೊಂದೂದರೆಯಾಗಿ ಮೈಮೇಲೆ ಬಂದೀತೇ ಪ್ರಸಂಗ...? ಮತ್ತೆ ಅಲ್ಲಿ

ಕೂತಿರಲಾಗಲಿಲ್ಲ. ಎಷ್ಟೆ. ನಿವಬ್‌ಗಾಡೆ ಬರಬಹುದಾದ ರಸ್ತೆಯಲ್ಲಿ ತಿರುಗಿ ಓಡತೊಡಗಿದೆ. ಮತ್ತೆ ಅರ್ಧ ತಾಸಿನ ಹಾದಿ ಕ್ರಮಿಸಿದರೂ ಅವರ ಪತ್ತೆಯಿಲ್ಲ. ಏನಾಗಿರಬಹುದು? ಪಕ್ಕದ ಗುಡ್ಡ ಕಾಣಿಸಿಕೊಂಡಿತು. ಎದೆ ಝಲ್ಲೆಂದಿತು! ಎಲ್ಲಿಯಾದರೂ ರಸ್ತೆ ಸ್ವಲ್ಪ ತಪ್ಪಿ ಈ ಗುಡ್ಡ ಬಳಸಿ ಓಡುವ ಬದಲು ಬದಿಯ ಗುಡ್ಡವನ್ನಿಳಿದರೆ ಭಾರತದ ಗಡಿ ಮುಗಿದು ಚೀನದೊಳಗೆ ಮನುಷ್ಯ ಅರಿವಿಲ್ಲದೇ ಪ್ರವೇಶ ಮಾಡಿರುತ್ತಾನೆ. ಹಾಗೇನಾದರೂ ಆದರೆ ಮತ್ತೆ ಅವನ ಹೆಣವೂ ಕಾಣಸಿಗಲಿಕ್ಕಿಲ್ಲ. ಕೈಕಾಲಲ್ಲಿ ತ್ರಾಣವೇ ತಪ್ಪಿದಂತಾಯ್ತು. ಎನ್‌ಕ್ವೈರಿ, ಕೋರ್ಟ್ ಮಾರ್ಶಲ್ ಕಣ್ಣೆದುರು ಹಾಯ್ದು ಹೋಗಿ ಕಣ್ಣು ಕತ್ತಲೆ ಬಂದಂತಾಯ್ತು. ದೇವರೇ ಮಣ್ಣು ತಿನ್ನಲಿಕ್ಕೆ ನಾನ್ಯಾಕೆ ಪಂದ್ಯ ಕಟ್ಟಿದೆ? ಕಟ್ಟಿದರೂ ಅವರನ್ನು ಬಿಟ್ಟು ಒಳರಸ್ತೆಯಲ್ಲಿ ನುಗ್ಗುವ ಬುದ್ಧಿ ನನಗ್ಯಾಕೆ ಬಂತು? ನಾನು ಸೋತರೂ ಪರವಾಗಿರಲಿಲ್ಲ, ಹೀಗಾಗಬಾರದಾಗಿತ್ತು, ಭಗವಂತ; ಒಂದಲ್ಲ ಹತ್ತು ರಮ್ ಬಾಟಲ್ ಹಂಚಿಬಿಡುತ್ತೇನೆ, ವಾರಂಟ್ ಆಫೀಸರ ಕಾಣುವಂತೆ ಮಾಡು ಎಂದು ಬೇಡಿಕೊಳ್ಳುತ್ತ ರಸ್ತೆ ಕ್ರಮಿಸತೊಡಗಿದೆ. ನನ್ನಲ್ಲಿ ಒಂದೇ ಒಂದು ಕಿರಿದಾಸೆಯಿತ್ತು, ನಿವಬ್‌ಗಾಡೆ ಅರ್ಧ ರಸ್ತೆಯಲ್ಲೇ ಮರಳಿ ಹೋಗಿರಬಹುದು ಎಂದು. ಅದೇ ನಿಜವಾಗಲಿ ಎಂದು ಬಯಸುತ್ತ ಓಡಿದೆ. ಓಡುತ್ತ ಓಡುತ್ತ ಬಂದು ರೂಮಿನೆದುರು ನಿಂತಾಗ, "ಹೋ! ಸುಭೇದಾರ್ ಗೆದ್ದರು" ಎಂದರು ಜನ. "ನಿವಬ್‌ಗಾಡೆ ಎಲ್ಲಿ...?" ಎಂದೆ ಏದುಸಿರು ಬಿಡುತ್ತ. "ಅವರು ಬಂದೇಯಿಲ್ಲ, ಹಿಂದೇ ಇರಬಹುದು" ಎಂದರವರು. ಕಣ್ಣು ಕತ್ತಲೆ ಬಂದು ಖುರ್ಚಿಯ ಮೇಲೆ ಕುಸಿದೆ.

*

ಸಂಜೆ ಗುರುದ್ವಾರಕ್ಕೆ ಹೋಗಬೇಕೆಂದು ಮಾಡಿದ್ದೆ. ಮಧ್ಯ ಈ ಪಂದ್ಯವೊಂದಿತ್ತಲ್ಲ, ಅದಿನ್ನೂ ಮುಗಿದೇ ಇರಲಿಲ್ಲ. ಮಧ್ಯಾಹ್ನದೊಳಗೆ ಮುಗಿದಿರಬೇಕಾದ ಇದು ಸಾಯಂಕಾಲ ಮೂರು ನಾಲ್ಕಾದರೂ ಯಾರೂ ಪತ್ತೆಯಾಗದ್ದು ಕಂಡು ಏನೋ ಅಸ್ವಾಭಾವಿಕತೆಯಿರುವಂತೆ ಭಾಸವಾಗತೊಡಗಿತ್ತು. ಅಷ್ಟರಲ್ಲೇ ಓಡುತ್ತ ಬಂದು ಕುಸಿದು ಬಿದ್ದು ಏದುಸಿರುಬಿಡುತ್ತ ನೀಡಿದ ಸುಭೇದಾರರ ವಿವರಣೆಯಿಂದ ಹೃದಯಾಘಾತವಾದಂತಾಯ್ತು. ಇಲ್ಲಿಯ ಸುಭೇದಾರ್ ಮೇಜರ್ ನಾನು ನನ್ನ ಅಪ್ಪಣೆಯಿಲ್ಲದೇ ಈ ಪಂದ್ಯಕ್ಯಾಕೆ ಕೈ ಹಾಕಿದಿರಿ ಎಂದು ಗದರಿದರೂ ಈ ಎಲ್ಲ ಸಂಗತಿಗಳು ನನ್ನೆದುರೇ ಜರುಗಿದ್ದರಿಂದ ಪರೋಕ್ಷವಾಗಿ ಇದಕ್ಕೆ ನನ್ನ ಸಮ್ಮತಿಯಿದ್ದೇ ಇತ್ತು. ಅವರು ಗೊತ್ತಿಲ್ಲದೇ ಚೀನದಲ್ಲಿ ಪ್ರವೇಶಿಸಿದ್ದೇ ಹೌದು ಎನ್ನಿಸಿ ಹೋಗಿ ಕೋರ್ಟ್ ಮಾರ್ಶಲ್ ಕಣ್ಣೆದುರು ಕುಣಿಯಿತು. ತಪ್ಪು ಇವರಿಬ್ಬರದೇ ಆದರೂ ಉಪಸ್ಥಿತನಿದ್ದ ಹಿರಿಯ ಜೆ. ಸಿ. ಓ. ಆದ ನನಗೂ ಶಿಕ್ಷೆ ತಪ್ಪಿದ್ದಲ್ಲ. ಎಲ್ಲರನ್ನೂ ಎಬ್ಬಿಸಿದೆ, ತತ್‌ಕ್ಷಣ ನಿವಬ್‌ಗಾಡೆಯವರನ್ನರಸುತ್ತ ಕಾಡಿನತ್ತ ಧಾವಿಸಿದೆವು.

*

ನಾವು ಸ್ವಲ್ಪ ದೂರ ಓಡುತ್ತಿರುವಂತೆಯೇ ಸುಭೇದಾರ ಹಿಂದೆ ಬಿದ್ದರು. ಉತ್ಸಾಹದಿಂದ ಓಡುತ್ತ ಓಡುತ್ತ ನಾನು ತುಂಬಾ ದೂರವಾದೆ. ಒಂದು ತಿರುವಿನಲ್ಲಿ ಹೊರಳಿ ನೋಡಿದಾಗ ನನಗೆ ಯಾರೂ ಕಾಣಿಸಲೇ ಇಲ್ಲ. ಅಗಲ ಕಾಲುದಾರಿಯೇ ಆದರೂ ನೂರೆಂಟು ಕವಲುಗಳು ಅದಕ್ಕೆ. "ಅ" ಪಿಕೆಟ್ ದಿಕ್ಕಿನ ಕವಲನ್ನು ಹಿಡಿದು ಓಡುತ್ತಿದ್ದೆ. ಅದರ ದೂರ ಆರು ಮೈಲು ಗುಡ್ಡದ ದಾರಿಯನ್ನು ಲಕ್ಷ್ಯದಲ್ಲಿ ಹಿಡಿದರೂ ನನ್ನಂತಹ ಓಟಗಾರನಿಗೆ ಎರಡು ತಾಸಿಗಿಂತ ಹೆಚ್ಚು ಸಮಯ ಬೇಡ. ಮೂರು ತಾಸಾದರೂ ಅದರ ಸುಳಿವೇ ಇಲ್ಲದಾಗ ಅಚ್ಚರಿಯಾಯ್ತು. ಸಾಲದ್ದಕ್ಕೆ ನಾನು ಹಿಡಿದು ಬಂದ ರಸ್ತೆ ಒಂದು ಗುಡ್ಡದ ಪಾದದಲ್ಲಿ ತಟ್ಟನೆ ಮಾಯವೆ ಆಗಿಹೋಯ್ತು. ದಿಗ್ಭ್ರಮೆಯಾಯ್ತು. ಒಂದು ಕ್ಷಣ ಯೋಚಿಸಿ ಬಲದ ರಸ್ತೆ ಹಿಡಿದು ಸಾಗಿದೆ. ಅದೂ ಗುಡ್ಡವನ್ನು ಸುತ್ತು ಬಳಸಿ ಹುಲ್ಲಿನಲ್ಲಿ ಲೀನವಾಯ್ತು. ಸುತ್ತಲೂ ಅರಣ್ಯ, ಗುಡ್ಡಗಳು, ಕಣಿವೆಗಳು. ಈಗ ನಾನು ಬಂದ ದಿಕ್ಕೂ ತಪ್ಪಿಹೋಗಿತ್ತು. ಯಾವ ದಿಕ್ಕಿಗೆ ಹೋದರೆ ಹೇಗೋ...ಒಂದೂ ಅರ್ಥವಾಗಲಿಲ್ಲ. ಮನಸ್ಸಿನ ಸ್ಥಿಮಿತ ಕ್ಷಣಕ್ಷಣಕ್ಕೂ ಕಡಿಮೆಯಾಗುತ್ತ ಹೋಗಿ ಒಂದೊಂದು ಕ್ಷಣವೂ ಒಂದೊಂದು ಯುಗವಾಗುತ್ತ ಹೋಯ್ತು. ಬದಿಯಲ್ಲಿ ಎದ್ದು ನಿಂತ ಗುಡ್ಡವೇ ನಾನು ಬಂದ ಗುಡ್ಡ

ಎನ್ನಿಸಿತು. ಥಟ್ಟನೆ ಅತ್ತ ಧಾವಿಸತೊಡಗಿದೆ. ಬಂಡೆಯಿಂದ ಬಂಡೆಗೆ ದಾಟಬೇಕಿತ್ತು. ನೀರಿನಲ್ಲಿ ಕೆಸರು ತುಳಿದು ಪಾರಾಗಬೇಕಿತ್ತು. ಒಂದು ಕಲ್ಲಿನ ತುದಿ ಥಟ್ಟನೆ ಮುರಿಯಿತು. ಆಯ ತಪ್ಪಿ ಬಿದ್ದೆ. ಎಷ್ಟು ತಗ್ಗಿಗೆ ಬಿದ್ದೆನೋ ಅರಿವಾಗಲಿಲ್ಲ. ತಲೆಗೆ ಏನೋ ಬಡಿದಂತಾಯ್ತು ಕಣ್ಣಿಗೆ ಕತ್ತಲೆಯಾವರಿಸಿತು.

ಎಚ್ಚರವಾದಾಗ ತಲೆ ನೋಯುತ್ತಿತ್ತು. ತಲೆಯಡಿ ಏನೋ ಮೆತ್ತಗಿದ್ದಂತಿತ್ತು. ಮುಖದ ಮೇಲೆ ಏನೋ ಮೃದುವಾಗಿ ಆಡಿದಂತಾಗಿ ಕಣ್ಣು ಬಿಟ್ಟೆ. ಮುಖದ ನೇರಕ್ಕೆ ಯುವತಿಯೊಬ್ಬಳ ಮುಖವಿತ್ತು. ಅವಳ ಉದ್ದನೆಯ ಮುಖ, ಹಳದಿ ವರ್ಣ, ಬಣ್ಣಬಣ್ಣದ ವಿಚಿತ್ರ ಉಡುಪು ಅವಳೊಬ್ಬಳು ನಾಗಾ ತರುಣಿ ಎಂದು ಸಾರಿ ಹೇಳಿದುವು. ಯಾವುದೋ ಸೊಪ್ಪನ್ನು ಅಂಗೈಯಲ್ಲಿ ಹಿಂಡಿ ರಸವನ್ನು ಹಣೆಯ ಗಾಯಕ್ಕೆ ಸುರಿಯುತ್ತಿದ್ದಳು. ಅವಳ ತೊಡೆಯ ಮೇಲೆ ನನ್ನ ತಲೆಯಿತ್ತು. ನನ್ನನ್ನು ನೋಡಿ ಮಂದಹಾಸ ಬೀರಿದ ಅವಳನ್ನು ಕೃತಜ್ಞತೆಯಿಂದ ನೋಡಿದೆ. ತನ್ನ ಸಣ್ಣ ಕಣ್ಣುಗಳನ್ನು ಪಟಕಿಸುತ್ತ, "ಚೀನಾ...ಚೀನಾ" ಎಂದು ಅತ್ತ ಕೈ ತೋರಿಸಿದಳು. ಅತ್ತ ತಲೆ ಹೊರಳಿಸಿದೆ. ಎಲ್ಲ ನೆನಪಾಯ್ತು, ನಾನು ರಸ್ತೆಯ ಅನ್ವೇಷಣೆಯಲ್ಲಿ ಅತ್ತಲೆ ಹೊರಟಿದ್ದೆ. ಅಂದರೆ ಬೀಳದಿರುತ್ತಿದ್ದರೆ ಎಚ್ಚರ ತಪ್ಪದಿರುತ್ತಿದ್ದರೆ ಈ ಸಮಯ...ಮುಂದೆ ಯೋಚಿಸಲಾಗಲಿಲ್ಲ. ಆ ಕಲ್ಪನೆಯಿಂದ ಮೈ ಬೆವರಿ ಅವಳ ಕೈಯನ್ನು ಗಟ್ಟಿಯಾಗಿ ಹಿಡಿದುಕೊಂಡೆ. ಸ್ವಲ್ಪ ಸಮಾಧಾನವಾದ ಮೇಲೆ "ನಿನ್ನ ಹೆಸರೇನು?" ಎಂದೆ, ಸನ್ನೆಯಿಂದ. ಅವಳು ನಾಚಿದಳು. ಆಮೇಲೆ ಶೀಯೂಂಗ್ಚಾ ಎಂದಳು. ಅವನ್ನೇ ಮನನ ಮಾಡುತ್ತಿದ್ದಂತೆ ಗದ್ದಲ ಕೇಳಿಸಿತು. ಅತ್ತ ತಿರುಗಿದರೆ ನಾಲ್ಕಾರು ಜನ ಬರುತ್ತಿದ್ದರು. ಗುರುತು ಹತ್ತಿತು, ನನ್ನ ಸಂಗಡಿಗರು! ನನ್ನನ್ನು ಹುಡುಕುತ್ತ ಬಂದವರು. ಶೀಯೂಂಗ್ಚಾ ಎದ್ದು ಕಾಡಿನಲ್ಲಿ ಓಡಿ ಮರೆಯಾಗಿ ಹೋದಳು. ನಾನು ನನ್ನವರೊಂದಿಗೆ ತಿರುಗಿ ರೂಮು ಕಂಡೆ.

ಅಂದು ತೊಡೆಯ ಮೇಲೆ ಮಲಗಿಸಿಕೊಂಡ ಶೀಯೂಂಗ್ಚಾ, ಜಿಂಕೆಯಂತೆ ಪುಟಿಯುತ್ತಾ ಕಾಡಿನಲ್ಲಿ ಮರೆಯಾದ ಶೀಯೂಂಗ್ಚಾ ಮತ್ತೆ ನನಗೆ ಕಾಣಸಿಗಲಿಲ್ಲ. ಆದರೆ ಆ ನಾಗಿಣಿಯ ನೆನಪು ನನ್ನ ಹೃದಯವನ್ನು ಗೆದ್ದುಕೊಂಡಿದೆ. ಯಾರಿಗೂ ಗೊತ್ತಿಲ್ಲದಂತೆ ಅಲ್ಲಿ ವಾಸಿಸುತ್ತಾಳೆ ಅವಳು. ✡

****************

## ಘೋಷಯಾತ್ರೆ

ಪೂರ್ವಕಾಲದಲ್ಲಿ ರಾಜರು ಜನವಸತಿಯಿದ್ದ ಕೆಲವು ಪ್ರದೇಶಗಳಲ್ಲಿ ವಿಸ್ತೃತ ಹುಲ್ಲುಗಾವಲುಗಳನ್ನು ಏರ್ಪಡಿಸಿ ಅಲ್ಲಿ ತಮ್ಮ ಹಸುಗಳ ಮಂದೆಗಳನ್ನು ಮೇಯಲು ಬಿಟ್ಟು ಅವುಗಳ ಸಂರಕ್ಷಣೆಗೆ ಗೊಲ್ಲರನ್ನು ನೇಮಿಸುತ್ತಿದ್ದರು. ಇಂಥ ಗೊಲ್ಲರ ಆವಾಸಗಳಿಗೆ 'ಘೋಷ'ಗಳೆಂದು ಹೆಸರು. ಆಗಾಗ ರಾಜರು ಅಥವಾ ಅವರ ನಂಬಿಗಸ್ಥ ಅಧಿಕಾರಿಗಳು ಈ ಘೋಷಗಳಿಗೆ ಹೋಗಿ ಹಸು ಕರುಗಳನ್ನು ಲೆಕ್ಕ ಮಾಡಿ, ಗೊಲ್ಲರ ಕಷ್ಟಸುಖಗಳನ್ನು ವಿಚಾರಿಸಿ ಸೂಕ್ತ ವ್ಯವಸ್ಥೆ ಮಾಡುತ್ತಿದ್ದರು. ಇಂಥ ಭೇಟಿಗೆ 'ಘೋಷಯಾತ್ರೆ' ಎಂದು ಹೆಸರಿತ್ತು. ದುರ್ಯೋಧನ ನಡೆಸಿದ ಒಂದು ಘೋಷಯಾತ್ರೆಯ ವೃತ್ತಾಂತ ಮಹಾಭಾರತದಲ್ಲಿ ಪ್ರಸಿದ್ಧವಾಗಿದೆ.

## ರೇಖಾರಹಿತರು

ಸ್ವೀಡನ್ನಿನ ಆ್ಯಂಡರ್ಸ್ ಡ್ಯಾನಿಕ್ಸನ್ (೫೦ ವರ್ಷ) ಹಾಗೂ ಆತನ ಪುತ್ರಿ ಮೇರಿ (೧೮ ವರ್ಷ) ಇವರ ಕೈಬೆರಳುಗಳನ್ನು ಪರೀಕ್ಷಿಸಿದ ತಜ್ಞರು ಅವರೀರ್ವರ ಬೆರಳುಗಳ ಮೇಲೆ ಯಾವ ಬಗೆಯ ರೇಖೆಗಳೂ ಕಂಡುಬಂದಿಲ್ಲವೆಂದು ತಿಳಿಸಿದ್ದಾರೆಂದು ಸ್ಟಾಕ್‌ಹೋಮ್‌ನ ವೃತ್ತಪತ್ರಿಕೆ 'ಡೆಗೆಯಸ್ ನೈಥೆಟರ್' ವರದಿ ಮಾಡಿದೆ.



ಕನ್ನಡಕ್ಕಾಗಿ ಕೈ ಎತ್ತಿದ ಕೃತಾರ್ಥವ್ಯಕ್ತಿ

# ನಿಷ್ಠಾವಂತ ನಿಟ್ಟೂರು ಅವರು

ಬೈಕಾಡಿ ವೆಂಕಟಕೃಷ್ಣರಾಯ

ಒಮ್ಮೆಲೇ ನೋಡಿದರೆ ನಮ್ಮ-ನಿಮ್ಮ ಹಾಗೆ ಇವರೂ ಒಬ್ಬರು; ಪ್ರಾಥಮಿಕ ಶಾಲೆಯ ರಿಟೈರ್ಡ್ ಮೇಷ್ಟ್ರೋ ಲೆಕ್ಕ ಬರೆಯುವ ಕಾರಕೂನರೋ ಆಗಿದ್ದಿರಬೇಕೆಂಬ ಭಾವನೆ ಮೂಡಿಸುವ ಈ ವ್ಯಕ್ತಿ ತೊಡುವ ಖಾದಿಯಷ್ಟೇ ಪರಿಶುದ್ಧ, ಶ್ರೇಷ್ಠ, ಸರಳ ಜೀವ.

ನಾನು ಸಂಧಿಸಿದ ಮಹಾನುಭಾವರಲ್ಲಿ ಶ್ರೀ ನಿಟ್ಟೂರು ಶ್ರೀನಿವಾಸರಾಯರೂ ಒಬ್ಬರು. ಖಾದಿ ಭಂಡಾರದ ಪಕ್ಕದಲ್ಲೇ ತನ್ನ ಬದುಕಿನ ಕೆಲ ಕಾಲವನ್ನು ಕಳೆದ ಓರ್ವ ನ್ಯಾಯವಾದಿ, ಖಾದಿ ತತ್ವವನ್ನು ಜನತೆಗೆ ಒಂದು ವರ ಎಂಬಂತೆ ಬೋಧಿಸಿದ ಮಹಾತ್ಮರ ಪರಮ ಶಿಷ್ಯನಾಗಿ, ಅವರ ಆತ್ಮಚರಿತ್ರೆಯನ್ನು ಕನ್ನಡಿಸಿದ್ದಲ್ಲದೆ, ಆ ಗ್ರಂಥದ ಹೆಸರಿನಲ್ಲೇ ತನ್ನ ಪ್ರಕಟನಾಲಯವನ್ನು 'ಸತ್ಯಶೋಧನ' ಎಂದು ಕರೆದ ಸತ್ಯನಿಷ್ಠರು ಶ್ರೀನಿವಾಸರಾಯರು.

ಶ್ರೀನಿವಾಸರಾಯರು ಓರ್ವ ನ್ಯಾಯವಾದಿಯಾಗಿ ರಾಜ್ಯದ ಶ್ರೇಷ್ಠ ನ್ಯಾಯಾಧೀಶ ಪೀಠವನ್ನೂ ಅಲಂಕರಿಸಿದ್ದರು; ರಾಜ್ಯದ ರಾಜ್ಯಪಾಲರೂ ಆಗಿದ್ದರು; ಅಲ್ಲದೆ ಕೇಂದ್ರದ ವಿಜಿಲೆನ್ಸ್ ಕಮಿಷನರರೂ ಆಗಿದ್ದರು. ಆದರೆ ಅವರ ಆಸಕ್ತಿ ಬಹುಮಟ್ಟಿಗೆ ಸಾಹಿತ್ಯದ ಕಡೆಗೇ ಹೆಚ್ಚಾಗಿತ್ತು. ಶ್ರೀನಿವಾಸರಾಯರು ಕರ್ನಾಟಕದ ಮೊದಲ ಸಾಲಿನ ಪ್ರಸಿದ್ಧ ಪ್ರಕಾಶಕರೂ ಆಗಿದ್ದರು. ಆದರೆ ಬೆಂಗಳೂರಿನ ಕೋಟೆಯಲ್ಲಿ ಬಹು ಕಾಲದಿಂದ ಶೋಭಿಸುತ್ತಿದ್ದ ಬಹು ಜನ ಕನ್ನಡ ಬರಹಗಾರರಿಗೆ ಆಶ್ರಯ ನೀಡಿದ್ದ 'ಸತ್ಯಶೋಧನ' ಪ್ರಕಟನಾಲಯ ಮಾತ್ರ ಇಂದು ಅಲ್ಲಿಲ್ಲ.

ಶ್ರೀನಿವಾಸರಾಯರ ತಂದೆ ಶ್ಯಾಮಣ್ಣನವರು ಚಳ್ಳಕೆರೆ ಎ.ವಿ. ಸ್ಕೂಲಿನ ಮುಖ್ಯೋಪಾಧ್ಯಾಯರಾಗಿದ್ದು ರಾಯರ ಪ್ರಾಥಮಿಕ ವಿದ್ಯಾಭ್ಯಾಸ ಅಲ್ಲಿ ನಡೆಯಿತು. ಮಾಧ್ಯಮಿಕ ಶಿಕ್ಷಣ ಶಿವಮೊಗ್ಗೆಯಲ್ಲಿ. ರಾಜ್ಯಸಭೆಯ ಉಪಾಧ್ಯಕ್ಷರಾಗಿದ್ದ ದಿ. ಎಸ್. ವಿ. ಕೃಷ್ಣಮೂರ್ತಿರಾಯರು, ಸಣ್ಣ ಕತೆಗಾರ 'ಆನಂದ' (ಅಜ್ಜಂಪುರ ಸೀತಾರಾಂ) ಇವರುಗಳು ರಾಯರ ಸಹಪಾಠಿಗಳಾಗಿದ್ದರು.

"ನನ್ನಲ್ಲಿ ಕನ್ನಡ ಅಭಿಮಾನ ಬೆಳೆಸಿದವರು ಪಂಡಿತರುಗಳಾದ ಶ್ರೀ ಕುಕ್ಕೆ ಸುಬ್ರಹ್ಮಣ್ಯ ಶಾಸ್ತ್ರಿಗಳು ಮತ್ತು ಕನ್ನಡದ ಹಿರಿಯ ಸಾಹಿತಿ ಶ್ರೀ ಎಂ. ಆರ್. ಶ್ರೀನಿವಾಸಮೂರ್ತಿಗಳು" ಎಂದು ತನ್ನ ಗುರುಗಳನ್ನು ಸ್ಮರಿಸಿಕೊಳ್ಳುವ ರಾಯರು ತನಗೆ ವಿಜ್ಞಾನದ ಪಾಠ ಹೇಳುತ್ತಿದ್ದ ಮೇಷ್ಟ್ರು ಶ್ರೀನಿವಾಸಮೂರ್ತಿಗಳ ಚೊಚ್ಚಲ ಸಂಭ್ರಮ 'ಸಾವಿತ್ರಿ'ಯನ್ನು 'ಸತ್ಯಶೋಧನ'ದ ಮೂಲಕ ಪ್ರಕಟಿಸಿದ್ದರು. ಶ್ರೀನಿವಾಸಮೂರ್ತಿಗಳ ಹೆಚ್ಚಿನ ಕೃತಿಗಳನ್ನೂ ರಾಯರೇ ಪ್ರಕಟಿಸಿದ್ದರು.

ಗಾಂಧೀಜಿಯವರ ಆತ್ಮಚರಿತ್ರೆ 'ಯಂಗ್ ಇಂಡಿಯಾ'ದಲ್ಲಿ ೧೯೨೫ರ ಸುಮಾರಿಗೆ ಪ್ರಕಟವಾಗುತ್ತಿತ್ತು. ಅವರ ಕನ್ನಡ ರೂಪಾಂತರವನ್ನು "ವಿಶ್ವಕರ್ನಾಟಕ"ದಲ್ಲಿ ರಾಯರು ಮತ್ತು ಅವರ ಧರ್ಮಪತ್ನಿಯವರೂ ಬರೆದು ಪ್ರಕಟಿಸಿದರು. ೧೯೨೭ರಲ್ಲಿ ಗಾಂಧೀಜಿಯವರ ಒಪ್ಪಿಗೆ ಪಡೆದು "ವಿಶ್ವಕರ್ನಾಟಕ"ದ ಈ ಬಿಡಿ ಲೇಖನಗಳನ್ನೇ ಪುಸ್ತಕರೂಪವಾಗಿ, 'ಸತ್ಯಶೋಧನ' ಎಂಬ ಹೆಸರಿನಲ್ಲಿ ತಾವೇ ಪ್ರಕಟಿಸಿದರು. ತಮ್ಮ ಪ್ರಕಟನಾಲಯವನ್ನು ಅದೇ ಹೆಸರಿನಲ್ಲಿ ಕರೆದರು. ಕನ್ನಡದಲ್ಲಿ ಬರೆಯುವವರ ಸಂಖ್ಯೆ ತೀರ ವಿರಳವಾಗಿದ್ದ ಕಾಲವದು. ಬರೆದರೂ ಪ್ರಕಟಿಸುವವರಿರಲಿಲ್ಲ. ಇದ್ದ ಕೆಲವು ಪ್ರಕಾಶನ ಸಂಸ್ಥೆಗಳೂ ಕೇವಲ ಪಠ್ಯ ಪುಸ್ತಗಳಿಗೇ ಮೀಸಲಾಗಿದ್ದುವು. ಇಂತಹ ದುಃಸ್ಥಿತಿಯ ಒಂದು ಕಾಲದಲ್ಲಿ ಕನ್ನಡದ ಬರಹಗಾರರಿಗೆ ಒಂದು ಉಪಕಾರ ಆಗಲಿ ಎಂಬ ಹಿರಿಯ ಉದ್ದೇಶದಿಂದ 'ಸತ್ಯಶೋಧನ' ಪ್ರಕಟನಾಲಯವನ್ನು ರಾಯರು ಸ್ಥಾಪಿಸಿದರು. ಆರಂಭದಲ್ಲಿ ಅದು 'ವಿಶ್ವಕರ್ನಾಟಕ ಪ್ರಕಟನಾಲಯ' ಎಂದೇ ಕರೆಯಲ್ಪಟ್ಟಿತ್ತಂತೆ.

ನಿಟ್ಟೂರರ ಆಫೀಸು ಆರಂಭದಲ್ಲಿ ಬೆಂಗಳೂರಿನ ಮಲ್ಲಪ್ಪ ಮಾರ್ಕೆಟ್ಟಿನ ಮೂರನೆಯ ಮಹಡಿಯಲ್ಲಿತ್ತು. ಅದೇ ಅವರ ಪ್ರಕಟನಾಲಯವೂ ಆಗಿತ್ತು. 'ವಿಶ್ವಕರ್ನಾಟಕ'ವೂ ಅಲ್ಲಿಂದಲೇ ಪ್ರಕಟವಾಗುತ್ತಿತ್ತು. (ದಿವಂಗತ ತಿ. ತಾ. ಶರ್ಮರ ಸಂಪರ್ಕ ರಾಯರಿಗೆ ಒದಗಿದ್ದು ಹೀಗೆ.)

ಸತ್ಯಶೋಧನ ಪ್ರಕಟನಾಲಯ ಮಾತ್ರವಲ್ಲ, ಅದು ಪುಸ್ತಕ ಭಂಡಾರವೂ ಆಗಿತ್ತು. ಕನ್ನಡದ ಎಲ್ಲ ಪ್ರಕಟನೆಗಳು ಒಂದೇ ಕಡೆ ದೊರೆಯುವಂತಾಗಲಿ ಎಂದು ಅದನ್ನು ಪುಸ್ತಕ ಭಂಡಾರವಾಗಿಯೂ ಪರಿವರ್ತಿಸಿದ್ದರು ಮಾತ್ರವಲ್ಲ ಕನ್ನಡ ಸಾಹಿತಿಗಳ ಹೆಚ್ಚಿನ ಕೃತಿಗಳು ಸತ್ಯಶೋಧನದಿಂದಲೇ ಪ್ರಕಟವಾಗಿದೆ. ತೀರ ಆರ್ಥಿಕ - ಬಿಕ್ಕಟ್ಟಿನ ಕಾಲದಲ್ಲಿಯೂ ಸಾವಿರಾರು ರೂಪಾಯಿಗಳ ಬಂಡವಾಳ ಹಾಕಿ ಕಾರಂತರ 'ಬಾಲಪ್ರಪಂಚ'ವನ್ನು ಪ್ರಕಟಿಸುವ ಸಾಹಸ ಮಾಡಿದವರೂ ರಾಯರೇ. ಅಲ್ಲದೆ ಈ ಬಾಲಪ್ರಪಂಚದ ಕಟ್ಟನ್ನು ಹೊತ್ತು ಹಳ್ಳಿಯಿಂದ ಹಳ್ಳಿಗೆ ಸುತ್ತಿ ಅವರ ಮಾರಾಟದ ಕಾರ್ಯವನ್ನೂ ನಿರ್ವಹಿಸಿದ್ದರು.

ಮಲ್ಲಪ್ಪ ಮಾರ್ಕೆಟ್ಟಿನಿಂದ ಮುಂದೆ ಅವರ ಕಚೇರಿ, ಪ್ರಕಟನಾಲಯ ಎಲ್ಲವೂ ಬೆಂಗಳೂರು ಕೋಟೆ ಪ್ರದೇಶಕ್ಕೆ ಬಂತು. ಕೋಟೆಯ ಹತ್ತಿರದಲ್ಲಿ ಅವರಿಗೆ ಜಾಗ ಕೊಡಿಸಿದವರು ಶ್ರೀ ಸದಾಶಿವನ್. ಸದಾಶಿವನ್ ಆಗ ಬೆಂಗಳೂರಲ್ಲಿ ಖಾದಿ ಭಂಡಾರದಲ್ಲಿದ್ದರು. ರಾಯರ ಮಿತ್ರರಾಗಿದ್ದರು. ಸದಾಶಿವನ್ ರಾಜಾಜಿಯವರ ಮಿತ್ರ. ರಾಜಾಜಿಯವರ ಸಂಪರ್ಕ ಶ್ರೀನಿವಾಸರಾಯರಿಗೂ ಇತ್ತು. ಸದಾಶಿವನ್ ಶ್ರೀಮತಿ ಸುಬ್ಬುಲಕ್ಷ್ಮಿಯವರನ್ನು ವಿವಾಹವಾಗಿ 'ಕಲ್ಕಿ' ಪತ್ರಿಕೆಯ ಸಂಪಾದಕರಾಗಿ ಈಗ ಮದರಾಸಿನಲ್ಲಿ ನೆಲಸಿದ್ದಾರೆ.

ಶ್ರೀನಿವಾಸರಾಯರು ಪತ್ರಿಕೋದ್ಯಮಿಯೂ ಆಗಿದ್ದರು ಎಂಬುದನ್ನು ಬಹಳ ಮಂದಿ ತಿಳಿದಿರಲಾರರು. ತುಮಕೂರು ರಂಗಯ್ಯಂಗಾರ್ಯರು ನಡೆಸುತ್ತಿದ್ದ 'ಮೈಸೂರು ಕ್ರಾನಿಕಲ್' ಪತ್ರಿಕೆಯ ಕಾಲಂಗಳಲ್ಲಿ ರಾಯರು ಆಗಾಗ್ಗ ಬರೆಯುತ್ತಿದ್ದರು. ತಿರುಮಲೆ ತಾತಾಚಾರ್ಯ ಶರ್ಮರೂ ಶ್ರೀನಿವಾಸರಾಯರೂ ಈ ಪತ್ರಿಕೆಯ ಇಂಗ್ಲೀಷ್ ವಿಭಾಗವನ್ನು ಸಂಪಾದಿಸುತ್ತಿದ್ದರು. ಮದ್ರಾಸ್ ಪ್ರಾಚ್ಯ ಸಂಶೋ

ಘನ ಇಲಾಖೆಯಲ್ಲಿ ದುಡಿಯುತ್ತಿದ್ದ ಶರ್ಮರು ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸುವ ಸಲುವಾಗಿ ಕೆಲಸಕ್ಕೆ ರಾಜೀನಾಮೆ ನೀಡಿ ಬೆಂಗಳೂರಿಗೆ ಬಂದ ನಂತರ ಅಂದರೆ ೧೯೨೪ರಲ್ಲಿ ರಂಗಯ್ಯಂಗಾರ್ಯರು ತನ್ನ ಪತ್ರಿಕೆಯನ್ನು ಶರ್ಮರಿಗೆ ಒಪ್ಪಿಸಿದರು. ಅನಂತರ ಅದು "ವಿಶ್ವಕರ್ನಾಟಕ" ಪತ್ರಿಕೆಯಾಯಿತು.

ನಿಟ್ಟೂರರು ಅಧ್ಯಾಪಕರೂ ಆಗಿದ್ದರು. ಅಂದರೆ ಗೌರವ ಅಧ್ಯಾಪಕರು. ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮಗಳಲ್ಲಿ ರಾಷ್ಟ್ರೀಯ ಶಿಕ್ಷಣವೂ ಒಂದಾಗಿತ್ತು. ರಾಷ್ಟ್ರೀಯ ಶಿಕ್ಷಣ ಪ್ರಚಾರಕ್ಕಾಗಿ ಬೆಂಗಳೂರಲ್ಲಿ ಗಾಂಧೀಜಿಯವರ ಅಪೇಕ್ಷೆಯಂತೆ ಒಂದು ಸಂಸ್ಥೆ ಶ್ರೀ ಬಿ. ಕೆ. ಗರುಡಾಚಾರ್ ಮುಂತಾದವರ ಪ್ರಯತ್ನದಿಂದ ಸ್ಥಾಪಿಸಲ್ಪಟ್ಟಿತ್ತು. ರಾಜಾಜಿ ಕೂಡ ಇದರಲ್ಲಿ ಗೌರವ ಅಧ್ಯಾಪಕರಾಗಿದ್ದರು. ದಿ. ಕೋಲಾರ ಸಂಪದ್ಗಿರಿರಾಯರು (ಶ್ರೀನಿವಾಸ ರಾಯರ ಅತ್ಯಂತ ಆತ್ಮೀಯ ಮಿತ್ರರು) ಆ ಸಂಸ್ಥೆಯ ಕಾಯಂ ಚುನಾಯಿತ ಮುಖ್ಯೋಪಾಧ್ಯಾಯರಾಗಿದ್ದರು. ಬ್ರಿಟಿಷ್ ಸರಕಾರ ಈ ಸಂಸ್ಥೆಯ ಒಂದು ಪತ್ರಿಕೆಯನ್ನು 'ದೇವಿ ಶಾಪ' ಎಂದು ಕರೆಯುತ್ತಿತ್ತಂತೆ (ದೇಶೀಯ ವಿದ್ಯಾಶಾಲೆಯ ಪತ್ರಿಕೆ). ಆ ಪತ್ರಿಕೆಯಲ್ಲಿ "ಟಿ.ಜಿ." 'ತುಂಟನ ಗುಟ್ಟು' ಎಂಬ ಹೆಸರಲ್ಲಿ ರಾಯರು ದೇಶದ ರಾಜಕೀಯವನ್ನು ಕುರಿತ ಲೇಖನಗಳನ್ನು ಬರೆಯುತ್ತಿದ್ದರು. ಶ್ರೀ ರಾಮ ಕೋಟೀಶ್ವರ ರಾಯರು ಸಂಪಾದಕತ್ವದಲ್ಲಿ ಪ್ರಕಟವಾಗುತ್ತಿದ್ದ 'ತ್ರಿವೇಣಿ' ಪತ್ರಿಕೆಗೂ ರಾಯರು ಲೇಖನ ಬರೆಯುತ್ತಿದ್ದರು.

ದೇಶದ ಸ್ವಾತಂತ್ರ್ಯ ಚಳುವಳಿಯಲ್ಲಿ ರಾಯರು ಪ್ರಮುಖ ಪಾತ್ರವನ್ನು ವಹಿಸಿದ್ದರು. ಈತ ಪೂರ್ವ ಸ್ವಾತಂತ್ರ್ಯಯೋಧ ಎಂದರೂ ಸರಿಯೆ. ಶ್ರೀನಿವಾಸರಾಯರು ಗಾಂಧೀಜಿಯವರನ್ನು ಕಂಡಿದ್ದೇ ೧೯೨೦ರಲ್ಲಿ. ಅಂದಿನಿಂದ ಅವರು ಗಾಂಧೀಜಿಯವರ ಪ್ರಭಾವಕ್ಕೊಳಗಾಗಿ ಅವರ ರಚನಾತ್ಮಕ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದರು. ಉಪ್ಪಿನ ಸತ್ಯಾಗ್ರಹದ ಕಾಲದಲ್ಲಿ ಉತ್ತರ ಕನ್ನಡ, ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಪೂರ್ವ ಸತ್ಯಾಗ್ರಹಿಯಾಗಿ ರಾಯರು ಪ್ರಮುಖ ಪಾತ್ರ ವಹಿಸಿದ್ದರು. ೧೯೩೨ರ ಕರನಿರಾಕರಣೆ ಚಳವಳಿಯಲ್ಲಿ ಅವರು ಉತ್ತರ ಕರ್ನಾಟಕದಲ್ಲಿ ಸೇವಾದಳದ ಹೊಣೆ ಹೊತ್ತಿದ್ದರು. ಸರದಾರ ವೆಂಕಟರಾಮಯ್ಯನವರು ಇದರ ಕಪ್ತಾನರಾಗಿದ್ದರಂತೆ.

ದೇಶ ಸ್ವಾತಂತ್ರ್ಯ ಚಳವಳಿ ಹೇಗೋ ಹಾಗೆಯೇ ಕರ್ನಾಟಕ ಏಕೀಕರಣ, ಕನ್ನಡ ಸಾಹಿತ್ಯ



"ಬೇಲೂರು, ಹಳೇಬೀಡು, ಬಾದಾಮಿ, ಪಟ್ಟದ ಕಲ್ಲು ಮುಂತಾದವುಗಳನ್ನು ಮೀರಿ ನಿಲ್ಲುವಂತಹ ಶಿಲ್ಪ ಕಲಾಕೃತಿ ನಿಮ್ಮಿಂದ ಮೂಡಿ ಬರಲಿ ಅಂತಾ ಆಶಿಸುತ್ತ ನನ್ನೆರಡು ಮಾತುಗಳನ್ನು ಮುಗಿಸುತ್ತೇನೆ."

ಪರಿಷತ್ತು- ಈ ಎರಡು ರಂಗಗಳಲ್ಲೂ ರಾಯರು ಸಲ್ಲಿಸಿದ ಸೇವೆ ಅಪಾರವಾದದ್ದು. ೧೯೨೨ರಿಂದ ರಾಯರು ಪರಿಷತ್ತಿನ ಸದಸ್ಯರು. ಬಹಳ ಕಾಲ ಅದರ ಕಾರ್ಯಕಾರಿಣಿ ಸಮಿತಿಯಲ್ಲಿಯೂ ಇದ್ದರು. ಮೈಸೂರು ಪ್ರಾಂತ ಸಮಿತಿ ಅಧ್ಯಕ್ಷರೂ ಆಗಿದ್ದರು. ರಾಷ್ಟ್ರಭಾಷೆಯಾದ ಹಿಂದಿಯ ಕುರಿತು ಡಿ.ವಿ.ಜಿಯವರೊಡನೆ ಭಿನ್ನಾಭಿಪ್ರಾಯವುಂಟಾದಾಗ ಪರಿಷತ್ತಿನ ಕಾರ್ಯಕಾರಿ ಸಮಿತಿ ಸದಸ್ಯತ್ವಕ್ಕೆ ರಾಜೀನಾಮೆಯನ್ನು ಇತ್ತಿದ್ದರು. ಆದರೆ ಮೈಸೂರು ಪ್ರಾಂತ ಸಮಿತಿ ಸದಸ್ಯರಾಗಿದ್ದಾಗ ಮೈಸೂರಿನ ತಾಲೂಕು ಪ್ರದೇಶಗಳಲ್ಲೂ ಸಾಹಿತ್ಯೋತ್ಸವಗಳನ್ನು ಏರ್ಪಡಿಸಿ, ತಮ್ಮ ಸ್ವಂತದ ಖರ್ಚಿನಿಂದ ಪ್ರವಾಸ ಗೈದು ಸಾಹಿತ್ಯ ಪ್ರಚಾರ ಕಾರ್ಯ ನಡೆಸಿದರು. ಒಂದು ಹಳೆಯ ಮಾದರಿಯ ಫೋರ್ಡ್ ಮೋಟರ್ ಗಾಡಿಯಲ್ಲಿ, (ಕೆಲವೊಮ್ಮೆ ಅದು ಮುಷ್ಕರ ಹೂಡಿದಾಗ, ತಳ್ಳಿಕೊಂಡು) ರಾಯರ ಜತೆ ಮೈಸೂರ ಸಂಸ್ಥಾನಾದ್ಯಂತ ಪ್ರಯಾಣ ಮಾಡಿದ ರಸನಿಮಿಷಗಳು ನನ್ನ ನೆನಪಿನಲ್ಲಿ ಈಗಲೂ ಹಸಿರಾಗಿ ಉಳಿದು ಸಂತಸವನ್ನೀಯುತ್ತಿವೆ.

ರಾಯರ ಕಾಲೇಜ್ ವಿದ್ಯಾಭ್ಯಾಸಕ್ಕೂ ಅವರ ಕನ್ನಡದ ಬಗೆಗಿನ ಆಸಕ್ತಿಗೂ ಒಂದು ವಿಶೇಷ ಸಂಬಂಧವಿದೆ. ೧೯೨೦-೨೪ರ ಕಾಲ. ರಾಯರು ಬೆಂಗಳೂರು, ಸೆಂಟ್ರಲ್ ಕಾಲೇಜಿನ ವಿದ್ಯಾರ್ಥಿಯಾಗಿದ್ದರು. ಆಗಿನ ಕಾಲದಲ್ಲಿ ರಾಯರಿಗೆ ಒದಗಿ ಬಂದ ಗುರುಗಳು—ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳು, ವೆಂಕಣ್ಣಯ್ಯನವರು, ವೆಂಕಟನಾರಣಪ್ಪನವರು. ಶ್ರೀನಿವಾಸರಾಯರು ಸೆಂಟ್ರಲ್ ಕಾಲೇಜ್ ಕರ್ನಾಟಕ ಸಂಘದ ಕಾರ್ಯದರ್ಶಿಗಳೂ ಆಗಿದ್ದರು. ಪ್ರಬುದ್ಧ ಕರ್ನಾಟಕದ ಸಂಚಿಕೆಗಳನ್ನು ಸೈಕಲ್ಲಿಗೆ ಕಟ್ಟಿಕೊಂಡು ಹೋಗಿ ಮಾರಿ ಬರುತ್ತಿದ್ದರಂತೆ. ವೃತ್ತಿಯಲ್ಲಿ ನ್ಯಾಯವಾದಿಯಾಗಿದ್ದರೂ, ಅವರ [illegible] ಹವ್ಯಾಸ—ಸಾಹಿತ್ಯ ಮತ್ತು ಸಾಹಿತ್ಯದ ಚಟುವಟಿಕೆಗಳು.

ಅವರ ಒಡನಾಟವೇ ಹೆಚ್ಚಾಗಿ ಕನ್ನಡದ ಹಿರಿಯ ಸಾಹಿತಿಗಳೊಂದಿಗೆ ಆಗಿತ್ತು. ವಿರಾಮವಿದ್ದಾಗಲೆಲ್ಲ ಪರಿಷತ್ತಿಗೆ ಬರುತ್ತಿದ್ದರು. ಕೋಟಿಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರಿಗಳು, ಸಿ. ಕೆ. ವೆಂಕಟರಾಮಯ್ಯ, ವೀ.ಸಿ., ತೀ.ನಂ. ಶ್ರೀ., ಮುಂತಾದವರೊಡನೆ ಸೇರಿ ಹರಟೆ, ಎಡೆ ಎಡೆಯಲ್ಲಿ ಕಾಫಿ ಸಮಾರಾಧನೆ— ಹೀಗೆ ಶ್ರೀನಿವಾಸರಾಯರು ಪರಿಷತ್ತಿಗೆ ಬಂದರೆಂದರೆ ಅಲ್ಲಿದ್ದವರಿಗೆ ಅದೊಂದು ಸಂಭ್ರಮ.

ಅವರ ಇನ್ನೊಂದು ಕಾರ್ಯಕ್ಷೇತ್ರ ಡಿ.ವಿ.ಜಿ.ಯವರು ಸ್ಥಾಪಿಸಿದ ಗೋಖಲೆ ಸಾರ್ವಜನಿಕ ಸಂಸ್ಥೆ. ಗೋಖಲೆ ಸಂಸ್ಥೆಯ ವಿಚಾರಗೋಷ್ಠಿಯಲ್ಲಿ ಪ್ರತಿ ವಾರ ಇವರು ನೀಡುತ್ತಿದ್ದ ಲೋಕದ ವಾರ್ತೆಗಳ ಒಂದು ಸಮೀಕ್ಷೆ. ಅವರ ಇತರ ಉಪನ್ಯಾಸ ಬುದ್ಧಿಜೀವಿಗಳಿಗೆ, ವೈಚಾರಿಕರಿಗೆ ಒಂದು ಒಳ್ಳೆಯ ಆಹಾರವಾಗಿತ್ತು. ರಾಯರಿಗಾದರೆ ಪುಸ್ತಕವೇ ಆಹಾರ, ಜಗತ್ತಿನ ಎಲ್ಲ ಆಕಾಶವಾಣಿ ನಿಲಯಗಳ ದಿನದ ಪ್ರಸಾರ ನಿತ ಮೇಲೆಯೇ ಅವರು ನಿದ್ರಿಸುವುದು. ಬಹುಶಃ ಡಿ.ವಿ.ಜಿ.ಯವರ ನಿಧನದ ನಂತರ ಗೋಖಲೆ ಸಾರ್ವಜನಿಕ ಸಂಸ್ಥೆಯ ಹೊಣೆ ರಾಯರ ಹೆಗಲ ಮೇಲಿರಬೇಕು.

ಗಾಂಧಿ ಸ್ಮಾರಕ ನಿಧಿ ಸಂಸ್ಥೆ, ಗಾಂಧಿ ಪ್ರತಿಷ್ಠಾನ, ಪ್ರಕೃತಿ ಚಿಕಿತ್ಸೆ, ಪರಿಷತ್ತು ಮುಂತಾದ ಸಂಸ್ಥೆಗಳ ಸಂಪರ್ಕ ಹೊಂದಿದ್ದು, ರಾಯರು ಜಯಪ್ರಕಾಶನಾರಾಯಣ ಮತ್ತು ಶ್ರೀಮನ್ ನಾರಾಯಣ ಅಗರವಾಲರಂತಹ ರಾಷ್ಟ್ರ ಪುರುಷರ ಸ್ನೇಹದ ಲಾಭವನ್ನೂ ಪಡೆದಿದ್ದಾರೆ. ಆದರೆ ಜಯಪ್ರಕಾಶ ನಾರಾಯಣರ ಸಂಪರ್ಕ ಹೊಂದಿದವರು ಎಂಬುದರಿಂದಲೇ ಬಹುಶಃ ತುರ್ತುಪರಿಸ್ಥಿತಿಯ ಕಾಲದಲ್ಲಿ ಇಂದಿರಾ ಗಾಂಧಿಯವರ ಅವಕೃಪೆಗೂ ಪಾತ್ರರಾಗಿದ್ದರು. ಅವರ ಇತರ ಚಟುವಟಿಕೆಗಳಿಗಿಂತ ಮುಖ್ಯವಾಗಿ ಕನ್ನಡ ಆಪತ್ತಿನಲ್ಲಿದ್ದ ಕಾಲದಲ್ಲಿ ಕನ್ನಡ ಸಾಹಿತ್ಯ ಪ್ರಕಾಶನ ಕಾರ್ಯದ ಹೊಣೆ ಹೊತ್ತು—ತಾನು ಕೈ ಸುಟ್ಟುಕೊಂಡರೂ, ಕನ್ನಡಕ್ಕಾಗಿ ಮಾಡಿದ ಅವರ ಉಪಕಾರ ಚಿರಸ್ಮರಣೀಯವಾದದ್ದು. ★

# ಇಲ್ಲಿ ಓರ್ವ
# ಎಲ್ ವಿಟಿ ಬಿಸ್ಕತ್ತು ಪ್ರೇಮಿ ಇದ್ದಾಳೆ.

ಬಿಡುವಿನ ಮಧ್ಯೆ ಅದು ಸರಿಯಾದ ಆಹಾರ ಅದರ ರುಚಿ ಅತ್ಯಂತ ಮಧುರ.
ಇಂದೇ ಸ್ವಲ್ಪ ಬಳಸಿ ನೋಡಿ




## ಅದರ ರುಚಿ
## ಅನುಪಮ ಎಂದು ಆಕೆ ಹೇಳುತ್ತಾಳೆ.

**ಎಲ್ ವಿ ಟಿ ಪ್ರಾಡಕ್ಟ್ಸ**

ಪಿ.ಬಿ. ನಂ. 26 ಹುಬ್ಬಳ್ಳಿ-580 021.

LVT.2-79K

ಅವರು ಅದಕ್ಕಾಗಿ
ಲಕ್ಷಗಟ್ಟಲೆ ಖರ್ಚು ಮಾಡಿದರು

# ನವಾಬರ ನಾಯಿಯ ಮದುವೆ

ಮೂಲ: **ದಿವಾನ್ ಜರ್ಮನಿ ದಾಸ್**
ಕನ್ನಡಕ್ಕೆ: **ರೇಣುಕ**

ಜುನಾಗಢ ಸಂಸ್ಥಾನದ ನವಾಬರಾಗಿದ್ದ ಸರ್ ಮಹಬತ್ ಖಾನ್ ರಸೂಲ್ ಖಾನರು ವಿಲಕ್ಷಣ ಸ್ವಭಾವದವರಾಗಿದ್ದರು. ಅವರ ನಡವಳಿಕೆಗಳಿಂದ ಅವರ ಆಪ್ತರು ಸಹ ನವಾಬರಿಗೆ ಬುದ್ಧಿ ಕೆಟ್ಟಿರ ಬಹುದೆಂದು ಶಂಕಿಸಿದ್ದುಂಟು. ಆದರೆ ಅವರನ್ನು ಪ್ರಶ್ನಿಸುವ ಎದೆಗಾರಿಕೆ ಯಾರಿಗೂ ಇರಲಿಲ್ಲ. ಅವರ ಮನಸ್ಸಿಗೆ ಬಂದದ್ದು, ಕನಸಿನಲ್ಲಿ ಕಂಡಿದ್ದು ಚ್ಯುತಿ ಯಿಲ್ಲದೆ ನೆರವೇರಲೇಬೇಕು.

ನವಾಬರ ಬಳಿ ಹೆಣ್ಣು ನಾಯಿಮರಿಯೊಂದಿತ್ತು. ಅದರ ಹೆಸರು ರೋಶನಾರಾ. ಚಿಕ್ಕ ಮರಿಯಾಗಿ-ದ್ದಾಗಿನಿಂದಲೂ ಅದು ಅವರ ಬಳಿ ಇದ್ದಿತು. ನವಾಬರಿಗೆ ಅದನ್ನು ಕಂಡರೆ ಅತುಲವಾದ ಪ್ರೇಮ. ಸದಾ ಅದು ಅವರ ಬಳಿ ಇರುತ್ತಿದ್ದಿತು. ಅದಕ್ಕೆ ನಡೆಯುತ್ತಿದ್ದ ರಾಜೋಪಚಾರಗಳನ್ನು ಕಂಡು ರಾಜಕುಮಾರರಿಗೂ ಅಸೂಯೆ ಉಂಟಾಗುತ್ತಿದ್ದಿತು. ರೋಶನಾರಾ ವಯಸ್ಸಿಗೆ ಬಂದಾಗ ನವಾಬರ ತಲೆಯಲ್ಲಿ ಅದಕ್ಕೆ ಮದುವೆ ಮಾಡಬೇಕೆಂಬ ವಿಲಕ್ಷಣ ಯೋಚನೆ ಸುಳಿಯಿತು. ಸರಿ, ನವಾಬರ ತಲೆಯಲ್ಲಿ ಸುಳಿದುದೆಲ್ಲ ನೆರವೇರಲೇಬೇಕಲ್ಲ! ಸಂಸ್ಥಾನದ ದಿವಾನರಾಗಿದ್ದ ಸರ್ ಅಲ್ಲಾಬಕ್ಷ್-ರಿಗೆ ರೋಶನಾರಾಳ ವಿವಾಹಮಹೋತ್ಸವವನ್ನು ರಾಜಯೋಗ್ಯ ರೀತಿಯಲ್ಲಿ ವಿಜೃಂಭಣೆಯಿಂದ ನೆರವೇರಿಸಲು ಆಜ್ಞೆಯಾಯಿತು.

ವಿವಾಹದ ಆಮಂತ್ರಣ ಪತ್ರಿಕೆಗಳನ್ನು ಭಾರತದ ಎಲ್ಲ ರಾಜ ಮಹಾರಾಜರುಗಳಿಗೆ, ವೈಸ್‌ರಾಯ್ ಮತ್ತು ಗವರ್ನರ್ ಜನರಲ್ ಅವರ ನಿಯೋಗಿಗಳಿಗೇ ಅಲ್ಲದೆ ಸಾವಿರಾರು ಜನ ಪ್ರತಿಷ್ಠಿತ ವ್ಯಕ್ತಿಗಳಿಗೂ ಕಳುಹಿಸಲಾಯಿತು. ವೈಸರಾಯರನ್ನುಳಿದು ಎಲ್ಲರೂ ಆಮಂತ್ರಣವನ್ನು ಅಂಗೀಕರಿಸಿದರು. ವೈಸ್‌ರಾಯ್ ಅವರು ಈ ಶ್ವಾನವಿವಾಹವನ್ನು ಎಂದೂ ಕಂಡು ಕೇಳದ ಬುದ್ಧಿ ಹೀನತೆಯ ಪ್ರತೀಕವೆಂದು ಟೀಕಿಸಿ ಆಮಂತ್ರಣ ವನ್ನು ನಿರಾಕರಿಸಿದರು.

ವರನ ಪರಿವಾರವನ್ನು ರೈಲ್ವೆ ನಿಲ್ದಾಣದಲ್ಲಿ ಎದುರುಗೊಳ್ಳಲು ಬೆಲೆಬಾಳುವ ರೇಶ್ಮೆ ವಸ್ತ್ರ ಗಳನ್ನು ತೊಟ್ಟು, ಅಮೂಲ್ಯ ಆಭರಣಗಳನ್ನು ಧರಿಸಿದ ಇನ್ನೂರಐವತ್ತು ಶ್ವಾನಪರಿವಾರ-ದೊಂದಿಗೆ ಜುನಾಗಢದ ನವಾಬರು ಆನೆಯ

ಮೇಲಿನ ಚಿನ್ನದ ಅಂಬಾರಿಯಲ್ಲಿ ಕುಳಿತು ಅರಮನೆಯಿಂದ ಅದ್ದೂರಿಯ ಮೆರವಣಿಗೆಯಲ್ಲಿ ಬಂದರು. ನಿಲ್ದಾಣದಲ್ಲಿ ಮಂತ್ರಿಗಳು, ಉನ್ನತ ಅಧಿಕಾರಿಗಳು ಮತ್ತು ಜುನಾಗಢದ ರಾಜಮನೆತನದವರೆಲ್ಲ ನೆರೆದಿದ್ದರು. ರೋಶನಾರಾಳ ಕೈ ಹಿಡಿಯುವ ವರ ಮಂಗ್ರೊಲ್ ಸಂಸ್ಥಾನದ ನವಾಬರ ಮುದ್ದಿನ ನಾಯಿ ಬಾಬಿ. ಬಾಬಿಯು ನಡೆಯುವ ಹಾದಿಯಲ್ಲಿ ರತ್ನಗಂಬಳಿಯನ್ನು ಹಾಸಲಾಗಿದ್ದಿತು. ಸೈನಿಕರು ಗೌರವರಕ್ಷೆಯನ್ನು ನೀಡಿದ ನಂತರ ಬಾಬಿಯನ್ನು ಮೆರವಣಿಗೆಯಲ್ಲಿ ಅರಮನೆಯ ದರಬಾರ್ ಹಾಲಿಗೆ ಕರೆತರಲಾಯಿತು. ವಿವಾಹದ ದಿನ ನಾಯಿ ರೋಶನಾರಾಳನ್ನು ಸ್ನಾನಮಾಡಿಸಿ ಅತಿ ಬೆಲೆಬಾಳುವ ಸುಗಂಧ ದ್ರವ್ಯಗಳನ್ನು ಪೂಸಿ ಗಂಡು ಬಾಬಿಯೊಂದಿಗೆ ವಿವಾಹ ನಡೆಯುವ ದರಬಾರ್ ಹಾಲಿಗೆ ಕರೆತರಲಾಯಿತು. ಅತಿ ಬೆಲೆಬಾಳುವ ಮುತ್ತಿನ ನೆಕ್‌ಲೇಸನ್ನು ರೋಶನಾರಾಳಿಗೆ ತೊಡಿಸಲಾಗಿದ್ದಿತು. ಗಂಡು ಬಾಬಿಯ ಕಾಲುಗಳಿಗೆ ಚಿನ್ನದ ಕಾಲುಬಳೆಯನ್ನು ಹಾಕಿದ್ದರು. ಕೊರಳಲ್ಲಿ ದೊಡ್ಡ ವಜ್ರಖಚಿತ ಚಿನ್ನದ ನೆಕ್‌ಲೇಸ್ ತೂಗುತ್ತಿತ್ತು. ಕಸೂತಿ ಹಾಕಿದ ರೇಶ್ಮೆಬಟ್ಟೆಯನ್ನು ಬಾಬಿಗೆ ತೊಡಿಸಲಾಗಿದ್ದಿತು.

ರೋಶನಾರಾಳ ವಿವಾಹದ ಅಂಗವಾಗಿ ಜುನಾಗಢ ಸಂಸ್ಥಾನದಾದ್ಯಂತ ಮೂರು ದಿನಗಳ ರಜೆಯನ್ನು ಘೋಷಿಸಲಾಯಿತು. ಸುಮಾರು ಐವತ್ತುಸಾವಿರ ಜನರಿಗೆ ಅದ್ದೂರಿಯ ಭೋಜನವನ್ನು ಏರ್ಪಡಿಸಲಾಯಿತು. ಭೋಜನದ ವೈಶಿಷ್ಟ್ಯವೆಂದರೆ, ನಗರದ ನಾಗರಿಕರಿಗೆಲ್ಲ ಬಗೆಬಗೆಯ ಭಕ್ಷ್ಯ ಭೋಜ್ಯಗಳನ್ನು ಟ್ರಕ್ಕುಗಳಲ್ಲಿ ತಂದು ಅವರವರ ಮನೆಗಳಿಗೆ ಪ್ರತಿ ದಿನ ಮೂರು ಸಲ ನೀಡಲಾಗುತ್ತಿದ್ದುದು. ಹೊರಗಿನಿಂದ ಬಂದ ಪ್ರತಿಷ್ಠಿತ ವ್ಯಕ್ತಿಗಳನ್ನು ರಂಜಿಸಲು ಬರೋಡಾ, ಮುಂಬೈ ಮತ್ತು ಇಂದೂರುಗಳಿಂದ ಪ್ರಸಿದ್ಧ ನರ್ತಕಿಯರನ್ನು ಕರೆಸಲಾಗಿದ್ದಿತು.

ವಿವಾಹದ ವಿಧಿಗಳನ್ನು ರಾಜಪುರೋಹಿತರು ಏಳುನೂರು ಆಸ್ಥಾನಿಕರು ಮತ್ತು ನೂರಾರು ಪ್ರತಿಷ್ಠಿತ ಅತಿಥಿಗಳ ಸಮ್ಮುಖದಲ್ಲಿ ನೆರವೇರಿಸಿದರು. ಅನೇಕ ಸಂಸ್ಥಾನಗಳ ರಾಜ ಮಹಾರಾಜರುಗಳು ವಿಶೇಷ ರೈಲುಗಳಲ್ಲಿ ಜುನಾಗಢಕ್ಕೆ ಆಗಮಿಸಿ ಶ್ವಾನವಿವಾಹದ ವೈಭವವನ್ನು ವೀಕ್ಷಿಸಿದರು. ವಿವಾಹ ವಿಧಿಗಳು ನೆರವೇರಿದ ನಂತರ ಔತಣಕೂಟವೊಂದನ್ನು ಏರ್ಪಡಿಸಲಾಗಿದ್ದಿತು. ಔತಣಕೂಟದಲ್ಲಿ ರೋಶನಾರಾಳಿಗೆ ಮುಖ್ಯ ಸ್ಥಾನ. ನವಾಬರ ಬಲಬದಿಗೆ ರೋಶನಾರಾ ಮಂಡಿಸಿದ್ದಳು. ಅವಳ ಪಕ್ಕದಲ್ಲಿ ಪತಿ ಬಾಬಿ. ನೂತನ ವಧೂ–



ವರೆಗೆ ಚಿನ್ನದ ತಂಬಾಣಗಳಲ್ಲಿ ವಿಶೇಷ ಭೋಜನವನ್ನು ಬಡಿಸಲಾಯಿತು. ಅನೇಕ ಪತ್ರಿಕೋದ್ಯಮಿಗಳು ವಿವಾಹ ಸಮಾರಂಭದ ಚಿತ್ರಗಳನ್ನು ತೆಗೆದುಕೊಂಡರು. ಅನಂತರ ಶ್ವಾನವಿವಾಹದ ಈ ಚಿತ್ರಗಳನ್ನು ದೇಶೀಯ ಮತ್ತು ವಿದೇಶೀಯ ಪತ್ರಿಕೆಗಳಲ್ಲಿ ಪ್ರಕಟಿಸಲಾಯಿತು. ಈ ವೈಭವಯುಕ್ತ ವಿವಾಹದ ಸವಿನೆನಪಿಗಾಗಿ ನವಾಬರು ತಮ್ಮ ನಾಯಿಯ ಪರಿವಾರಕ್ಕೆ ಮತ್ತೆ ನೂರು ನಾಯಿಗಳನ್ನು (ಇಪ್ಪತ್ತು ಗಂಡು, ಎಂಬತ್ತು ಹೆಣ್ಣು) ಸೇರಿಸುವುದಾಗಿ ಘೋಷಿಸಿದರು. ಇದರಿಂದ ಜುನಾಗಢದ ನವಾಬರ ನಾಯಿಯ ಪರಿವಾರದಲ್ಲಿ ನಾಯಿಗಳ ಸಂಖ್ಯೆ ಸಾವಿರಕ್ಕೂ ಮೀರಿತ್ತು.

ರೋಗಿನಾಯಿಗಳಿಗಾಗಿ ಹವಾ ನಿಯಂತ್ರಿತ ಕೋಣೆಯಲ್ಲಿ ಮಖಮಲ್ಲಿನ ಮೆತ್ತೆಯ ಪಲ್ಲಂಗವನ್ನು ಒದಗಿಸಲಾಗಿದ್ದಿತು. ಪ್ರತಿನಿತ್ಯ ವಿಶೇಷ ಭೋಜನವನ್ನು ಬಡಿಸಲಾಗುತ್ತಿದ್ದಿತು. ಹೀಗೆ ತನ್ನ ಅಂತ್ಯಕಾಲದ ವರೆಗೂ ರೋಶನಾರಾ ವಿಶೇಷ ಸ್ಥಾನಮಾನ ಮತ್ತು ಸವಲತ್ತುಗಳಿಂದ ರಾಜಕುಮಾರಿಯಂತೆ ಮೆರೆಯಿತು. ಪಾಪ ಅವಳ ಪತಿ ಬಾಬಿಯನ್ನು ಮದುವೆಯಾದ ಮರುದಿನವೇ ಇತರೆ ನಾಯಿಗಳಿದ್ದ ದೊಡ್ಡಿಗೆ ಅಟ್ಟಲಾಯಿತು.

ಜುನಾಗಢದ ಈ ಶ್ವಾನವಿವಾಹದ ನಂತರ, ಜಿಂದ್ ಸಂಸ್ಥಾನದ ಮಹಾರಾಜ ರಣಧೀರ ಸಿಂಗರು ಮತ್ತು ಪಾಟಿಯಾಲದ ಮಹಾರಾಜ ಭೂಪೇಂದ್ರಸಿಂಗರು ತಮ್ಮ ನಾಯಿಗಳ ಮದುವೆಯನ್ನು ವಿಜೃಂಭಣೆಯಿಂದ ನೆರವೇರಿಸಿದರು. ಅನಂತರ ನಾಯಿಯ ಮದುವೆಯನ್ನು ಆಡಂಬರದಿಂದ ಆಚರಿಸುವುದು ಹೆಚ್ಚಾಗಿ ಉತ್ತರ ಭಾರತದ ಸಂಸ್ಥಾನಿಕರುಗಳಲ್ಲಿ ಪ್ರತಿಷ್ಠೆಯ ಸಂಪ್ರದಾಯವಾಗಿಯೇ ಬೆಳೆಯಿತು. ✡

## ನೀನು — ನಾನು

ಹುಡುಗೀ  
ನೀ ಹಾಗೆ ಸ್ನಿಗ್ಧ ನಗೆ ಸೂಸಬೇಡ,  
ನನ್ನ ಮುಖ ವಿಕಾರವಾಗುತ್ತದೆ.  
ನೀ ಹಾಗೆ ನನ್ನ ಕಂಡು  
ಮೆತ್ತಗೆ ಧ್ವನಿಗೂಡಿಸಬೇಡ,  
ನಾನು ಮೂಕನಾಗಿಬಿಡುತ್ತೇನೆ.  
ನಿನ್ನ ಹೆಜ್ಜೆ ನನ್ನೆದುರು ಮೆತ್ತಗಾಗುವುದು ಬೇಡ.  
ನನ್ನ ಒರಟು ಹೆಜ್ಜೆಯಲ್ಲಿ ಕರಗಿ ಹೋದೀಯ.  
ಹುಡುಗೀ,  
ನಿನ್ನ ಕಂಡಾಗೆಲ್ಲ  
ನನ್ನ 'ಕಳೆದು ಹೋದವಳು' ನೆನಪಾಗುತ್ತಾಳೆ.  
ಅವಳು ನೀನಾಗುವುದು ನಿನಗೆ ಸಾಧ್ಯ, ನನಗೆ ಅಲ್ಲ.  
ಕನಸು ಕಟ್ಟುತ್ತ ನಿಂತಿರುವ ಮುಗ್ಧೆ ನೀನು.  
ಕೊಚ್ಚಿ ಹೋದ ನನ್ನ ಕನಸುಗಳೊಟ್ಟಿಗೇ  
ಮುಳುಗಿ ಹೋಗದೇ ಉಳಿದುಕೊಂಡವ ನಾನು.

– ಕನ್ನಿಕಾ ಹೆಗಡೆ

# ಪದಾರ್ಥ ಚಿಂತಾಮಣಿ

— ೧೫ —

**ದೇಶಾವರ**ದ ಪದ್ಧತಿ ಈಗ ಅಳಿಯುತ್ತಿದೆ. ಆದರೆ ನಮ್ಮ ಭಾಷೆಯಲ್ಲಿ ಅದು ಉಳಿದುಕೊಂಡಿದೆ. ಬಡ ಬ್ರಾಹ್ಮಣರು ಜೀವನೋಪಾಯಕ್ಕಾಗಿ ಊರೂರು ಸುತ್ತಿ ದಾತೃಗಳಿಂದ ಚಿಲ್ಲರೆ ಪಲ್ಲರೆ ವಂತಿಗೆ, ಸಹಾಯಧನ ಪಡೆಯುವುದು ದೇಶಾವರ. ಭಿಕ್ಷೆ ಬೇಡುವುದಕ್ಕಿಂತ ತುಸು ಹೆಚ್ಚು "ಮರ್ಯಾದೆ"ಯುಳ್ಳ ವೃತ್ತಿ ಇದು. ಯಜಮಾನರ ಮುಂದೆ ಮಾರುದ್ದ ಮೈಯನ್ನು ಗೇಣುದ್ದ ಮಾಡಿಕೊಂಡು ಹಲ್ಲು ಗಿಂಜುವುದು **ದೇಶಾವರಿ ನಗೆ.** ಎಲ್ಲ ದೀನ, ಸ್ವಾರ್ಥಪರ, ಕೃತಕ ನಗೆಗೆ ಆ ಹೆಸರು ಸಲ್ಲುತ್ತದೆ. ಆದರೆ **ದೇಶಾವರ** ಎಂದರೆ ಮೂಲತಃ ಏನು? ಅದು ನೋಡುವುದಕ್ಕೆ ಸಂಸ್ಕೃತದಂತೆ ಕಾಣುತ್ತದೆ. ವಾಸ್ತವಿಕವಾಗಿ ಹಾಗಿಲ್ಲ. ಬ್ರಹ್ಮಾವರ, ಮಾಯಾವರ ಇತ್ಯಾದಿಗಳಂತೆ ಅದು ಸ್ಥಳನಾಮವೂ ಅಲ್ಲ. ಅದು ಮರಾಠಿ ಶಬ್ದ. ಮಹಾರಾಷ್ಟ್ರದ ಕರಾವಳಿ ಜಿಲ್ಲೆಯಾದ ರತ್ನಾಗಿರಿ ಬಡ ಪ್ರದೇಶ, ಅಲ್ಲಿನ ಬ್ರಾಹ್ಮಣರು ಕಡುಬಡವರು. ಚರಿತಾರ್ಥ ಸಾಗಿಸುವುದಕ್ಕೆ ಅವರಿಗೆ ಸಹ್ಯಾದ್ರಿ ಶ್ರೇಣಿ ದಾಟಿ ಹೋಗಿ ಅಲ್ಲಿ ಅನುಕೂಲವಂತರಿಂದ ಹಿರುಪೆ ಎತ್ತಿ ತರುವುದು ಒಂದು ಮಾರ್ಗವಾಗಿತ್ತು. ಗಟ್ಟದ ಮೇಲಿನ ಪ್ರದೇಶವನ್ನು **ದೇಶ** ಎನ್ನುತ್ತಾರೆ. ಗಟ್ಟದ ಮೇಲೆ ಹೋಗುವುದಕ್ಕೆ ಅವರು **ದೇಶಾವರ ಜಾಣೇ** ( "ದೇಶದ ಮೇಲೆ" ಹೋಗುವುದು ) ಎಂದು ಮರಾಠಿ ನುಡಿಕಟ್ಟಿಗನುಸಾರವಾಗಿ ಹೇಳುತ್ತಿದ್ದರಂತೆ. ಅದೇ **ದೇಶಾವರ**ವಾಗಿ ಕರ್ನಾಟಕಕ್ಕೂ ದಾಟಿ ಭಾಷೆಯಲ್ಲಿ ಸೇರಿಹೋಗಿದೆ. ದೇಶಕ್ಕೆ ಪೇಶ್ವೆಗಳನ್ನು, ಲೋಕಮಾನ್ಯ ತಿಲಕರನ್ನು ಕೊಟ್ಟ ರತ್ನಾಗಿರಿಯೇ ದೈನ್ಯದ ಪರಮಾವಧಿಯನ್ನು ಸೂಚಿಸುವ ಈ ಪದವನ್ನೂ ಕೊಟ್ಟಿತು.

ಹಳೆ ಕನ್ನಡದಲ್ಲಿ ಇದಕ್ಕೆ ಸಂವಾದಿಯಾಗಿ **ದೇಸಿಗ** ಎಂಬ ಪದವುಂಟು. ಈಗ **ಪರದೇಶಿ**ಗಳೆಂಬ ಶಬ್ದದಿಂದ ನಾವು ನಿರ್ಗತಿಕ ಜನರನ್ನು ನಿರ್ದೇಶಿಸುವಂತೆ ಹಿಂದೆ **ದೇಸಿಗ** ಪದದಿಂದ ಸೂಚಿಸುತ್ತಿದ್ದರು. ಈ ಅರ್ಥದಲ್ಲಿ ದೇಸಿಗ ಶಬ್ದದ ಪ್ರಯೋಗ 'ವಡ್ಡಾರಾಧನೆ'ಯಷ್ಟು (ಕ್ರಿ. ಶ. ೯ನೇ ಶತಮಾನ) ಹಳೆಯದು. ಊರೂರು ತಿರುಗಿ ಹೊಟ್ಟೆ ಹೊರೆಯುವ **ದೇಸಿಗ**ನ ವಿಚಾರ 'ವಡ್ಡಾರಾಧನೆ'ಯಲ್ಲಿ ಬಂದಿದೆ. ಸ್ವಾರಸ್ಯವೆಂದರೆ **ದೇಸಿಗ**ದ ಮೂಲವಾದ **ದೇಶಿಕ** ಎಂಬ ಸಂಸ್ಕೃತ ಶಬ್ದಕ್ಕೆ ಈ ಕೀಳು ಅರ್ಥ ಇಲ್ಲ. ಮಹಾಗುರು, ತತ್ತ್ವೋಪದೇಶಕ, ಪಂಡಿತ ಎಂಬ ಹಿರಿಮೆಯ ಅರ್ಥಗಳು ಸಂಸ್ಕೃತ **ದೇಶಿಕ**ಕ್ಕೆ ಇವೆ. ವೇದಾಂತ **ದೇಶಿಕರು** ಮಹಾ ಶ್ರೀವೈಷ್ಣವ ತತ್ತ್ವಜ್ಞಾನಿಗಳು. ದೇಶ ಸಂಚಾರಿ ಎಂಬ ಇನ್ನೊಂದರ್ಥ ಅದಕ್ಕಿದ್ದರೂ ಯಾಚಕ ಎಂಬ ಅರ್ಥ ಸಂಸ್ಕೃತದಲ್ಲಿ ಅದಕ್ಕೆ ಇಲ್ಲ.

ಇನ್ನು ದೇಶ ಶಬ್ದದಿಂದಲೇ ಹೊರಟ ಕನ್ನಡದ **ದೇಸಿ, ದೇಸಿಕಾರ, ದೇಸಿಕಾರ್ತಿ** ಶಬ್ದಗಳಿಗೆ ಮೇಲಿನ ಎರಡಕ್ಕಿಂತಲೂ ಭಿನ್ನವಾದ ಅರ್ಥಗಳು ಮೊಳೆತುಕೊಂಡಿವೆ. **ದೇಸಿ** ಎಂದರೆ ಒಂದು ದೇಶಕ್ಕೇ ವಿಶೇಷವಾದ ಮಾತಿನ, ಸಂಸ್ಕೃತಿಯ ಬೆಡಗು, ಸೊಗಸು-ಪಂಪ ತನ್ನ ಕಾವ್ಯದ **ದೇಸೆ**ತನವನ್ನು ಹೇಳಿಕೊಳ್ಳುತ್ತಾನೆ. **ದೇಸಿಕಾರ, ದೇಸಿಕಾರ್ತಿ**ಯೆಂದರೆ ಬೆಡಗುಗಾರ, ಬೆಡಗುಗಾರ್ತಿ, ಒಟ್ಟಿನಲ್ಲಿ ಚೆಲುವ, ಚೆಲುವೆ.

ಶಬ್ದ ವ್ಯಾಪಾರದ ಗತಿ ನಿಜಕ್ಕೂ ಗಹನವಲ್ಲವೆ ?

—**ಪಾವೆಂ**

ಹಿಂದಿ ಮೂಲ :

**ಲಕ್ಷ್ಮೀಕಾಂತ ವೈಷ್ಣವ**

ಅನುವಾದ :

**ಡಿ. ಎನ್. ಶ್ರೀನಾಥ**

ಅವರಿಬ್ಬರೂ ಪೋರ್ಚ್‌ನಲ್ಲಿ ಕೂತು ಬೀಡಿ ಸೇದುತ್ತಿದ್ದರು. ಹೆಡ್ ಸಪ್ಲೈಯರ್ "ನೀವು ಬೀಡಿ ಸೇದಬ್ಯಾಡಿ. ಸ್ಟ್ಯಾಂಡರ್ಡ್ ಹೋಟೆಲ್ಲಿನ ಮಾಣಿಗಳು ಬೀಡಿ ಸೇದಬಾರ್ದು. ಹೀಗೆ ಬೀಡಿ ಸೇದಿದ್ರೆ ಮಾಣಿಗಳ ಸ್ಟ್ಯಾಂಡರ್ಡ್ ಜೊತೆಗೆ ಹೋಟೆಲ್ಲಿನ ಸ್ಟ್ಯಾಂಡರ್ಡ್ ಕೂಡ ಹಾಳಾಗುತ್ತೆ" ಅಂತ ಹೇಳಿದ್ದ. ಆದರೆ ತಮ್ಮ ಅಂತಸ್ತು ಮತ್ತು ಆರ್ಥಿಕ ಸ್ಥಿತಿಯ ಜೊತೆಗೆ ಅವರಿಗೆ ಬೀಡಿ ಸೇದುವ ಚಟ ಅಂಟಿಕೊಂಡುಬಿಟ್ಟಿತ್ತು. ಬೀಡಿ ಇಬ್ಬರಿಗೂ ಹಳೆ ನೆನಪು ತರುವ ಔಷಧಿಯಾಗಿತ್ತು. ಈ ಔಷಧಿಯಿಂದ ಏಕದಮ್ ಬಿಡುಗಡೆಯಾಗಲೂ ಅವರಿಗಿಷ್ಟವಿರಲಿಲ್ಲ. ಹೊಸ ಗಿರಾಕಿಗಳ ಕಾರು ಹೋಟೆಲ್ಲಿನ ಕಾಂಪೌಂಡಿನೊಳಗೆ ಬರುವುದು ಕಾಣಿಸದಿದ್ದಾಗ ಅಥವಾ ಹೋಟೆಲ್ ಒಳಗಿಂದ ಹೊರಬರುವ ಗಿರಾಕಿಗಳ ಕಾಲು ಸಪ್ಪಳ ಕೇಳಿಸದಿದ್ದಾಗ ಅವರು ಪೋರ್ಚ್‌ನ ಮೆಟ್ಟಲಲ್ಲಿ ಕೂತು ಮೆಲ್ಲನೆ ಬೀಡಿ ಹೊರ ತೆಗೆದು ಸೇದುತ್ತಿದ್ದರು.

ಆಕಾಶ ಸ್ವಚ್ಛವಾಗಿತ್ತು. ಇದೇ ಸ್ವಲ್ಪ ಹೊತ್ತಿನ ಹಿಂದೆ ಮಳೆ ಬಂದಿತ್ತು. ಹೋಟೆಲ್ಲಿನ ಲಾನ್‌ನಲ್ಲಿ ಇನ್ನೂ ತೇವವಿತ್ತು. ಎದುರಿಗಿದ್ದ ಯೂಕಲಿಪ್ಟಸ್ ಮರಗಳ ಎಲೆಗಳಿಂದ ನೀರು ಹನಿ–ಹನಿಯಾಗಿ ಬೀಳುತ್ತಿತ್ತು. ನಸುಕಿನಲ್ಲಿ ಹೋಟೆಲ್ಲಿನ ಬಿಲ್ಡಿಂಗ್ ಮೇಲೆ ಹಾಕಿದ ನಿಯಾನ್ ಸೈನ್ ಬೋರ್ಡ್– "ಹೋಟೆಲ್ ಸ್ಯಾಟರ್ನ್," ನೀಲಿ ಕೆಂಪು ಬಣ್ಣದಲ್ಲಿ ಹೊಳೆಯುತ್ತಿತ್ತು. ಬದ್ರಿಲಾಲ ಮಾಣಿ ಸ್ಯಾಟರ್ನ್‌ನ ಅರ್ಥವೇನೆಂದು ಹೆಡ್ ಸಪ್ಲೈಯರನ್ನು ಕೇಳಿದ್ದ. "ನೀವಿಬ್ಬರೂ ಸಂಜೆಯ ಇಂಗ್ಲೀಷ್ ಕ್ಲಾಸಿಗೆ ಸೇರ್ಕೊಳ್ಳಿ, ಸಪ್ಲೈಯರ್‌ಗೆ ಇಂಗ್ಲೀಷ್ ತಿಳಿದಿರಬೇಕಾಗುತ್ತೆ, ಇಲ್ಲದಿದ್ರೆ ನಿಮಗೆ 'ಟಿಪ್' ಸಿಗೋಲ್ಲ. ಕಡೆಗೆ ಮುಂದೆ ಹೋಟೆಲ್ಲಿಗೆ ಗಿರಾಕಿಗಳೂ ಸಿಗೋಲ್ಲ. ಸ್ಟ್ಯಾಂಡರ್ಡ್–ಹೋಟೆಲ್ಲಿಂದೋ ಅಥವಾ ಸಪ್ಲೈಯರ್‌ದ್ದೋ–ಎಲ್ಲಾ ಇಂಗ್ಲೀಷ್ ಭಾಷೆಯಿಂದಲೇ ಸಾಧ್ಯ" ಎಂದು ಹೆಡ್ ಸಪ್ಲೈಯರ್ ಹೇಳಿದ್ದ. ಇಬ್ಬರೂ ಇಂಗ್ಲೀಷ್ ಕ್ಲಾಸಿಗೆ ಸೇರಿ ಕೊಂಡಿದ್ದರು. ಅಲ್ಲಿ, ಇಂಗ್ಲೀಷ್ ಮೇಸ್ಟ್ರು, "ವಿದ್ಯಾರ್ಥಿಗಳೇ ಯಾವುದೇ ಸ್ಟ್ಯಾಂಡರ್ಡ್ ಇಂಗ್ಲೀಷಿನಿಂದ ಮಾತ್ರವೇ ಸಾಧ್ಯ. ನಿಮಗೀಗ ಸರಿ ಕಾಣಿಸದಿರಬಹುದು. ಆದ್ರೆ, ಮುಂದೆ ನಿಮಗೇ, ಜೀವನದಲ್ಲಿ ಇಂಗ್ಲೀಷ್ ಬಿಟ್ರೆ, ಬೇರೆ ಯಾವ ಭಾಷೆಯೂ ಭಾಷೆಯೇ ಅಲ್ಲ ಅಂತ ರಿಯಲೈಸ್ ಆಗುತ್ತೆ. ವ್ಯಕ್ತಿ ಮಂತ್ರಿಯಾಗಿರಲಿ ಅಥವಾ ಅಧಿಕಾರಿಯಾಗಿರಲಿ, ಜಡ್ಜ್ ಆಗಿರಲಿ ಅಥವಾ ಡಾಕ್ಟರ್ ಆಗಿರಲಿ, ವಕೀಲನಾಗಿರಲಿ ಅಥವಾ ಅಧ್ಯಾಪಕನಾಗಿರಲಿ, ಇಂಗ್ಲೀಷ್ ಮಾತ್ರ ತಿಳಿಯಬಲ್ಲ. ಇಂಗ್ಲೀಷ್ ಯಶಸ್ಸಿಗೆ ಬೀಗದ ಕೈ ಇದ್ದಂತೆ. ಇದನ್ನು ತಿಳಿಯದಿದ್ದರೆ ನೀವು ಯಾವುದಕ್ಕೂ ಬರೋಲ್ಲ" ಅಂದಿದ್ದರು. ಅಲ್ಲದೆ "ಇಂಗ್ಲೀಷ್ ತಿಳಿಯದಿದ್ರೆ ನೀವು ಸಪ್ಲೈಯರ್ ಆಗೂ ಇರಲ್ಲ" ಎಂದು ಹೆಡ್ ಸಪ್ಲೆಯರ್ ಹೇಳಿದ್ದ. ಅವರಿಬ್ಬರ ಜೀವನದ ಗುರಿ ಮಾಣಿಗಳಾಗಬೇಕೆಂದೇನೂ ಇರಲಿಲ್ಲ. ಆದರೂ ಪ್ರಸ್ತುತ ಮಾಣಿಯಾಗಿರಲೇಬೇಕಿತ್ತು.

ಆರು ತಿಂಗಳು ಇಂಗ್ಲೀಷ್ ಕ್ಲಾಸಿನಲ್ಲಿ ಇಂಗ್ಲೀಷ್ ಕಲಿತಾದ ಮೇಲೆ ಬದ್ರಿಲಾಲ ಮತ್ತು ಚುನ್ನಿಲಾಲರಿಬ್ಬರೂ ಹೋಟೆಲ್ ಸ್ಯಾಟರ್ನ್‌ನ ಅರ್ಥ ತಿಳಿಯಲಾರಂಭಿಸಿದ್ದರು. ಆರು ತಿಂಗಳು ಕೆಲಸ ಮಾಡಿದ ಮೇಲೆ ಹೋಟೆಲ್ ಸ್ಯಾಟರ್ನ್‌ನ ವಾಸ್ತವಿಕ ಅರ್ಥವೂ ಅವರಿಗೆ ತಿಳಿದಿತ್ತು. ಒಂದು ಸಾರಿ ಒಬ್ಬ ಜ್ಯೋತಿಷಿ ಬದ್ರಿಲಾಲನಿಗೆ "ಸ್ಯಾಟರ್ನ್, ನಿನ್ನ ಕುಂಡಲಿಯಲ್ಲಿ ಸಾಕಷ್ಟು ಜೋರಾಗಿದೆ. ಅದು ನಿನ್ನ ಜೀವನದಲ್ಲಿ ತನ್ನ ಪ್ರಭಾವ ತೋರ್ಸತ್ತೆ" ಅಂದಿದ್ದ. ಚುನ್ನಿಲಾಲನೂ "ನನಗೆ ಸಾಡೆ ಸಾತಿ ನಡೀತಿದೆ. ಯಾವತ್ತು ಈ ಸಾಡೆ ಸಾತಿ ಹತ್ತಿತ್ತೋ ಅಂದಿನಿಂದಲೇ ನಾನು ಹೋಟೆಲ್ಲಿನ ಮಾಣಿ ಆದೆ" ಅಂದಿದ್ದ. "ಶನಿ ಬರುವಾಗ, ಬರುವಾಗಲೇ ಒಳ್ಳೆ ಜಾಗಕ್ಕೆ ಬಿಸಾಕ್ತಾನೆ ಅಥವಾ ಹೋಗುವಾಗ ಒಳ್ಳೆ ಜಾಗಕ್ಕೆ

ಏನೇನು ಹೋಗ್ತಾನೆ ಅಂತಾರೆ. ನೀನು ಒಳ್ಳೆ ಜಾಗಕ್ಕೆ ಬಂದೆ ಅಂತ ನಿನಗನ್ನಿಸುತ್ತಿದೆಯೇ?" ಎಂದು ಬದ್ರಿಲಾಲ ಕೇಳಿದಾಗ "ನಾನೇನು ಹೇಳಲಾರೆ" ಅಂತ ಚುನ್ನಿಲಾಲ ಹೇಳಿದ್ದ. "ಆದ್ರೆ, ಇಲ್ಲೇನು ನೋಡೋದಕ್ಕೆ ಸಿಗುತ್ತೆ ಅವು ನನಗೆ ಜೀವನದಲ್ಲಿ ಬಹುಶಃ ಬೇರೆಲ್ಲೂ ಸಿಗೋಲ್ಲ ಅನ್ನೋದಂತೂ ನಿಜ. ಇಷ್ಟೊಂದು ಚೆಂದದ ಹುಡುಗಿಯರು ಇಷ್ಟು ಹತ್ತಿರದಿಂದ ಹಾಯ್ದು ಹೋಗೋದು ಬೇರೆ ಕಡೆ ಕಷ್ಟ. ಶ್ರೀಮಂತರ ಹೆಂಡತಿಯರು, ಹುಡುಗಿಯರು, ನನ್ನ ಹತ್ರ ಮಾತಾಡ್ತಾರೆ, ನನ್ನಿಂದ ತಿನ್ನೋ ವಸ್ತು ತರಿಸ್ತಾರೆ, ನೀರು ತರಿಸ್ತಾರೆ. ಹಾಗೆ ಅವರು ನೀರು ಇಸ್ಕೊಳ್ಳೋವಾಗ ನಾನು ಅವರ ಬಿಳಿ ಮೃದು ಬೆರಳನ್ನು ಮುಟ್ಟಿದರೂ ಅವರೇನೂ ತಿಳಿಯೋದಿಲ್ಲ. ಒಂದು ಸಲ ಒಬ್ಬ ಷೋಡಶಿ ತನ್ನ ಸ್ಕರ್ಟ್ ಮೇಲೆ ಸೂಪ್ ಚೆಲ್ಲಿ ಕೊಂಡ್ಳು. ಸೂಪ್ ಬಿಸಿಯಾಗಿತ್ತು. ಅವಳು 'ಅಯ್ಯೋ' ಎಂದು ಚೀರಿದಳು–ಥಟ್ಟೆ ಅಂಗಡಿ ಸೈರನ್ ಕಿರುಚಿದಂತೆ. ಅವಳ ಜೊತೆಗೆ ಬಂದಿದ್ದ ಡ್ಯಾಡಿ–ಮಮ್ಮಿಯೂ ಹೆದರಿದರು. ನಾನೂ ಹೆದರಿದೆ. ಓಡಿ, ಜಗ್‌ನಲ್ಲಿ ನೀರು ತಂದೆ. ಅವಳ ಸ್ಕರ್ಟ್ ಮೇಲೆ ನೀರು ಹಾಕಿ ಮೆಲ್ಲನೆ ನ್ಯಾಪ್‌ಕಿನ್ ಹಿಡಿದು ಉಜ್ಜಿ–ಉಜ್ಜಿ ಸೂಪ್ ತೊಳೆದೆ. ನಿನ್ನಾಣೆಗೂ, ಅವಳಿಗೆ ಹದಿನಾರೇ ವರ್ಷವಾಗಿತ್ತು. ಹಾಲಿನ ಮುಂದ ಬೆಳಕಲ್ಲಿ ಅವಳ ಬಿಳಿ ಬಣ್ಣ ಇನ್ನೂ ಹೊಳೀತಿತ್ತು. ಅವಳು ಬರೀ ಸ್ಕರ್ಟ್ ಮಾತ್ರ ಹಾಕಿದ್ದಳು. ಅವಳ ಆ ಉದ್ದನೆಯ ಕಾಲುಗಳು! ಸ್ಕರ್ಟ್ ಉಜ್ಜಾತ ಉಜ್ಜಾತ ನಾನು ನನಗೇ ತಿಳಿಯದಂತೆ, ಅವಳ ಮೊಣಕಾಲನ್ನ ಮೆಲ್ಲನೆ ಒತ್ತಿದ್ದೆ, ಅವಳಮ್ಮನೂ ಗಮನಿಸಲಿಲ್ಲ, ಅವಳೂ ಗಮನಿಸಲಿಲ್ಲ."

"ಯ್ಯಾರ‍್ಯಾಕೆ ಗಮನಿಸ್ತಾರೆ? ನೀನ್ಯಾರು?"

"ಯಾಕೆ, ನಾನೇನು ಮನುಷ್ಯ ಅಲ್ವ? ಗಂಡಸು ಹೆಂಗಸರನ್ನ ಮುಟ್ಟಿದ್ರೆ ಕರೆಂಟ್ ಹೊಡೆದಂತಾಗುತ್ತಂತೆ."

"ಅಯ್ಯೋ, ಥೂ ನಿನ್ನ, ವ್ಯಕ್ತಿವ್ಯಕ್ತಿಗೂ ವ್ಯತ್ಯಾಸವಿದೆ. ನೀನು ನೋಡಿದ್ರೆ ಹೋಟೆಲ್ ಮಾಣಿ. ನಿನ್ನ ಕೈ ತಾಗಿದ್ರೆ ಏನಾಗುತ್ತೆ? ನನಗೆ–ನಿನ್ನಂತಹವರಿಗೆ ಅವರೆಲ್ಲಾ 'ನಾನ್-ಪರ್ಸನ್' ಅಂತ ತಿಳೀತಾರೆ. ಆಟಕ್ಕಿದ್ದರೂ ಲೆಕ್ಕಕಿಲ್ಲ ಅನ್ನೋ ರೀತಿ! ಮನುಷ್ಯರಾಗಿದ್ದೂ ಮನುಷ್ಯರಲ್ಲ."

"ಈ 'ನಾನ್‌ಪರ್ಸನ್' ಅಂದ್ರೇನು?" ಚುನ್ನೀಲಾಲ ಕೇಳಿದ್ದ.

"ಥೂ ನಿನ್ನ, ಮರೆತುಬಿಟ್ಟೆ. ಇಂಗ್ಲೀಷ್ ಕ್ಲಾಸಿನಾಗೆ ಮೇಸ್ಟ್ರು ಹೇಳಿರಲಿಲ್ವ, ಸಣ್ಣ ಮನುಷ್ಯ ನಾನ್–ಪರ್ಸನ್ ಆಗ್ತಾನೆ ಅಥವಾ ಮಹತ್ವಹೀನ ವ್ಯಕ್ತಿ ನಾನ್–ಪರ್ಸನ್ ಆಗ್ತಾನೆ. ನಡುಪೇಟೇಲಿ ಪ್ರೇಮಿಗಳು ಕೈಯಲ್ಲಿ ಕೈಹಾಕಿ ಹೋಗುತ್ತಿರುವಾಗ ಅಕ್ಕಪಕ್ಕದವರು ನೋಡಿದರೂ ಅವರನ್ನು ನೋಡದಂತೆ ಹೋಗೋದು..."

"ಅಂದ್ರೆ, ಮನಸ್ಸಿಗೆ ಬಂದಂಗೆ ಮಾಡ್ಕೊಂಡು ಹೋಗಿ ತಮ್ಮನ್ನು ನೋಡುವವರು 'ನತಿಂಗ್' ಎಂದು ಉಪೇಕ್ಷೆ ಮಾಡುವುದು?"

"ಹೌದು, ಖಂಡಿತ."

"ಹಾಗಾದ್ರೆ, ರಾಜಕೀಯ ವ್ಯಕ್ತಿಗಳ ದೃಷ್ಟಿಯಲ್ಲಿ ಸಾಧಾರಣ ಜನತೆ 'ನಾನ್–ಪರ್ಸನ್' ಅದ್ರು."

"ನೋಡು, ನಿನ್ನ ಈ ಅಭ್ಯಾಸ ನನಗೆ ಸರಿ ಕಾಣೆಸೋದಿಲ್ಲ, ನೀನು ಯಾವಾಗ್ಲೂ ಮಧ್ಯೆ ರಾಜಕೀಯ ತರ‍್ತೀಯಾ" ಅಂದ ಬದ್ರಿಲಾಲ.

"ನಾನು ಒಂಭತ್ತನೇ ಕ್ಲಾಸಿನವರೆಗೂ ಓದಿದ್ದೀನಿ. ಒಂದ್ ಸಾರಿ ನನ್ನ ಕ್ಲಾಸಿನ ಪ್ರತಿನಿಧಿ ಸ್ಪರ್ಧೆಗೆ ನಿಂತು ಸೋತಿದ್ದೆ. ಆಗ್ಲಿಂದ ರಾಜಕೀಯ 'ಗ್ರಂಥಿ' ಹಾಗೆ ನನ್ನ ಮೆದುಳಲ್ಲಿ ಹೊಕ್ಕಿಬಿಟ್ಟಿದೆ" ಅಂದ ಚುನ್ನಿಲಾಲ.

"ಈ ಗ್ರಂಥಿ ಅಂದ್ರೆ ಏನು?" ಬದ್ರಿಲಾಲ ಕೇಳಿದಾಗ ಚುನ್ನಿಲಾಲ, "ನೀನು ಮರೆತುಬಿಟ್ಟೆ. ಇಂಗ್ಲೀಷ್ ಮಾಸ್ಟ್ರು ಹೇಳಿರಲಿಲ್ವ. ಕೆಲವು ಗ್ರಂಥಿಗಳಿರುತ್ತವೆ ಅಂತ. ಇವು ಮನುಷ್ಯನ ಮೆದುಳೇ ಆಗಿಬಿಡುತ್ತವೆ ! ಉದಾಹರಣೆಗೆ ನಮ್ಮ ಮನಸ್ನಲ್ಲಿ 'ನಾವು ಕೇವಲ ಮಾಣಿಗಳು, ಮಾಣಿಗಳಾಗದೇ ನಮ್ಮಿಂದ ಇನ್ನೇನೂ ಸಾಧ್ಯವಿಲ್ಲ' ಎಂಬ ವಿಚಾರ ಹೊಕ್ಕಿಕೊಳ್ಳುವುದು."

"ಅದು ಗ್ರಂಥಿ ಅಲ್ಲ. ನಮಗೆ ಪರಿಸ್ಥಿತಿ ಹೀಗೆ ಮಾಡಿದೆ. ನೋಡು, ನಾನು ನಾರ್ಮಲ್ ಸ್ಕೂಲಿನ ಉಪಾಧ್ಯಾಯರ ಟ್ರೈನಿಂಗ್ ಸಹ ಮಾಡಿದ್ದೀನಿ. ವಿದ್ಯಾರ್ಥಿಗಳಿಗೆ ಜ್ಞಾನ ಹಂಚಬೇಕು ಅಂತ

ಯೋಚ್ನೆ ಮಾಡಿದ್ದೆ. ಇಲ್ಲಿ ಇಡ್ಲಿ, ದೋಸೆ ಸಾಲಡ್, ಚಿಕನ್ ಮತ್ತು ನೀರು ಹಂಚ್ತಿದೀನಿ."

"ಸರಿ, ಈ ಪರಿಸ್ಥಿತಿಯೇ ಮುಂದುವರಿದು 'ಗ್ರಂಥಿ'ಯಾಗಿ ಬಿಡುತ್ತೆ. ನೀನು ಬದ್ರಿಲಾಲ ಮೇಸ್ಟ್ರಾಗಬಹುದಿತ್ತು. ಆದ್ರೆ 'ಬದ್ರಿಲಾಲ ಮಾಣಿ'ಯಾದೆ. ಕ್ರಮೇಣ ಈ ಬದ್ರಿಲಾಲ ಮಾಣಿ ಬದ್ರಿಲಾಲ ಮೇಸ್ಟ್ರನ್ನ ಮರೆತು ಬಿಡ್ತಾನೆ. ಬದ್ರಿಲಾಲ್ ಮಾಸ್ಟರ್ ಬದ್ರೀಲಾಲ ಮಾಣಿಯೊಂದಿಗೆ ಒಪ್ಪಂದ ಮಾಡಿಕೊಳ್ತಾನೆ. ನಾನು ಬದ್ರಿಲಾಲ ಮಾಣಿಯೆಷ್ಟೇ ಹೊರತು ಬೇರೇನೂ ಆಗಲು ಸಾಧ್ಯವಿರಲಿಲ್ಲ ಅಂತ ಕಡೆಗೆ ನಿನಗನ್ನಿಸುತ್ತೆ. ಒಂದು ವೇಳೆ ಅವಕಾಶ ಸಿಕ್ಕರೆ ನೀನು ಹೆಡ್ ಸಪ್ಲೈಯರ್ ಆಗಬಹುದು ಆದ್ರೆ ನೀನು ಹೆಡ್‌ಮಾಸ್ಟರ್ ಸಹ ಆಗಬಹುದಿತ್ತೆಂದು ನಿನಗೆ ನೆನಪೂ ಬರಲ್ಲ."

ಈಗ ಬದ್ರಿಲಾಲ ತನ್ನೊಳಗೆ ಅಂತಹ ಗ್ರಂಥಿ ಇದೆ ಅನ್ನೋದನ್ನ ನಂಬೋದಕ್ಕೆ ಸುತಾರಾಂ ಸಿದ್ಧನಿರಲಿಲ್ಲ. ಪ್ರೈವೇಟಾಗಿ ಇಂಟರ್, ಬಿ. ಎ., ಎಂ.ಎ.. ಇತ್ಯಾದಿಗಳನ್ನು ಮಾಡಿಕೊಂಡು ಇಲ್ಲಿಂದ ಕಾಲು ಕೀಳ್ತೀನಿ ಎಂಬ ಭರವಸೆ ಅವನಿಗಿನ್ನೂ ಇತ್ತು.

'ಸ್ಯಾಟರ್ನ್ ನಿನ್ನ ಕುಂಡಲಿಯಲ್ಲಿ ಪ್ರಬಲವಾಗಿದೆ, ತಡವಾದರೂ ನಿನಗೆ ಯಶಸ್ಸು ಸಿಗುತ್ತೆ, ನೀನು ನಿನ್ನದೇ ಕಾರಿನಲ್ಲಿ ತಿರುಗ್ತೀಯ' ಎಂದು ಜ್ಯೋತಿಷಿಯೂ ಅವನಿಗೆ ಹೇಳಿದ್ದ. ಆಗಿನಿಂದಲೇ ಅವನು ಹೋಟೆಲ್ಲಿಗೆ ಬಂದು ಹೋಗುವ ಗಿರಾಕಿಗಳ ವಾಹನದೆಡೆಗೆ ಬಯಕೆ ತುಂಬಿದ ದೃಷ್ಟಿಯಿಂದ ನೋಡುತ್ತಿದ್ದ. ಅವರು ಹೇಗೆ ಸ್ಟಿಯರಿಂಗ್ ತಿರುಗಿಸ್ತಾರೆ, ಹೇಗೆ ಗೇರು ಬದಲಾಯಿಸ್ತಾರೆ ಅನ್ನೋವನ್ನ ಗಮನಿಸುತ್ತಿದ್ದ. ಕಿಟಕಿಯಿಂದ ಅವನಿಗಿಷ್ಟೇ ಕಾಣಿಸುತ್ತಿತ್ತು. ಉಳಿದ ಎಕ್ಸಲ್ರೇಟರ್ ಮತ್ತು ಬ್ರೇಕನ್ನು ಕಿಟಕಿಯಿಂದಲೇ ಇಣುಕಿ ನೋಡಿಕೊಂಡಿದ್ದಂತೂ ನಿಜ. ಆದರೆ, ಅವುಗಳ ಮೇಲೆ ಕಾಲು ಹೇಗೆ ಚಲಿಸುತ್ತೆ ಅನ್ನೋದು ಅವನಿಗೆ ಗೊತ್ತಿರಲಿಲ್ಲ. ಕಿಟಕಿಯಿಂದ ಕಾಣುವುದರ ಬಗ್ಗೆ ನೀವು ತಿಳಿಯಬಹುದು. ಆದರೆ ಇನ್ನೂ ಮರೆಯಾಗಿರುವ ವಿಷಯಗಳನ್ನು ತಿಳಿಯಲು ಹೇಗೆ ಸಾಧ್ಯ? ಹೋಟೆಲ್‌ನಲ್ಲಿ ಹಾಲ್‌ನಲ್ಲಿ ಕೂತು ಕುಡಿಯು–ತಿನ್ನುವವರನ್ನು ನೀವು ನೋಡಬಹುದು. ಆದರೆ ಒಳಗೆ ಮುಚ್ಚಿದ ಕ್ಯಾಬಿನ್ನಲ್ಲಿ ಕೂತಿರುವವರು ಏನು ತಿನ್ತಿದ್ದಾರೆ.ಹೇಗೆ ತಿನ್ತಿದ್ದಾರೆ. ಅವರ ಕೈ ಹ್ಯಾಗೆ ಸಾಗುತ್ತಿದೆ. ಕಾಲು ಹೇಗೆ ಕುಣೀತಿದೆ ಅನ್ನೋದು ನಿಮಗೆ ಹೊರಗಿಂದ ಹೇಗೆ ಕಾಣಿಸುತ್ತೆ?

ಬದ್ರಿಲಾಲ ಹೊಸಬ, ಚುನ್ನಿಲಾಲನೂ ಹೊಸಬ. ಅಲ್ಲದೆ ಇವರಿಬ್ಬರ ಡ್ಯೂಟಿ ಪೋರ್ಚ್‌ನಲ್ಲಿ ಜನರನ್ನು ಸ್ವಾಗತಿಸುವುದೋ ಅಥವಾ ಮುಖ್ಯ ಹಾಲಿನಲ್ಲಿರುವುದೋ ಆಗಿತ್ತು. ಪ್ರೈವೇಟ್ ಕ್ಯಾಬಿನ್ನಿಗೆ ಹಳೆಗಿನ ಮಾಣಿಗಳಿಗೆ ಮಾತ್ರ ಪ್ರವೇಶವಿತ್ತು. ಅದೂ, ಮುಖದ ಮೇಲೆ ಸ್ಥಿತಪ್ರಜ್ಞತೆ ಇದ್ದು, ವಸ್ತುಸ್ಥಿತಿಯನ್ನು ನೋಡಿಯೂ ನೋಡದಂತಹ ಭಾವನೆ ತಾಳುವ ಅಭ್ಯಾಸವಿರುವ ಮಾಣಿಗಳಿಗೆ ಮಾತ್ರ ಅಲ್ಲಿ ಪ್ರವೇಶ. ಅಂದಿನ ಘಟನೆ ಬದ್ರಿಲಾಲನಿಗೆ ಇನ್ನೂ ನೆನ




"ಈ ಪ್ರಶ್ನೆ ಮಾತ್ರ ನನ್ನ ಕೈಲಾಗೋಲ್ಲ, ಬೆಳಗ್ಗೆ ಬರೆದಿದ್ದು ಆಗಲೇ ಬದಲಾಗಿಬಿಟ್ಟಿದೆ."

ಹಿದೆ... ಒಂದು ಸಾರಿ, ಆರನೇ ನಂಬರ್ ಕ್ಯಾಬಿನ್ನಿನ ಮಾಣಿ ರಜದ ಮೇಲೆ ಹೋಗಿದ್ದ. ಅವನ ಜಾಗಕ್ಕೆ ಹೊಸಬನನ್ನು ನಿಯುಕ್ತಗೊಳಿಸಲಾಗಿತ್ತು. ಒಂದು ಹೊಸ ಜೋಡಿ ಕ್ಯಾಬಿನ್ನಿನೊಳಗೆ ಕೂತು ತಿನ್ನುತ್ತಿತ್ತು. ಆ ಹೊಸ ಮಾಣಿ ಒಳಗಿಂದ ಚಿಕನ್ನಿನ ಖಾಲಿ ಪ್ಲೇಟ್ ಎತ್ತಿಕೊಂಡು ಬರುವಾಗ ಒಂದು ರೀತಿಯಲ್ಲಿ ನಕ್ಕು ಬದ್ರಿಲಾಲನ ಕಡೆಗೆ ನೋಡಿ ಕಣ್ಣು ಹೊಡೆದಿದ್ದ. ಮುಖ್ಯ ಹಾಲಿನಲ್ಲಿದ್ದ ಗಿರಾಕಿಗಳ ದೃಷ್ಟಿ ಅವನ ಮೇಲೆ ಬಿತ್ತು. ಹೆಡ್ ಸಪ್ಲೈಯರ್ ಸಹ ನೋಡಿಬಿಟ್ಟಿದ್ದ. ಅದಾದ ಮಾರನೇ ದಿನವೇ ಆ ಮಾಣಿ ರಸ್ತೆ ಚೌಕದಲ್ಲಿ ಭೇಲ್ ಪೂರಿಯ, ತಟ್ಟೆ ಮತ್ತು ಲೋಟ ತೊಳೀತಿದ್ದ. ಅವನ ಡ್ರೆಸ್‌ಗಳನ್ನೆಲ್ಲಾ ಹೋಟೆಲ್‌ನಲ್ಲೇ ಕಳಚಿಕೊಂಡಾಗಿತ್ತು. ಹರಿದ ಕೊಳಕು ಬನಿಯನ್ ಮತ್ತು ನಿಕ್ಕರ್‌ನಲ್ಲಿ ಅವನನ್ನು ತುಂಬಾ ಕಷ್ಟದಿಂದ ಗುರುತಿಸಬೇಕಾಗಿತ್ತು. ಬದ್ರಿಲಾಲನಿಗೂ ಅವನ ಗುರುತು ಸಿಗಲಿಲ್ಲ. ಬದ್ರಿಲಾಲ ಅವತ್ತು ಹಾಗೇ ಅಡ್ಡಾಡಿಕೊಂಡು ಬರುತ್ತಿರುವಾಗ ಆ ಮಾಣಿಯೇ ನಾಚಿಕೊಂಡು ಮುಖ ತಿರುಗಿಸಿಕೊಂಡ. ಕಡೆಗೆ ಅವನೇ ಮಾತಾಡಿಸಿ, "ನೋಡು, ಬದ್ರಿ, ವಾಸ್ತವಿಕತೆಯನ್ನು ನೋಡಿ, ಅದನ್ನು ಹಾವಭಾವದಿಂದಲೂ ಪ್ರತಿಕ್ರಿಯೆ ವ್ಯಕ್ತಪಡಿಸೋದರಿಂದ ಎಷ್ಟು ಕಷ್ಟವಾಗುತ್ತೆ. ಒಂದು ವೇಳೆ ನಾನು ಅಂದು ಸ್ಥಿತಪ್ರಜ್ಞನಾಗಿಯೇ ಇದ್ದಿದ್ದರೆ ಆ ಕೆಲಸ ಹೋಗ್ತಿರಲಿಲ್ಲ" ಅಂದಿದ್ದ.

ಅಂದು ಬದ್ರಿಲಾಲನಿಗೆ ಕೆಲಸ, ಅದು ಮಾಣಿ ಕೆಲಸವೇ ಆಗಿರಲಿ, ಎಷ್ಟೊಂದು ಮಹತ್ವವುಳ್ಳದ್ದು ಎನ್ನುವುದು ಗೊತ್ತಾಗಿತ್ತು. 'ಬಟ್ಟೆ ತೊಟ್ಟ ಮತ್ತು ಬಟ್ಟೆ ಕಳಚಿದ ಮನುಷ್ಯನಲ್ಲಿ ಎಷ್ಟೊಂದು ವ್ಯತ್ಯಾಸವಿದೆ. ಸ್ವಲ್ಪ ಅಸಡ್ಡೆ ಮಾಡಿದರೂ, ಅದರಲ್ಲಿ ನಮ್ಮದೇನೂ ದೊಡ್ಡ ತಪ್ಪಿಲ್ಲದಿದ್ದರೂ, ಅಥವಾ ನಮಗೇ ತಿಳಿಯದಂತೆ ನಡೆದರೂ ಅದು ನಮ್ಮನ್ನು ನಮ್ಮ ವಾಸ್ತವಿಕ ಸ್ಥಾನದಿಂದ ಎಷ್ಟೊಂದು ಕೆಳಗೆ ತಳ್ಳಿಬಿಡುತ್ತದೆ.'

"ಏನ್ ವಿಷಯ? ಏನ್ ಯೋಚ್ನೆ ಮಾಡ್ತಿದ್ದೀಯಲ್ಲ" ಚುನ್ನಿಲಾಲ ಕೇಳಿದ. ಇದರಿಂದ ಬದ್ರಿಲಾಲನ ಯೋಚನೆಗೆ ಭಂಗವಾಯಿತು. "ನಿನ್ನ ಅಫೀಮು ಕುಡಿವಂತಹ ಈ ಅಭ್ಯಾಸ ನನಗಿಷ್ಟವಿಲ್ಲ", ಚುನ್ನಿಲಾಲ ಹೇಳಿದ, "ಅಲ್ಲಿ, ನೀನವತ್ತು ಮೂರನೇ ಟೇಬಲ್‌ನ ಹತ್ರ ನಿಂತು ಯೋಚ್ನೆ ಮಾಡ್ತಿದ್ದೆಯಲ್ಲ."

"ಮೂರನೇ ಟೇಬಲ್? ಯಾವಾಗ?"

"ಈಗ ನನ್ನ ಹತ್ರ ಆಟ ಆಡಬ್ಯಾಡ. ಹೆಡ್ ಸಪ್ಲೈಯರ್ ಮೂರು ಸಾರಿ ಕರೆದರೂ ನಿನ್ನ ಗಮನ ಚಿಕನ್ ತಿನ್ನುತ್ತಿದ್ದ ಆ ಮೂವರು ಹೆಂಗಸರು ಮತ್ತು ಅವರೊಂದಿಗೆ ಬಂದ ವ್ಯಕ್ತಿಗಳ ಮೇಲಿತ್ತು. ಹೆಡ್ ಸಪ್ಲೈಯರ್ ಕಿವಿ ಹಿಡಿದು ನಿನ್ನ ಕಿಚನ್‌ಗೆ ಕರಕೊಂಡು ಹೋಗಿ ನಿನ್ನ ಬಾಯಿಗೆ ಸಿಕ್ಕಾಪಟ್ಟೆ ಚಿಕನ್ ತುರುಕಿದ್ದನಲ್ಲ."

"ಆದ್ರೆ, ನನ್ನ ಗಮನ ಚಿಕನ್ ಮೇಲಿರಲಿಲ್ಲ. ಅವನು ಕಿಚನ್‌ನಲ್ಲಿ ನನಗೆ ಚಿಕನ್ ತಿನ್ನಿಸಿದಾಗ ನಾನು ತಿಂದಿದ್ದಂತೂ ಹೌದು. ನಾನು ಅದನ್ನು ತಿಂದೂ ಇರಲಿಲ್ಲ. ಅದರ ವಾಸನೆ ನನಗೆ ತುಂಬಾ ಹಿಡಿಸ್ತು. ಆದ್ರೆ, ನಾನು ಆ ಟೇಬಲ್ ಹತ್ರ ನಿಂತ್ಕೊಂಡು 'ಆ ಮೂವರು ಹೆಂಗಸರ ಜೊತೆಗೆ ಬಂದಿರುವ ವ್ಯಕ್ತಿ ನಾನೂ ಆಗಬಹುದಿತ್ತೆಂದು' ಯೋಚಿಸುತ್ತಿದ್ದೆ."

"ಆಮೇಲೆ, ಕಪ್ಪು ಸೂಟುಧಾರಿ ವ್ಯಕ್ತಿ ನೀನೇ ಅಂತ ನಿನಗನ್ನಿಸಿರಬಹುದು. ನೀನು ಆ ಮೂವರು ಗೌರವರ್ಣದ ಬ್ರೆಡ್-ಬಟರ್ ಹಣ್ಣು ತಿಂದ, ಹೊಳೆಯುವ ಗಲ್ಲದ ಕೋಮಲೆಯರೊಂದಿಗೆ ಚಿಕನ್ ತಿನ್ನುತ್ತಿರುವಂತೆ, ಬೀರ್-ಶ್ಯಾಂಪೇನ್-ವಿಸ್ಕಿ ಕುಡಿಯುತ್ತಿರುವಂತೆ... ಕಡೆಗೆ ನೀನು ಆ ಮೂವರ ಆಶ್ರಯದಿಂದ ಮೆಲ್ಲನೆ ಎದ್ದೆ. ಒಬ್ಬಳ ಕೋಮಲ ಬಾಹುಗಳಲ್ಲಿ ನಿನ್ನ ಬಾಹುಗಳನ್ನು ಹಾಕಿದಂತೆ ಎದುರಿಗೆ ನಿಂತಿದ್ದ ಬದ್ರಿಲಾಲ ಸಟೆದು ನಿಂತು ನಿನಗೊಂದು ಉದ್ದ ಸೆಲ್ಯೂಟ್ ಹೊಡೆದಂತೆ. ನೀನು ಅವನ ಟ್ರೇನಲ್ಲಿ ಹತ್ತು ರೂಪಾಯಿಯ ನೋಟೊಂದನ್ನು ಟಿಪ್ ಹಾಕಿದಂತೆ. ಅವನು ಕೃತಜ್ಞತೆಯಿಂದ ಬಗ್ಗಿ ಇಮ್ಮಡಿಯಾಗುತ್ತಿದ್ದಾಗ ನೀನು ಅವನನ್ನು ಇಗ್ನೋರ್ ಮಾಡಿ ಹೋಟೆಲ್ಲಿಂದ ಹೊರಬಂದಂತೆ... ಹೊರಗೆ ಮಳೆ ಹನಿ ಬೀಳುತ್ತಿದೆ. ನೀನು ಮೆಲ್ಲನೆ ನಿನ್ನ ಕಾರಿನ ಬಾಗಿಲನ್ನು

ತೆರೆದೆ. ನಿನ್ನ ಆ ಕೋಮಲೆ ಬಂದು ನಿನ್ನ ಬಗಲಿನ ಸೀಟಿನಲ್ಲಿ ಕೂತಿದ್ದಾಳೆ. ಉಳಿದ ಇಬ್ಬರು ಹಿಂದಿನ ಸೀಟಿನಲ್ಲಿದ್ದಾರೆ. ಈ ಹಿಂದಿನ ಹೆಂಗಸ ರನ್ನು ನೀನು ರಸ್ತೆಯಲ್ಲಿ ಎಲ್ಲೋ ಡ್ರಾಪ್ ಮಾಡ್ದೆ. ಬಗಲಲ್ಲಿ ಕೂತವಳನ್ನು ಅವಳ ಮನೆಗೆ ಬಿಡಲು ತಿರುವಿರುವ ರಸ್ತೆಯಲ್ಲಿ ಹೋಗು ತ್ತಿದ್ದಿ. ರಾತ್ರಿ ಸ್ವಲ್ಪ ದಟ್ಟವಾಗಿದೆ. ಹೊರಗೆ ಕತ್ತಲು. ನೀನು ಹೋಗುತ್ತಿರುವ ರಸ್ತೆಗಳ ಎಡ–ಬದಿಗಳಲ್ಲಿ ಮಾವಿನ ಸಾಲುಮರಗಳಿವೆ. ಅಥವಾ ಖರ್ಜೂರದ ಪೊದೆಗಳಿವೆ. ಕಾರಿನ ಕಿಟಕಿಯಿಂದ ಚಂದ್ರ ಕಾಣಿಸುತ್ತಿದ್ದಾನೆ. ಆ ಹುಡುಗಿಯ ಕೂದಲುಗಳು ಗಾಳಿಯ ಹೊಡೆತ ದಿಂದ ಹಾರಿ ಹಾರಿ ನಿನ್ನ ಟೈಗೆ ಡಿಕ್ಕಿ ಹೊಡೆ ಯುತ್ತಿವೆ– ನೀನು ಅವಳಿಗೆಷ್ಟು ಹತ್ತಿರವಲ್ಲಿ ಕೂತಿದ್ದೀ ಎಂದರೆ…"

"ಸಾಕು– ಸಾಕು," ಬದ್ರಿಲಾಲ ಚುನ್ನಿ ಲಾಲನನ್ನು ತಡೆದ, "ನಿನ್ನ ಕಲ್ಪನಾಶಕ್ತಿ ಪ್ರಬಲವಾಗಿದೆ. ಒಂದು ವೇಳೆ ನೀನು ಮಾಣಿ ಯಾಗದಿದ್ರೆ ಓರ್ವ ಒಳ್ಳೆ ಕತೆಗಾರನಾಗುತ್ತಿದ್ದೆ."

"ಯಾಕೆ, ಮಾಣಿಯಾಗಿ ಕತೆಗಾರನಾಗಲು ಸಾಧ್ಯವಿಲ್ವ?"

"ಇಲ್ಲ. ಗಿಡುಗದಂತಹ ಸಂಪಾದಕರು ಲೇಖ ಕನ ಅಂತಸ್ತಿಗೆ ಮೊದಲು ಪ್ರಾಶಸ್ತ್ಯ ಕೊಡ್ತಾರೆ. ಕತೆ–ಲೇಖನ ಪ್ರಕಟಗೊಳ್ಳಲು ನೀನು ನಿನ್ನ ವಿಳಾಸದಲ್ಲಿ ನಿನಗೆ ನೀನು ಹೋಟೆಲ್ ಮ್ಯಾನೇ ಜರ್ ಅಂತ ಬರೆಮಕೋ ಬೇಕಾಗುತ್ತೆ. ಆಗ, ಒಂದು ವೇಳೆ, ಹೋಟೆಲ್ ಮ್ಯಾನೇಜರನಿಗೆ ಈ ವಿಷಯವೇನಾದ್ರೂ ಗೊತ್ತಾದ್ರೆ ನೀನು ಫುಟ್‌ಪಾಥ್‌ನಲ್ಲಿ ನಿಂತು ನಿನ್ನನ್ನು ನೀನು 'ಸಾಹಿತಿ' ಅಂತ ಹೇಳಿಕೊಂಡರೂ ಮಾರನೇ ದಿನದಿಂದ 'ಮಾಣಿ' ಅಂತ ಹೇಳಿಸಿಕೊಳ್ಳೋದಿಲ್ಲ."

"ನಾನು ಪರಿಚಯವನ್ನು ಗುಪ್ತವಾಗಿಟ್ಟರೆ? ಚುನ್ನಿಲಾಲನಿಗೆ ಬದಲಾಗಿ ಚುನ್ನಿಲಾಲ 'ಸರಸ', ಚುನ್ನಿಲಾಲ 'ನಿಕೇತ' ಅಥವಾ ಚುನ್ನಿ ಲಾಲ 'ಸಜಲ'ನಾಗಿ ನಿನ್ನ ಕೇರಾಫ್ ಅಡ್ರೆಸ್ ಕೊಟ್ರೆ?"

"ಆದರೂ ಗೊತ್ತಾಗುತ್ತೆ. ಒಂದು ವೇಳೆ ನೀನು ಪ್ರಸಿದ್ಧನಾದರೂ ದೊಡ್ಡ ಲೇಖಕ ನಂತೂ ಆಗುವೆ, ಆದ್ರೆ ದೊಡ್ಡ ಮನುಷ್ಯ ನಾಗೋಲ್ಲ."

"ಯಾಕೆ?"

"ಅದೇ ನಿನ್ನ ಅಂತಸ್ತು. ಉನ್ನತ ಸ್ಥಾನದಲ್ಲಿ ಕೂತಿರುವ ಮನುಷ್ಯ ನಾಲ್ಕು ಹೊಲಸು ಸಾಲು ಗೀಚಿದರೂ ಮಹಾನ್ ಲೇಖಕನ ಸ್ಥಾನ ಪಡೆದು ಸಮಾಜದಲ್ಲಿ ಸನ್ಮಾನಿತನಾಗ್ತಾನೆ. ಅದೇ ಸಣ್ಣ ಮನುಷ್ಯ, ಅಂತಸ್ತಿನಲ್ಲಿ, ತನ್ನ ಕಲಾಸಾಧನೆ ಯಲ್ಲಿ ಎಷ್ಟು ದೊಡ್ಡವನಾದರೂ ಸಮಾಜ ಅವನನ್ನು 'ಅಯ್ಯೋ ಪಾಪ' ಎಂದೇ ಹೇಳಿ ನೋಡುತ್ತದೆ. ಹಾಂ, ಒಂದು ವೇಳೆ ಇದೇ ಸೀಮಿತ ಪ್ರತಿಭೆಯೊಂದಿಗೆ ನೀನು ಯಾವು ದಾದರೂ ಪತ್ರಿಕೆಯ ಸಂಪಾದಕನಾದರೆ, ಯಾವುದೇ ವಿಶ್ವವಿದ್ಯಾನಿಲಯದ ವೈಸ್ ಚಾನ್ಸ ಲರ್‌ನಾದರೆ, ಯಾವುದೋ ಉನ್ನತ ಸರ್ಕಾರಿ ನೌಕರನಾದರೆ ಅಥವಾ ರಾಜಕೀಯದಲ್ಲೇ ಒಂದು ಪ್ರತಿಷ್ಠಿತ ಪದವಿಯಲ್ಲಿದ್ದರೆ, ನೀನು ನೋಬಲ್ ಬಹುಮಾನ ಪಡೆಯುವುದಕ್ಕೂ ಯೋಗ್ಯ ಅನ್ನುವ ಮಟ್ಟಿಗೆ ಹೋಗ್ತಿದ್ದೆ," ಅಂದ ಬದ್ರಿ ಲಾಲ. ಬದ್ರಿಲಾಲ ಹನ್ನೊಂದನೇ ಕ್ಲಾಸ್ ವರೆಗೂ ಪಾಸ್ ಮಾಡಿದ್ದ. ನಾರ್ಮಲ್ ಸ್ಕೂಲಿನ ಉಪಾ– ಧ್ಯಾಯರ ತರಬೇತಿಯನ್ನು ಮಾಡಿಕೊಂಡಿದ್ದ. ಇವನು ತನ್ನ ಜೀವನದಲ್ಲಿ ಓರ್ವ ಅಸಫಲ ಲೇಖಕ ನಾಗಿದ್ದರೂ ಆಗಿರಬಹುದೆಂದು ಅವನ ಮಾತು ಕೇಳಿ ಚುನ್ನಿಲಾಲ ಆಶ್ಚರ್ಯಗೊಂಡ.

ಬದ್ರಿಲಾಲ ಮುಂದೆ ಮಾತಾಡುತ್ತಿದ್ದ. ಆದರೆ ಅದೇ ವೇಳೆಗೆ ಒಂದು ಉದ್ದ ಕರಿ ಕಾರು ಬಂದು ನಿಂತಿತು. ಇಬ್ಬರ ಬೀಡಿಗಳೂ ಮುಗಿದಿದ್ದವು. ಕಾರಿನ ಬಾಗಿಲು ತೆಗೆದಂತೆಯೇ ಇಬ್ಬರೂ ಎದ್ದು ನಿಂತು ಬಗ್ಗಿ ನಮಸ್ಕರಿಸಿದರು. ಮೊದಲು ಒಂದು ಅಲ್ಸೇಶಿಯನ್ ನಾಯಿ ಕಾರಿಂದ ಹೊರಗೆ ಹಾರಿತು. ಇವರು ಇನ್ನೂ ಸ್ವಾಗತ ಕ್ಕಾಗಿ ಬಗ್ಗಿ ನಿಂತಿದ್ದರು. ಆಮೇಲೆ ಇಬ್ಬರು ಹೆಂಗಸರು ಕಾರಿಂದ ಇಳಿದರು, ಕೊನೆಗೆ ಅವರ ಹಿಂದೆ ಸಿಗಾರ್ ಸೇದುತ್ತ ಬೆಲೆ ಬಾಳುವ ಸೂಟಿನಲ್ಲಿ ಓರ್ವ ಸಾಹೇಬರು.

"ಸಾಹೇಬ್‌ಜಿ, ಡಾಗ್ ನಾಟ್ ಅಲೌಡ್ ಇನ್‌ಸೈಡ್," ಬದ್ರಿಲಾಲ ಹಾರಿಬಂದು ನಾಯಿಯ

ಸರಪಳಿ ಹಿಡಿದುಕೊಂಡು ಅತ್ಯಂತ ವಿನೀತ ನಾಗಿ ಹೇಳಿದ್ದ. ಸಾಹೇಬರು ಇಂಗ್ಲೀಷ್‌ನಲ್ಲಿ ಏನೋ ಹೇಳಿ ಐದರ ನೋಟನ್ನು ಬದ್ರಿ ಲಾಲನ ಕಡೆಗೆ ಎಸೆದಿದ್ದರು. 'ನಾಯಿಯನ್ನು ನೋಡಿಕೊಂಡಿರಿ, ಅದೇನಾದರೂ ಕೊಂಯ್ ಕೊಂಯ್ ಗುಟ್ಟಿದರೆ ಡಬಲ್ ರೋಟಿ ತಂದ್ ಹಾಕಿ,' ಎನ್ನುವುದು ಅವರ ಅಭಿಪ್ರಾಯವಾಗಿತ್ತು. ಚುನ್ನಿಲಾಲ ಹಾರಿ ಐದರ ನೋಟನ್ನು ತೆಗೆದು ಕೊಂಡಿದ್ದ. ಇಬ್ಬರೂ ಆ ನಾಯಿಯನ್ನು ಚುಂಬಿಸಿ ಮೈದಡವುತ್ತಿದ್ದರು. ಹೆಂಗಸರೊಂದಿಗೆ ಸಾಹೇ ಬರು ಒಳಗೆ ಹೋಗಿಬಿಟ್ಟಿದ್ದರು. ನಾಯಿ ತಮಗೇನೂ ಮಾಡಲ್ಲ ಅಂತ ಇಬ್ಬರಿಗೂ ನಂಬಿಕೆ ಯಾಗಿತ್ತು. ನಾಯಿ ಭಯಂಕರವಾಗಿತ್ತು. ಆದರೂ ಅದು ಮಾಣಿಗಳನ್ನು ಗುರುತಿಸುತ್ತದೆ ಯೆಂದು ಇಬ್ಬರಿಗೂ ಗೊತ್ತಿತ್ತು. ಮಾಣಿ ಯಾರಿಗೆ ಏನು ಕೆಡುಕು ಮಾಡಲು ಸಾಧ್ಯ !

"ದೋಸ್ತ್, ಇದು ಸಿನೀಮಾ ಆಗಿದ್ರೆ ಇವ ರಲ್ಲಿ ಆ ತೆಳು ಸೊಂಟದ ಕೋಮಲಾಂಗಿ ನನ್ನ ಸ್ಕೂಲಿನ ಹಳೆ ಪ್ರೇಯಸಿಯೂ ಆಗುತ್ತಿದ್ದಳು. ಚುನ್ನಿಲಾಲ ಹೇಳಿದ, "ಅಥವಾ ಪಕ್ಕದ ಮನೆ



ಯುವತಿಯಾಗಿದ್ದರೆ ಕಿಟಕಿಯಿಂದ ಇಣುಕಿ ನೋಡು ತ್ತಿದ್ದಳು." ಈಗ ಚುನ್ನಿಲಾಲನ ಕಣ್ಣುಗಳು ಆಕಾಶದಲ್ಲಿ ತೇಲುವ ಒಂದು ತುಂಡು ಮೋಡದ ಮೇಲೆ ನೆಟ್ಟಿದ್ದವು. ಅವನ ತಲೆ ಮೇಲೆ ಸರಿಯಾಗಿ, ಐನೂರು ವ್ಯಾಟಿನ ಮರ್ಕ್ಯುರಿ ಬಲ್ಬೊಂದು ಉರಿ ಯುತ್ತಿದ್ದರೂ ಅದನ್ನು ಅವನು ಇಗ್ನೋರ್ ಮಾಡುತ್ತಿದ್ದ. ಆಕಾಶದಲ್ಲಿ ಹೊಳೆಯುವ ಒಂದು ಸಣ್ಣ ನಕ್ಷತ್ರದೆಡೆ ನೋಡುತ್ತ ಅವನು ಹೇಳಿದ. "ಒಂದು ವೇಳೆ, ಇದು ಸಿನೀಮಾ ಆಗಿದ್ರೆ ಏನಾ ಗ್ತಿತ್ತು ಅನ್ನೋದು ಗೊತ್ತಿದೆಯಾ?"

"ಏನಾಗ್ತಿತ್ತು?" ಬದ್ರಿಲಾಲ ಕೇಳಿದ.

"ಅವಳು ಕಾರಿಂದ ಇಳೀತಿದ್ದಳು."

"ಯಾರು?" ಬದ್ರಿಲಾಲ ಮತ್ತೆ ಕೇಳಿದ.

"ಅದೇ, ಈಗ ತಾನೆ ಕಾರಿಂದ ಇಳಿದಳಲ್ಲ– ಆ ತೆಳು ಸೊಂಟದ ಕೋಮಲಾಂಗಿ. ಇಳೀತಿ ತ್ತಿದ್ದಳು, ನನ್ನ ಹಾರಾಡುವ ಕೂದಲುಗಳನ್ನು ನೇವರಿಸಿಕೊಳ್ಳುತ್ತಾ. ನಾನಲ್ಲಿ ಮೂಲೇಲಿ ನಿಂತಿ ರುತ್ತಿದ್ದೆ. ಅವಳ ಕಣ್ಣುಗಳು ನನ್ನ ಕಣ್ಣುಗಳಿಗೆ ಢಿಕ್ಕಿ ಹೊಡೀತಿದ್ದವು–ಹೀಗೇ. ನನ್ನ ಕಣ್ಣುಗಳೂ ಢಿಕ್ಕಿ ಹೊಡೀತಿದ್ದವು– ಆಳವಾಗಿ, ಏನೋ ಅಗಿ ಯುತ್ತಾ ಅವಳು ಮತ್ತೆ ನೋಡುತ್ತಿದ್ದಳು, ಗುರುತಿಸುತ್ತಿದ್ದಳು. ಅದೇ ವೇಳೆಗೆ 'ರಘುಂಗ್' ಅನ್ನೋ ಧ್ವನಿಯೊಂದು ಜೋರಾಗಿ ಪರದೆ ಮೇಲಾಗುತ್ತಿತ್ತು. ಅವಳ ಕಣ್ಣುಗಳ ಪುತ್ಥಳಿ ಗಳು ಸ್ವಲ್ಪ ಬಣ್ಣ ಬದಲಾಯಿಸುತ್ತಿದ್ದವು. ಆಮೇಲೆ, ನೇಪಥ್ಯದಲ್ಲಿ ಶಹನಾಯಿಯ ಕರುಣ ಸ್ವರ ಮೂಡುತ್ತಿತ್ತು. ಅನೇಕ ಹಳೆ ನೆನಪು ಗಳು ನಮ್ಮಿಬ್ಬರ ನಡುವೆ ಜೋಕಾಲಿಯಾಡು ತ್ತಿದ್ದವು. ಸ್ವರ–ತರಂಗ ಬಾರಿಸುತ್ತಿತ್ತು. ಜಲ ತರಂಗ ಬಾರಿಸುತ್ತಿತ್ತು. ಆಗ, ಸಚಿನ್ ದೇವ್ ಬರ್ಮನ್ ಸಂಗೀತ ಹೆಚ್ಚು ಉಪಯುಕ್ತವಾಗು ತ್ತಿತ್ತು. ನಿರ್ದೇಶಕ ಬಯಸಿದರೆ ಫ್ಲಾಶ್– ಬ್ಯಾಕ್‌ನಲ್ಲಿ ಈ ನಡುವೆ ಮೂರು ನಿಮಿಷ ಒಂದೆ ರಡು ಹಾಡನ್ನೂ ಹಾಡಿಸುತ್ತಿದ್ದ. ಅವಳು ಮುಂದೆ–ಮುಂದೆ ಸಮುದ್ರದ ದಡದಲ್ಲಿ ಓಡು ತ್ತಿದ್ದಾಳೆ. ನಾನು, ಚುನ್ನಿಲಾಲ ಮಾಣಿ, ಸ್ವಲ್ಪ ಒಳ್ಳೆ ಬಟ್ಟೆ ತೊಟ್ಟು, ಸಿವಿಲ್ ಡ್ರೆಸ್‌ನಲ್ಲಿ ಅವಳ ಹಿಂದಿಂದೆ ಓಡುತ್ತಿದ್ದೆ. ಕಡೆಗೆ, ಫ್ಲಾಶ್–

ಬ್ಯಾಕ್ ಮುಗೀತಿತ್ತು. ಮತ್ತೆ 'ರಷಿಂಗ್' ಧ್ವನಿಯೊಂದಿಗೆ ನಾವು ನಮ್ಮ ವರ್ತಮಾನಕ್ಕೆ ಬರುತ್ತಿದ್ದೆವು. 'ಗಡ್-ಗಡ್-ಗಡ್-ಗಡ್' ಧ್ವನಿಯೊಂದಿಗೆ ಕೆಲವು ಅರಮನೆಗಳು, ಕೋಟೆಗಳು ಇತ್ಯಾದಿ ಪೃಷ್ಠಭೂಮಿಯಲ್ಲಿ ಧೂಳು ಪಾಲಾಗುತ್ತಿರುವಂತೆ ತೋರಿಸಲಾಗುತ್ತಿತ್ತು. ಆಮೇಲೆ ಆ ಕೋಮಲಾಂಗಿಯ ಕಣ್ಣುಗಳ 'ಕ್ಲೋಸ್-ಅಪ್' ಪರದೆ ಮೇಲೆ ಬರುತ್ತಿತ್ತು. ಈಗ, ಸುಂದರವಾಗಿರುವ ಆ ಕಣ್ಣುಗಳಲ್ಲಿ ಆಗ, ಸಂಕಟ, ನೋವು, ಕರುಣೆ ಸೂಸುತ್ತಿದ್ದವು. ತನ್ನ ಪ್ರೇಮಿಯನ್ನು ಚುನ್ನಿಲಾಲ ಮಾಣಿಯ ರೂಪದಲ್ಲಿ ನೋಡುವುದಕ್ಕೆ ಅವಳಿಗೆ ದುಃಖವಾಗುತ್ತದೆ. ಆ ಕಪೆ ಪರದೆ ಮೇಲೆ ಎದುರಿಗೆ ನಿಂತ ಚುನ್ನಿಲಾಲ ಮಾಣಿಯೂ ಸಂಕಟದಿಂದ ತನ್ನ ಮುಖವನ್ನು ಬೇರೆಡೆಗೆ ತಿರುಗಿಸಿಕೊಂಡು ನಿಲ್ಲುತ್ತಿದ್ದ. ಕಡೆಗೆ ಅವನು, ಆ ಕೋಮಲಾಂಗಿಯು ತಲೆ ತಗ್ಗಿಸಿ ಹಾದು ಹೋದ ಮೇಲೆ ಪ್ರೇಕ್ಷಕರ ಕಡೆಗೆ ಮುಖ ತಿರುಗಿಸಿದಾಗ, ಕ್ಲಾರೋನೆಟ್ ಮೇಲೆ ರಾಗ ಭೈರವಿ ಮಂದ ಕರುಣಾಸ್ವರದಲ್ಲಿ ಪ್ರೇಕ್ಷಕರ ಕಿವಿಗಳಿಗೆ ಬಡಿಯುತ್ತಿತ್ತು. ಆಕಾಶದಿಂದ ರೆಕ್ಕೆ ಮುರಿದು ಪಕ್ಷಿಯೊಂದು ಭೂಮಿ ಮೇಲೆ ಬೀಳುತ್ತಿತ್ತು. ಚುನ್ನಿಲಾಲನ ಕಣ್ಣುಗಳಿಂದ ಹರಿದು ಹೊಳೆಯುವ ಕಣ್ಣೀರು ಅವನ ಗಲ್ಲಗಳ ಮೇಲೆ ಎರಡು ಸಮಾನಾಂತರ ರೇಖೆಗಳಲ್ಲಿ ಬೀಳುತ್ತಿದ್ದವು. ಫಿಲ್ಮ್‌ನಲ್ಲಿ ಕತೆ ಇನ್ನೂ ಮುಂದುವರಿಯುತ್ತಿತ್ತು..."

"ಆದ್ರೆ ಇದು ಫಿಲ್ಮ್ ಅಲ್ಲ." ಬದ್ರಿಲಾಲ ಅವನ ಹೆಗಲ ಮೇಲೆ ಕೈ ಹಾಕಿ ಅವನನ್ನು ಅಲುಗಾಡಿಸಿ ಅವನ ದೃಷ್ಟಿಯನ್ನು ಸರಿಯಾದ ಫೋಕಸ್‌ಗೆ ತರುತ್ತಾ ಹೇಳಿದ. "ನಿನ್ನ ಅಂತಸ್ತನ್ನು ಅರಿತುಕೋ. ಒಳಗಿಂದ ಕೆಲವು ಗಿರಾಕಿಗಳು ಹೊರ ಬರುವಂತೆ ಕಾಣಿಸುತ್ತೆ. ನಡಿ ವಿಧೇಯನಾಗಿ ನಿಂತ್ಕೋ."

ಬಾಗಿಲು ತೆರೆದಿತ್ತು. ಓರ್ವ ಧಢೂತಿ ಆಸಾಮಿ ತನ್ನ ಅಕ್ಕ ಪಕ್ಕದಲ್ಲಿದ್ದ ಇಬ್ಬರು ಹೆಂಗಸರ ಹೆಗಲ ಮೇಲೆ ಕೈ ಹಾಕಿ ಹೊರಗೆ ಬಂದಿದ್ದ. ಅವನ ತುಟಿಗಳು ಸಿಗರೇಟನ್ನು ಒತ್ತಿ ಹಿಡಿದಿದ್ದವು. ಬದ್ರಿಲಾಲ ಮತ್ತು ಚುನ್ನಿಲಾಲರಿಬ್ಬರೂ ಅವರೆದುರು ನಮಸ್ಕರಿಸುವ ಭಂಗಿಯಲ್ಲಿ ಬಗ್ಗಿದ್ದರು. ಧಡೂತಿ ವ್ಯಕ್ತಿ ಹೆಂಗಸರೊಂದಿಗೆ ಕಾರಿನಲ್ಲಿ ಕೂತಾಗ ಚುನ್ನಿಲಾಲ ಮತ್ತೆ ಹೇಳಿದ್ದ. "ದೋಸ್ತ್, ಆ ಇಬ್ಬರ ಹೆಂಗಸರ ಮಧ್ಯೆಯಿರುವ ಆ ಧಡೂತಿ ವ್ಯಕ್ತಿ ನಾನೂ ಆಗಬಹುದಿತ್ತು..."

✡



## ಗಣಿತ ಸಂಘಗಳು

ಮ್ಯಾತಮ್ಯಾಟಿಶೆ ಗೆಜೆಲ್— ಅತ್ಯಂತ ಪ್ರಾಚೀನ ಗಣಿತ ಸಂಘ. ಜರ್ಮನಿಯ ಹಾಂಬುರ್ಗದಲ್ಲಿ ೧೬೯೦ರ ಸುಮಾರಿಗೆ ಎಲ್ಲ ರಾಷ್ಟ್ರಗಳಲ್ಲೂ ಗಣಿತ — ಸಂಘಗಗಳು ಅಸ್ತಿತ್ವಕ್ಕೆ ಬಂದವು. ಭಾರತದಲ್ಲಿ ಮೊದಲ ಬಾರಿಗೆ ಗಣಿತ ಸಂಘವನ್ನು ಮದ್ರಾಸಿನಲ್ಲಿ ೧೯೦೭ರಲ್ಲಿ ಪ್ರಾರಂಭವಾಯಿತು. ಇದರ ಸಂಸ್ಥಾಪಕರು ವಿ. ರಾಮಸ್ವಾಮಿ ಅಯ್ಯರ್. ೧೮೯೭ರಲ್ಲಿ ಪ್ರಥಮ ಬಾರಿಗೆ ಅಂತರಾಷ್ಟ್ರೀಯ ಗಣಿತ ಸಮ್ಮೇಳನವು ಜೂರಿಚ್‌ನಲ್ಲಿ ನಡೆಯಿತು.

## ವಿದ್ಯುತ್‌ಚಾಲಿತ – ಬಸ್ಸು

ಜಗತ್ತಿನಲ್ಲಿ ಪ್ರಥಮ ಬಾರಿಗೆ ಜರ್ಮನಿಯ ಸ್ಟುಟ್‌ಗರ್ಟ್ ಹಾಗೂ ವೆಸೆಲ್ ನಗರಗಳಲ್ಲಿ (ಎರಡು ವರ್ಷ ಕಾಲ) ಪ್ರಾಯೋಗಿಕವಾಗಿ ವಿದ್ಯುತ್ (ಬ್ಯಾಟರಿ) ಚಾಲಿತ ಬಸ್ಸುಗಳನ್ನು ಬಳಕೆಗೆ ತರಲಾಯಿತು.

# ನಗೆಮಲ್ಲಿಗೆ

ತಾಜಮಹಲ್ ವೀಕ್ಷಿಸುತ್ತಿದ್ದ ಪತ್ನಿ ಕುತೂಹಲದಿಂದ ಕೇಳಿದಳು: "ನಾನು ಸತ್ತ ಮೇಲೆ ನೀವೇನು ಮಾಡುವಿರಿ?"

"ನೀನು ಸತ್ತ ಸುದ್ದಿ ಪ್ರಕಟಿಸುವೆ" ಎಂದನಾ ಪತ್ರಕರ್ತ ಪತಿ.

*

ಶಿಕ್ಷಕಿಯೋರ್ವಳು, "ಒಬ್ಬರಿಗೊಬ್ಬರು ಸಹಾಯಮಾಡುತ್ತಿರಬೇಕು. ಅದು ಮಾನವತೆಯ ಲಕ್ಷಣ..." ಎನ್ನುತ್ತಿರುವಾಗಲೇ ವಿದ್ಯಾರ್ಥಿಯೊಬ್ಬ, "ಮೊನ್ನೆ ಪರೀಕ್ಷೆಯಲ್ಲಿ ರವಿಗೆ 'ಸಹಾಯ' ಮಾಡಿದ್ದಕ್ಕೆ ಶಶೀಗೆ ನೀವು ಹೊಡೆದಿರಲ್ಲಾ ಮೇಡಂ" ಎನ್ನಬೇಕೇ!

*

ಜಯಾ: ಎಲ್ಲಿಗೆ ಹೋಗುತ್ತಿರುವೆ?

ಲತಾ: ಪುಸ್ತಕದ ಅಂಗಡಿಗೆ.

ಜಯಾ: ಎಂದೂ ಪುಸ್ತಕ ಕೊಂಡುಕೊಳ್ಳದ ನೀನು ಈಗೇಕೆ ಪುಸ್ತಕಗಳನ್ನು ಕೊಂಡು ತರಬೇಕೆಂದಿರುವೆ?

ಲತಾ: ನನ್ನ ಪತಿ, ಟೇಬಲ್-ಲ್ಯಾಂಪ್ ತಂದುಕೊಟ್ಟಿದ್ದಾರೆ. ಅದಕ್ಕೆ...

*

ಪ್ರಿಯತಮೆ: ನಿಮ್ಮ ಜೀವನದಲ್ಲಿ ಮೊದಲ ಬಾರಿಗೆ ಮುತ್ತು ಕೊಟ್ಟದ್ದು ನನಗೆ ಅಲ್ಲವೇ?

ಪ್ರಿಯ: ಅಲ್ಲ. ನಾನು ಮೊದಲು ಮುತ್ತು ಕೊಟ್ಟದ್ದು ಜಯಾಗೆ.

ಪ್ರಿಯತಮೆ (ಅನಿರೀಕ್ಷಿತ ಉತ್ತರದಿಂದ ಕ್ರೋಧಗೊಂಡು): ನನಗಿಂತ ಮುಂಚೆ ಅವಳನ್ನು ಪ್ರೀತಿಸಿದ್ದಿರೇನು?

ಪ್ರಿಯ: ಹೌದು.

ಪ್ರಿಯತಮೆ: ಮತ್ತೇಕೆ, ಆಕೆಯನ್ನೇ ವರಿಸಲಿಲ್ಲ?

ಪ್ರಿಯ: ಜಯಾ ನನ್ನ ತವರೂರಿನ ಪಕ್ಕದ ಮನೆಯ ಎರಡು ವರ್ಷದ ಮಗು. ಅದನ್ನು...

(ಪ್ರಿಯತಮೆ ಪೆಚ್ಚಾಗಿ ಪ್ರಿಯಕರನ ಎದೆಗೊರಗಿದಳು.)

*

ಸುಪ್ರಸಿದ್ಧ ಪತ್ರಿಕಾಲಯದ ಜಾಹೀರಾತು ವಿಭಾಗಕ್ಕೆ ಬಂದ ಆತ, "ನಿಧನದ ಜಾಹೀರಾತಿಗೆ ಎಷ್ಟು ಚಾರ್ಜು?" ಎಂದು ಕೇಳಿದ.

ಜಾಹೀರಾತು ವಿಭಾಗದವ "ಪ್ರತಿ ಇಂಚಿಗೆ ಐದು ರೂಪಾಯಿ," ಎಂದ.

"ಅಯ್ಯೋ! ಬೇಡ ಬಿಡಿ. ಸತ್ತವ ಐದೂವರೆ ಅಡಿ ಇದ್ದಾನೆ," ಎಂದವನೇ ಆತ ಹಿಂತಿರುಗಿಯೂ ನೋಡದೆ ಹೊರಟುಹೋದ.

*

ಆತ: ಬಾಲ್ಯದಲ್ಲಿನ ನಿನ್ನ ಯಾವುದಾದರೂ ಆಸೆ ಈಡೇರಿದೆಯೇ?

ಈತ: ಓಹೋ! ಆಗ ನಾನು ತಪ್ಪೆಸಗಿದಾಗ ಶಿಕ್ಷಕರು ನನ್ನ ಕೂದಲು ಹಿಡಿದೆಳೆಯುತ್ತಿದ್ದರು. ನಾನಾಗ ನನ್ನ ತಲೆ ಬೋಳಾಗಿದ್ದರೆ ಚೆನ್ನಾಗಿತ್ತು ಅಂದ್ಕೊಳ್ತಿದ್ದೆ. ಈಗ ಆ ಆಸೆ ಈಡೇರಿದೆ.

*

ರವಿ: ವಕೀಲರಲ್ಲಿ ಎಷ್ಟು ಬಗೆ?

ಶಶಿ: ಎರಡು ಬಗೆ, ಒಬ್ಬ ಕಾನೂನು ಬಲ್ಲವ; ಇನ್ನೊಬ್ಬ ನ್ಯಾಯಾಧೀಶನನ್ನು ಬಲ್ಲವ.

*

ಜಗಳವಾಡಿ ಮಲಗಿದ್ದ ಪತ್ನಿಯನ್ನು ಮಧ್ಯರಾತ್ರಿ ಎಬ್ಬಿಸುತ್ತ ಪತಿ ಹೇಳಿದ: "ಕಳ್ಳರು ನಮ್ಮ ತಿಜೋರಿಯಿಂದ ಹಣ ದೋಚುತ್ತಿದ್ದಾರೆ. ಎದ್ದೇಳು ಮಹಾರಾಯಿತಿ."

"ಅದು ನಿಮಗೂ ಅವರಿಗೂ ಬಿಟ್ಟ ವಿಷಯ. ನನಗೆ, ನಿದ್ದೆ ಮಾಡಲು ಬಿಡಿ," ಎಂದಾಕೆ ನುಡಿದು ಮುಸುಕು ಹಾಕಿ ಮಲಗೇ ಬಿಟ್ಟಳು. ಪತಿ...

•

ಅಂಚೆ ಕಚೇರಿ ದೂರು ನೀಡುವ ಕೌಂಟರ್ ಬಳಿ ನಿಂತಿದ್ದ ಗೆಳತಿಯನ್ನಾಕೆ ಕೇಳಿದಳು: "ಯಾವ ದೂರು ನೀಡಲು ನಿಂತಿರುವೆ ?"

ಕೂಡಲೇ ಆಕೆ, "ನನ್ನ ಪತಿ ಕಲ್ಕತ್ತೆಗೆ ಹೋಗುತ್ತಿರುವುದಾಗಿ ಹೇಳಿದ್ದರು. ಅವರಿಂದ ಬಂದಿರುವ ಪತ್ರದ ಮೇಲೆ ಅಂಚೆ ಕಚೇರಿಯವರು ದೆಹಲಿಯ ಮುದ್ರೆ ಹಾಕಿದ್ದಾರೆ. ಅದಕ್ಕೇ..." ಎಂದಳು.

•

ಪತಿ (ವ್ಯಂಗ್ಯವಾಗಿ): ನಿನ್ನ ಈ ಅಡುಗೆ ನನ್ನ ತಾಯಿ ಮಾಡಿದ ಹಾಗಿಲ್ಲ.

ಪತ್ನಿ (ಅದೇ ಧಾಟಿಯಲ್ಲಿ) : ಇರಬಹುದೇನೊ. ನಿಮ್ಮ ಸಂಬಳ ನನ್ನ ಅಪ್ಪನಷ್ಟಿಲ್ಲವಲ್ಲ!

•

ಕುಟುಂಬ ಯೋಜನೆ ಪ್ರಚಾರಕನೋರ್ವ ತನ್ನ ಪ್ರಚಾರ ಭಾಷಣದಲ್ಲಿ "ಜನಸಂಖ್ಯೆ ಕಡಿಮೆಗೊಳಿಸಲು ಸುಲಭ ಮಾರ್ಗ ಯಾವುದು ಗೊತ್ತೇ..." ಎನ್ನುತ್ತಿರುವಾಗಲೇ ನೆರೆದಿದ್ದ ಜನಸಮೂಹ ಮಧ್ಯದಿಂದ ಕೇಳಿ ಬಂದ ಒಂದು ಧ್ವನಿ—"ಬಾಂಬ್."

•

ತನ್ನ ಭಾವೀ ಪತಿ ಹೇಗಿರಬೇಕು ಎಂಬುದನ್ನು ಆಕೆ ತನ್ನ ಗೆಳತಿಗೆ ಹೇಳುತ್ತಿದ್ದಳು: "ಆತ ಗಾಯಕನಿರಬೇಕು. ನಿತ್ಯವೂ ಹೊಸದನ್ನು ಹೇಳುತ್ತಿರಬೇಕು. ಆತ ಸದಾ ಮನೆಯಲ್ಲಿರಬೇಕು. ನಾನು ಹೇಳಿದಾಗ ಸುಮ್ಮನಿರಬೇಕು. ಧೂಮಪಾನ ಮಾಡಬಾರದು..."

ಗೆಳತಿ ಹೇಳಿದಳು: "ನಿನಗೆ ಪತಿಯ ಅವಶ್ಯಕತೆಯಿಲ್ಲ; ರೇಡಿಯೋ ಒಂದನ್ನು ಖರೀದಿಸು."

•

ಪತಿ : ಧರ್ಮರಾಯನೇ ಜೂಜಾಡುತ್ತಿದ್ದ. ನೀನು ನನ್ನನ್ನೇಕೆ ಅಡ್ಡಿಪಡಿಸುತ್ತೀ...

ಪತ್ನಿ : ಅದ್ಸರಿ. ಆದರೆ ದ್ರೌಪದಿಗೆ ಐವರು ಗಂಡಂದಿರಲ್ಲವೇ ! ?

•

"ಸರಕಾರಿ ಹೆಣ್ಣುಮಕ್ಕಳ ಶಾಲೆ,...ಪುರ" ನಾಮಫಲಕ ನೋಡಿದಾಗ ಇದು "ಹೆಣ್ಣುಮಕ್ಕಳ ಸರಕಾರಿ ಶಾಲೆ,...ಪುರ" ಎಂದಿರಬೇಕಿತ್ತು ಎಂದೆನಿಸಿತು ನನಗೆ.

•

ವೈದ್ಯರು (ಸಲಹೆ ನೀಡುತ್ತ) : ವಾತಾವರಣ ಬದಲಾವಣೆ ನಿಮಗೀಗ ಅತ್ಯವಶ್ಯಕ.

ನಟ : ಈಗಾಗಲೇ ಇಬ್ಬರು ಪತಿಯಂದಿರು, ಮೂವರು ಸೆಕ್ರೆಟರಿಗಳು, ಐವರು ಪ್ರೇಮಿಗಳನ್ನು ಬದಲಾಯಿಸಿರುವೆ. ಮತ್ತೀಗ...

•

ಸಾರ್ವಜನಿಕರ ಬಳಕೆಗಾಗಿ ಇರಿಸಿದ್ದ ಫೋನನ್ನು ಹಿಡಿದುನಿಂತಿದ್ದ ಆತನಿಗೆ ಈತ ಕೇಳಿದ: "ಇಪ್ಪತ್ತು ನಿಮಿಷದಿಂದ ಮಾತಾಡದೆ ಫೋನ್ ಹಿಡಿದು ಹಾಗೆ ನಿಂತಿದ್ದೀರಲ್ಲಾ?" ಆತ ಕೋಪಗೊಂಡು, "ನಿಮಗಿಷ್ಟೂ ಅರಿವಿಲ್ಲವೆ. ಅತ್ತಲಿಂದ ನನ್ನ ಪತ್ನಿ ಮಾತನಾಡುತ್ತಿರುವಳು," ಎಂದ.

•

"೧ + ೧ ಅಂದರೆ ೨ ಆದರೆ ಹೆಣ್ಣು + ಗಂಡು ಅಂದರೆ ಏನು?"

"ಅನಾಹುತ!"

# ರಾಷ್ಟ್ರೀಯ ರಕ್ಷಣಾ ಅಕಾಡಮಿ

**ಟಿ. ಎಂ. ಸುಬ್ಬರಾಯ**

ಮಹಾರಾಷ್ಟ್ರದ ಸಿಂಹಗಡ ಗಂಡು ಮೆಟ್ಟಿನ ತಾಣ. ಮರಾಠಿಗರ ಧೈರ್ಯಸಾಹಸಗಳ ಪ್ರತೀಕ. ಸಾಹಸಗಾಥೆಗಳ ತವರೂರು. ಜೀವದ ಗೆಳೆಯ ಶಿವಾಜಿಗಾಗಿ ತನ್ನ ಜೀವದ ಹಂಗು ತೊರೆದು ತಾನಾಜಿ ಗೆದ್ದುಕೊಟ್ಟ ಕಾಡು ಮೇಡುಗಳ ಬೀಡು. ಈ ಪೌರುಷಪ್ರಧಾನ ಪ್ರದೇಶಕ್ಕೆ ತಾಗಿದೆ ಖಡಕವಾಸಲಾ. ಇಲ್ಲಿಯೇ ರಾಷ್ಟ್ರೀಯ ರಕ್ಷಣಾ ಅಕಾಡಮಿ ಸ್ಥಾಪಿಸಲ್ಪಟ್ಟಿರುವುದು. 'ಸೇವೆಯೇ ಪರಮಧರ್ಮ' ಎನ್ನುವ ಲೇಬಲ್‌ಗಳನ್ನು ತಮ್ಮ ನೀಟಾದ ವಸ್ತ್ರದ ಮೇಲೆ ಹಚ್ಚಿಕೊಂಡಿರುವ ಸಾವಿರಾರು ಯುವಕರನ್ನು ಶಿಸ್ತುಬದ್ಧ ಯೋಧರನ್ನಾಗಿ ತರಬೇತಿಗೊಳಿಸುತ್ತಿರುವುದು. ಕೇವಲ ಮೂರು ದಶಕಗಳ ಅವಧಿಯಲ್ಲಿ ಈ ಯೋಧರು ಪಡೆದಿರುವ ಪ್ರಶಸ್ತಿಗಳೇ ಈ ಸಂಸ್ಥೆಯ ಸಾಧನೆಯ ಕತೆಯನ್ನು ಹೇಳುತ್ತವೆ. ಇದುವರೆಗೆ ನಡೆದ ಮೂರು ಸಮರಗಳಲ್ಲಿ, ಈ ಸಂಸ್ಥೆಯ ಯೋಧರು ಭಾಗವಹಿಸಿದ್ದು, ಎರಡು ಪರಮವೀರ ಚಕ್ರ ಪ್ರಶಸ್ತಿಗಳನ್ನೂ, ತೊಂಭತ್ತು ಮಹಾವೀರ ಚಕ್ರ ಪ್ರಶಸ್ತಿಗಳನ್ನೂ ೧೦೯ ವೀರ ಚಕ್ರ ಪ್ರಶಸ್ತಿಗಳನ್ನೂ ಮೂವತ್ತೆರಡು ಸೇನಾ ಮೆಡಲ್‌ಗಳನ್ನೂ ೨೮ ನೌಸೇನಾ ಮೆಡಲ್‌ಗಳನ್ನೂ ೨೭ ವಾಯುಸೇನಾ ಮೆಡಲ್‌ಗಳನ್ನೂ ಎರಡು ಶೌರ್ಯ ಚಕ್ರಗಳನ್ನೂ ಒಂದು ಅಶೋಕ ಚಕ್ರ ಹಾಗೂ ಒಂದು ಕೀರ್ತಿ ಚಕ್ರವನ್ನೂ ಪಡೆದಿದ್ದಾರೆ.

'ಸ್ವಾರ್ಥಕ್ಕೆ ಮುಂಚೆ ಸೇವೆ' ಲಾಂಛನ ಹೊತ್ತ ಈ ಸಂಸ್ಥೆ ಮುಂಬೈ ಸರ್ಕಾರ ಉದಾರವಾಗಿ ಕೊಡಮಾಡಿದ ಏಳು ಸಾವಿರ ಎಕರೆ ಭೂಭಾಗದ ಹರಹು ಹೊಂದಿದೆ. ದೇಶದ ವಿವಿಧ ಪ್ರಾಂತ್ಯಗಳಿಂದ ಬಂದ ದೇಣಿಗೆ, ಭಾರತೀಯ ಸೈನಿಕರು ತಮ್ಮ ನಾಡಿನಲ್ಲಿ ಸಲ್ಲಿಸಿದ ಸೇವೆ ನೆನೆದು ಆಫ್ರಿಕದಂಥ ದೇಶಗಳು ನೀಡಿದ ವಿಪುಲ ಕೊಡುಗೆಗಳಿಂದ 'ಎನ್‌ಡಿಎ' ಕಾರ್ಯತತ್ಪರವಾಗಿದೆ. ಎಲ್ಲಕ್ಕಿಂತ ಸುಡಾನ್ ದೇಶದ ಕೊಡುಗೆ ವಿಶೇಷ ಮಹತ್ವದ್ದು.

ಸ್ವಾತಂತ್ರ್ಯಾನಂತರ ಉದ್ಭೂತವಾದ ಹಲವು ಸಮಸ್ಯೆಗಳಲ್ಲಿ ರಾಷ್ಟ್ರ ರಕ್ಷಣೆ ಪ್ರಮುಖವಾದುದಾಗಿತ್ತು. ಸೈನ್ಯದಲ್ಲಿ ಸೇವೆ ಸಲ್ಲಿಸುತ್ತಿದ್ದ

ಹಿರಿಯ ಅಧಿಕಾರಿಗಳು ತಮ್ಮ ತಾಯ್ನಾಡಾದ ಬ್ರಿಟನ್ನಿಗೆ ಹೊರಟು ಹೋದುದು ಹಾಗೂ ವಿಭಜನೆಯ ಕಾರಣದಿಂದಾಗಿ ಕೆಲವು ಉನ್ನತಾಧಿಕಾರಿಗಳು ನೆರೆಯ ದೇಶವನ್ನಾಯ್ಕೆಮಾಡಿಕೊಂಡುದುದು ಇನ್ನೊಂದು ಸಮಸ್ಯೆ ಧಿಢೀರಾಗಿ ಉದ್ಭವಿಸಲು ಕಾರಣವಾಯಿತು. ಅವರ ನಿರ್ಗಮನ ನಿಮಿತ್ತ ಉಚಿತವಾದ 'ನಿರ್ವಾತ' ಪ್ರದೇಶಗಳನ್ನು ಭರ್ತಿಮಾಡುವ ಜವಾಬ್ದಾರಿ ನಮ್ಮದಾಯಿತು. ಅನುಭವೀ ಯೋಧರನ್ನೇ ಈ ಸ್ಥಾನಗಳಿಗೆ ಭರ್ತಿ ಮಾಡಬೇಕು. ಆದರೆ ಅದೆಂತು ಶಕ್ಯ? ಕ್ಲುಪ್ತಕಾಲದಲ್ಲಿ ಸಮಗ್ರವಾದ ಅನುಭವವನ್ನು ಗಳಿಸಿಕೊಳ್ಳುವ ಯೋಜನೆ ರೂಪಿಸಿದ್ದರ ಪರಿಣಾಮವೇ 'ಎನ್.ಡಿ.ಎ'ಯ ಅಸ್ತಿತ್ವ. ಎರಡನೆಯ ವಿಶ್ವಸಮರವು ಕೂಡ ಈ ಬಗೆಯ ಸಂಸ್ಥೆಯ ಅಗತ್ಯವನ್ನು ಸಾರಿತ್ತು. ಹೀಗಾಗಿ ಸಮರದ ಮೂರೂ 'ವಿಂಗ್'ಗಳ ಯೋಧರನ್ನು ಸಿದ್ಧಗೊಳಿಸುವ ಬಗ್ಗೆ ಸಮಗ್ರ ಯೋಜನೆ ತಯಾರಿಸಿ, ೧೯೪೯ರಲ್ಲಿ 'ನ್ಯಾಶನಲ್ ಡಿಫೆನ್ಸ್ ಅಕಾಡೆಮಿ'ಯನ್ನು ಸ್ಥಾಪಿಸಲಾಯಿತು. ಡೆಹರಾಡೂನಿನ ಕ್ಲೆಮೆಂಟ್‌ಟೌನಿನಲ್ಲಿ ಅಕಾಡೆಮಿಯ ತಾತ್ಕಾಲಿಕ ಕಾರ್ಯಾಲಯದ ಪ್ರತಿಷ್ಠಾಪನೆಯಾಯಿತು. ೧೯೫೪ರ ತನಕವೂ ಅದು ಅಲ್ಲಿಯೇ ಇದ್ದು ಕಾರ್ಯ ನಿರ್ವಹಿಸಿತು. ೧೯೫೪ರಲ್ಲಿ ಖಡಕವಾಸಲಾಕ್ಕೆ ಸ್ಥಳಾಂತರಿಸಲ್ಪಟ್ಟಿತು.

೧೯೪೯ರ ಅಕ್ಟೋಬರ್ ಆರನೇ ತಾರೀಕು, ಆಗಿನ ಪ್ರಧಾನಿ ಶ್ರೀ ಜವಹರಲಾಲ ನೆಹರೂ ಅವರು ಎನ್‌ಡಿಎ ಕಟ್ಟಡದ ಶಂಕುಸ್ಥಾಪನೆ ನೆರವೇರಿಸಿದರು. ಆ ದಿನ ಕೊಟ್ಟ ಭರವಸೆಯಂತೆ ಪುನಃ ೧೯೫೫ರ ಜೂನ್ ಐದರಂದು ಅಕಾಡೆಮಿಗೆ ಭೇಟಿ ನೀಡಿ, ತರಬೇತಿ ಪಡೆದು ಹೊರಬಂದ ಅಕಾಡೆಮಿಯ ಮೊದಲ ಸೈನ್ಯ ದಳದವರಿಂದ ವಂದನೆ ಸ್ವೀಕರಿಸಿದರು. ಆಗ ಅವರು ಉಕ್ತಿಸಿದ ಉದ್ಗಾರ "National monument in the making!"

ರಾಷ್ಟ್ರೀಯ ರಕ್ಷಣಾ ಅಕಾಡಮಿಯಲ್ಲಿ ಏಕಕಾಲಕ್ಕೆ ಒಂದು ಸಾವಿರದ ಐದುನೂರಾ ಹದಿಮೂರು ಮಂದಿಗೆ ತರಬೇತಿ ನೀಡಲಾಗುತ್ತಿದೆ. ಇವರಲ್ಲಿ ೧೪೭೭ ಮಂದಿ ಭಾರತದ ವಿವಿಧ ಪ್ರಾಂತ್ಯಗಳಿಗೆ ಸೇರಿದವರು. ಕೇವಲ ಮೂವ್ವತ್ತಾರು ಮಂದಿ ವಿದೇಶಿಯರು. ಅವರಲ್ಲಿ ಅಫಘಾನೀಯರು ೭, ಭೂತಾನಿಗಳು ೨೦, ಲಿಬಿಯನ್ನರು ೩, ಸಿಂಗಾಪುರದವರು ೩, ಟಾಂಜಾನಿಯನ್ನರು ೩.

ಭಾರತದ ಬೇರೆ ಬೇರೆ ಪ್ರಾಂತಗಳಿಂದ ಬಂದು ಇಲ್ಲಿ ತರಬೇತಿ ಪಡೆಯುತ್ತಿರುವವರ ಸಂಖ್ಯೆ ಹೀಗಿದೆ:

ಆಂಧ್ರ ಪ್ರದೇಶ–೭೧
ಅರುಣಾಚಲ ಪ್ರದೇಶ–೧
ಅಸ್ಸಾಂ–೪
ಬಿಹಾರ–೧೦೧
ಚಂಡೀಗಡ–೧೧
ದೆಹಲಿ–೧೫೪
ಗೋವಾ–೩
ಗುಜರಾತ್–೯
ಹರ್ಯಾನಾ–೧೦೨
ಹಿಮಾಚಲ ಪ್ರದೇಶ–೨೮
ಜಮ್ಮು ಮತ್ತು ಕಾಶ್ಮೀರ–೨೧
ಕರ್ನಾಟಕ–೫೪
ಕೇರಳ–೧೩೭
ಲಕ್ಷದೀಪ–೧
ಮಧ್ಯಪ್ರದೇಶ–೨೯
ಮಹಾರಾಷ್ಟ್ರ–೧೧೪
ಮಣಿಪುರ–೪
ಮೇಘಾಲಯ–೩
ಒರಿಸ್ಸಾ–೨೩
ಪಂಜಾಬ–೭೦೩
ಪಾಂಡಿಚೇರಿ–೧
ರಾಜಸ್ಥಾನ–೪೧
ತಮಿಳುನಾಡು–೫೧
ಉತ್ತರ ಪ್ರದೇಶ–೨೪೮
ಪಶ್ಚಿಮ ಬಂಗಾಲ–೬೩
ಒಟ್ಟು ೧೪೭೭

ಭೂಸೈನ್ಯದ ಮೇಜರ್ ಜನರಲ್, ವಾಯುದಳದ ವೈಸ್–ಮಾರ್ಶಲ್, ನೌಕಾದಳದ ರಿಯರ್

ಅಡ್ಮಿರಲ್‌ಗಳು ಸರದಿಯ ಪ್ರಕಾರ ಅಕಾಡೆಮಿಯ ಪ್ರಧಾನಾಧಿಕಾರಿಗಳಾಗಿರುತ್ತಾರೆ. ಅಕಾಡೆಮಿಯ ಆಡಳಿತ ಸಂಬಂಧ ಹಾಗೂ ವಾರ್ಷಿಕ ಸಂಬಂಧ ವಿಷಯ ನೋಡಿಕೊಳ್ಳಲು ಸರ್ಕಾರ ದೇಶೀಯ ವಿದ್ಯಾವಂತ ಪರಿಣಿತ ರನ್ನಾಯ್ಕೆ ಮಾಡಿ ನೇಮಿಸುತ್ತದೆ. ಅವರ ಸಹಾಯಕ ಮಂಡಲದ ಆಯ್ಕೆಯೂ ಸರ್ಕಾರದ್ದೇ.

ಜನವರಿ ಹಾಗೂ ಜುಲೈ ಹೀಗೆ ವರ್ಷದಲ್ಲಿ ಎರಡು ಬಾರಿ ಅಕಾಡೆಮಿಗೆ ಕ್ಯಾಡೆಟ್‌ಗಳನ್ನು ಸೇರಿಸಿಕೊಳ್ಳಲಾಗುತ್ತದೆ. ತರಬೇತಿಗೆ ಆಯ್ಕೆಯಾಗುವ ಪೂರ್ವದಲ್ಲಿ ಹಾಗೂ ಆಯ್ಕೆಯಾದ ತರುವಾಯವೂ ಅಭ್ಯರ್ಥಿ ಕೆಲವು ಅರ್ಹತೆಗಳನ್ನು ಪೊಂದಿರುವುದು ತೀರಾ ಅಗತ್ಯ. ತರಬೇತಿಗೆ ಅರ್ಜಿ ಸಲ್ಲಿಸುವ ಯುವಕ ಹದಿನಾರರಿಂದ ಹದಿನೆಂಟೂವರೆ ವರುಷದೊಳಗಿನ ವಯೋಮಿತಿಯಲ್ಲಿರಬೇಕು. ಪ್ರೈಯರ್ ಸೆಕೆಂಡರಿ ಅಥವಾ ತತ್ಸಮಾನ ಪರೀಕ್ಷೆಗಳಲ್ಲಿ ಆತ ತೇರ್ಗಡೆ ಹೊಂದಿರಬೇಕು. ಕೇಂದ್ರ ಲೋಕ ಸೇವಾ ಆಯೋಗ ಏರ್ಪಡಿಸುವ ಪರೀಕ್ಷೆಯಲ್ಲಾತ ತೇರ್ಗಡೆ ಹೊಂದಿರ-ಬೇಕು. ಆಯ್ಕೆ ಸಮಿತಿಯವರು ತೆಗೆದುಕೊಳ್ಳುವ ಮೌಖಿಕ ಹಾಗೂ ಸಂದರ್ಶನಗಳು ಅವನನ್ನು ಅರ್ಹನೆಂದು ಸಾರಿರಬೇಕು. ಅಕಾಡೆಮಿ ಏರ್ಪಡಿಸುವ ವೈದ್ಯಕೀಯ ಪರೀಕ್ಷೆಯಲ್ಲಿ ಉತ್ತೀರ್ಣನಾಗಬೇಕು. ಇವೆಲ್ಲದರಿಂದ 'ಅರ್ಹ'ನೆಂದು ಸಾರುವುದು ಅಷ್ಟೇನೂ ಸುಲಭವಲ್ಲ. ಒಂದು ವರದಿಯಂತೆ ಸಂದರ್ಶನಕ್ಕೆ ಕರೆದ ೧೦,೦೦೦ ಮಂದಿಯಲ್ಲಿ ಕೇವಲ ೨೫೦ ಮಂದಿ ಆಯ್ಕೆಯಾದರೆಂಬುದು ಈ ಪರೀಕ್ಷೆಗಳು ಎಷ್ಟು ಕಠಿಣ ಎಂಬುದನ್ನು ಸೂಚಿಸುತ್ತದೆ.

ಆಯ್ಕೆಯಾದ ಅಭ್ಯರ್ಥಿಯ ಊಟ, ವಸತಿ, ಹಾಗೂ ವೈದ್ಯಕೀಯ ವೆಚ್ಚ ಎಲ್ಲವನ್ನೂ ಅಕಾಡೆಮಿ ನಿರ್ವಹಿಸುತ್ತದೆ. ಒಂದೇ ಬಾರಿಗೆ ೧೫೧೩ ಮಂದಿಗೂ ಇಲ್ಲಿ ಊಟ ನೀಡುವ ವ್ಯವಸ್ಥೆ ನಿಜಕ್ಕೂ ಆಚ್ಚರಿ ಹುಟ್ಟಿಸುವಂಥಾದ್ದು. ಆದರೆ, ಕೆಲವು ದಿನಗಳಲ್ಲಿ, ಮುಖ್ಯವಾಗಿ ಭಾನುವಾರ ಹಾಗೂ ಮುಖ್ಯ ರಜಾದಿನಗಳಲ್ಲಿ ಇಲ್ಲಿ ಆಹಾರ ಮಿಗುತ್ತದೆ. ಅದಕ್ಕೆ ಕಾರಣವಿಷ್ಟೇ. ಹೊರಗೆ ಹೋಗುವ ಮುನ್ನ ಅಭ್ಯರ್ಥಿಗಳು ನಿರ್ದಿಷ್ಟವಾಗಿ 'ಮೆಸ್'ಗೆ ತಿಳಿಸದೆ ಹೋಗುವುದರಿಂದ ಆಹಾರ ತಯಾರಿಕೆಯ ಸರಿಯಾದ ಅಂದಾಜು ತಿಳಿಯದೆ ಇರುವುದು.

ಅಕಾಡೆಮಿ ನಿಗದಿಪಡಿಸುವ ಮೌಲ್ಯಕ್ಕಿಂತ ಹೆಚ್ಚು ಹಣವನ್ನು ತಮ್ಮ ಮನೆಗಳಿಂದ 'ಪಾಕೆಟ್ ಮನಿ'ಯಾಗಿ ಕ್ಯಾಡೆಟ್‌ಗಳು ತರಿಸಿಕೊಳ್ಳುವಂತಿಲ್ಲ. ತರಬೇತೀ ಯುವಕನ ತಂದೆಯ ಮಾಸಿಕ ಆದಾಯ ಮುನ್ನೂರು ಐವತ್ತು ರೂಪಾಯಿಗಳಿಗೆ ಕಡಿಮೆ ಇದ್ದರೆ ಅಕಾಡೆಮಿಯೇ ಅಂಥ ಕ್ಯಾಡೆಟ್‌ಗಳಿಗೆ 'ಪಾಕೆಟ್ ಮನಿ' ಒದಗಿಸುತ್ತದೆ.

ಅಲ್ಲಿ ಈಗ ತರಬೇತಿ ಹೊಂದುತ್ತಿರುವವರ ಪಾಲಕರ ಮಾಸಿಕ ಆದಾಯದನ್ವಯ ಕ್ಯಾಡೆಟ್‌ಗಳನ್ನು ಹೀಗೆ ವಿಂಗಡಿಸಬಹುದಾಗಿದೆ.

| ಪಾಲಕರ ಮಾಸಿಕ ಆದಾಯ (ರೂ.ಗಳಲ್ಲಿ) | ತರಬೇತಿಯ ಅಭ್ಯರ್ಥಿಗಳ ಸಂಖ್ಯೆ |
|---|---|
| ೧–೧೫೦ | ೨೨ |
| ೧೫೧–೩೦೦ | ೮೨ |
| ೩೦೧–೪೫೦ | ೧೦೨ |
| ೪೫೧–೬೦೦ | ೧೬೭ |
| ೬೦೧–೭೫೦ | ೧೧೪ |
| ೭೫೧–೯೦೦ | ೧೩೦ |
| ೯೦೧–೧೦೫೦ | ೧೩೭ |
| ೧೦೫೧–೧೨೦೦ | ೧೦೫ |
| ೧೨೦೧–೧೩೫೦ | ೪೩ |
| ೧೩೫೧–೧೫೦೦ | ೧೨೬ |
| ೧೫೦೧–೧೬೫೦ | ೪೬ |
| ೧೬೫೧ ರೂ.ಗಳಿಗಿಂತ ಮೇಲೆ | ೪೦೩ |
| ಒಟ್ಟು | ೧೪೭೭ |
| ವಿದೇಶೀ ಕ್ಯಾಡೆಟ್ಸ್ | ೩೬ |
| ಒಟ್ಟು | ೧೫೧೩ |

ಸಾಮಾನ್ಯವಾಗಿ ಈ ಕ್ಯಾಡೆಟ್‌ಗಳು ಸಮಾಜದ ವಿವಿಧ ವರ್ಗಗಳಿಂದ ಬಂದವರಾಗಿರುತ್ತಾರೆ. ಪ್ರತಿ ಬಾರಿಯ ಆಯ್ಕೆಯಲ್ಲೂ ಸಾಮಾನ್ಯವಾಗಿ

ಈ ಸರಾಸರಿ ಸಂಖ್ಯೆಯಲ್ಲಿ ಅಭ್ಯರ್ಥಿಗಳು ಇರುತ್ತಾರೆ: ಸರ್ವೀಸ್ ಪರ್ಸೊನೆಲ್ ಕುಟುಂಬದಿಂದ ಶೇಕಡಾ ೪೫, ಅಧ್ಯಾಪಕರು ಹಾಗೂ ಶಿಕ್ಷಣ ತಜ್ಞರ ಕುಟುಂಬದಿಂದ ೨೫, ವ್ಯವಸಾಯಗಾರರ ಕುಟುಂಬದಿಂದ ೨೦, ವ್ಯಾಪಾರೀ ವರ್ಗದಿಂದ ೨೦, ನ್ಯಾಯವಾದಿಗಳ ಕುಟುಂಬದಿಂದ ೮, ವೈದ್ಯರು ತಂತ್ರಜ್ಞರುಗಳ ಕುಟುಂಬದಿಂದ ೩೫. ಅರ್ಹತೆಯೇ ಪ್ರಧಾನವಾಗಿರುವುದರಿಂದ ಈ ಸಂಖ್ಯೆಗಳು ಗಣನೀಯವಾಗಿ ವ್ಯತ್ಯಾಸವಾಗಿರುವುದುಂಟು.

ಜಾತಿ, ಮತ, ಗುಂಪು, ಕುಲಗಳೆನ್ನುವ ತಾರತಮ್ಯ ಅಕಾಡೆಮಿಯಲ್ಲಿ ಸುಳಿಯುವುದಿಲ್ಲ. ಯೋಗ್ಯತೆಗೆ ತಕ್ಕ ಪುರಸ್ಕಾರ ಕಲಿಕೆಯಲ್ಲಿ ಸರ್ವರಿಗೂ ಪೂರ್ಣ ಪ್ರಮಾಣದ ಸ್ವಾತಂತ್ರ್ಯ, 'ನಾಯಕ'ನಾಗುವ ಅರ್ಹತೆ ಇದ್ದವನಿಗೆ ಆ ದಿಶೆಯಲ್ಲಿಯೇ ತರಬೇತಿ ನೀಡುವಿಕೆ. ಕಾಲಕಾಲಕ್ಕೆ ಸಾಮರ್ಥ್ಯ ಮತ್ತು ಗಳಿಸಿದ ಸಿದ್ಧಿ ಸಾಧನೆಗಳ ಸಮೀಕ್ಷೆ.

ಪ್ರತಿಯೊಬ್ಬ ಕ್ಯಾಡೆಟ್ ಉನ್ನತ ಶಿಕ್ಷಣ ಹೊಂದಿರಬೇಕೆಂಬುದು ಅಕಾಡಮಿಯ ಉದ್ದೇಶ. ದೈಹಿಕ ಶಿಕ್ಷಣದೊಂದಿಗೆ ಪಠ್ಯ ಕ್ರಮಕ್ಕೂ ಪ್ರಾಮುಖ್ಯ ನೀಡಿದೆ ಅಕಾಡಮಿ. ಆದ್ದರಿಂದ ಜವಹರಲಾಲ ವಿಶ್ವವಿದ್ಯಾಲಯದೊಂದಿಗೆ ಅಕಾಡಮಿಯ ಕಳಚಲಾರದ ಬೆಸುಗೆ. ಎನ್. ಡಿ. ಎ. ಯುವಕ ಆ ವಿಶ್ವವಿದ್ಯಾನಿಲಯದ ಪದವೀಧರನಾಗಿರಬೇಕು ಎಂಬುದು ನಿಬಂಧನೆ.

ಮೊದಲೆರಡು ವರುಷಗಳ ತನ್ನ ಅಕಾಡಮಿಯ ವಾಸ್ತವ್ಯದ ತರಬೇತಿ ದಿನಗಳಲ್ಲಿ ಕ್ಯಾಡೆಟ್ ಕೆಲವು ಮೂಲಭೂತ ಸೇವಾ ನಿಯಮಗಳನ್ನು ತಿಳಿಯಲು ಯತ್ನಿಸಬೇಕಾಗುತ್ತದೆ. ಸಮರ ನಡೆದು ಬಂದ ರೀತಿ, ಈಗಿನ ಸಮರಗಳ ವೈಖರಿ. ನಿರೂಪಿತ ವಿಧಿ ಇವುಗಳ ಕುರಿತು ಅರಿವು ಮಾಡಿಕೊಡಲಾಗುತ್ತದೆ. ತರಬೇತಿಯ ಮೂರನೆಯ ವರುಷ ವರ್ಗೀಕರಣ ಮಾಡಲಾಗುತ್ತದೆ. ಸೈನ್ಯದ ಯಾವ ಶಾಖೆಯಲ್ಲಿ ಕ್ಯಾಡೆಟ್ ಆಸ್ಥೆ ಹೊಂದಿದ್ದಾನೋ ಆ ಬಗೆಯಲ್ಲಿ ಅವನನ್ನು ತರಬೇತಿಗೊಳಿಸಲು ಸಜ್ಜು ನಡೆಯುತ್ತದೆ.

ಆಗಾಗ ಹಲವು ಶಿಬಿರಗಳನ್ನು ಅಕಾಡೆಮಿ ಸಂಘಟಿಸುತ್ತದೆ. 'ಗ್ರೀನ್ ಹಾರ್ನ್' ಮತ್ತು 'ರೊವರ್' ಎನ್ನುವ ಎರಡು ಶಿಬಿರಗಳು ಎಲ್ಲರಿಗೂ ಕಡ್ಡಾಯ. ಆರನೆಯ ಹಾಗೂ ಕೊನೆಯ ಅವಧಿಯಲ್ಲಿ ಮೂರು ಬೇರೆ ಬೇರೆ ಪ್ರತ್ಯೇಕ ಶಿಬಿರಗಳು ನಡೆಯುತ್ತವೆ. ಭೂಸೈನ್ಯದ ತರಬೇತಿ ಯುವಕರಿಗಾಗಿ ಟಾರ್ನ್ಹಾ ಶಿಬಿರ; ನೌಕಾದಳದವರಿಗಾಗಿ ಪಾಟರ್‌ಬೇಬಿ ಶಿಬಿರ; ವಾಯುದಳದ 'ಬಡ್ಡಿಂಗ್ ಮಾರ್ಶಲ್'ಗಳಿಗೆ ಗ್ರೀನರ್ ಶಿಬಿರ. ಈ ಶಿಬಿರಗಳಲ್ಲಿ ಅವರು ತಮ್ಮ ವಿಭಾಗದ ಪ್ರಾಥಮಿಕ ಕಾರ್ಯ ಚಟುವಟಿಕೆಯಲ್ಲಿ ಪ್ರತ್ಯಕ್ಷ ಅನುಭವ ಪಡೆದುಕೊಳ್ಳುತ್ತಾರೆ. 'ಯುದ್ಧದ ಬಿಸಿ' ತಾಗಿಸಿಕೊಳ್ಳುವುದು ಇಲ್ಲಿಯೇ!

ರಾಷ್ಟ್ರೀಯ ರಕ್ಷಣಾ ದಳದಲ್ಲಿ ತರಬೇತಿಗೆ ಸೇರುವ ಯುವಕ ಉತ್ತಮ ದೇಹದಾರ್ಢ್ಯ ಹೊಂದಿರಬೇಕು. ಎಂಥ ಕಠಿಣ ಪರಿಸ್ಥಿತಿ ಎದುರಿಸಲೂ ಸಿದ್ಧನಾಗಬೇಕು. ಯಾವುದೇ ತೊಂದರೆಯನ್ನು ಅನುಭವಿಸಲು ಶಕ್ತನಾಗಿರಬೇಕು. ತಾಳ್ಮೆ ಜಾಣ್ಮೆಗಳನ್ನು ರೂಢಿಸಿಕೊಂಡಿರಬೇಕು. ಇದಕ್ಕಾಗಿ ಅಕಾಡಮಿ ಅವನನ್ನು ಸರಿಯಾಗಿ ತಯಾರಿ



"ಅರ್ಜಂಟಾಗಿ ದಿಲ್ಲಿಗೆ ಹೋಗಬೇಕಾಗಿದೆ ಯಾರಾದರೂ ಸತ್ತಲ್ಲಿ ಈ ಶೋಕ ಸಂದೇಶ. ಪ್ರಕಟಣೆಗೆ ಕೊಡಿ."

ಮಾಡುತ್ತದೆ. ಬಾಕ್ಸಿಂಗ್, ಸವಾರಿ, ಈಜು ಮೊದಲಾದ ಕ್ರೀಡೆಗಳ ಕೂಟ ಏರ್ಪಡಿಸಿ ದೈಹಿಕ ಹಾಗೂ ಬೌದ್ಧಿಕ ಶಕ್ತಿ ಉದ್ದೀಪನಕ್ಕೆ ಅಕಾಡೆಮಿ ಯತ್ನಿಸುತ್ತದೆ. ಇಂಟರ್ ಬೆಟಾಲಿಯನ್ ಹಾಗೂ ಇಂಟರ್ ಸ್ಕ್ವಾಡ್ರನ್ ಸ್ಪರ್ಧೆಗನಳ್ನು ಆಗಾಗ ಏರ್ಪಡಿಸುತ್ತದೆ. ಇವುಗಳಲ್ಲಿ ಎಲ್ಲರೂ ಭಾಗವಹಿಸಲೇಬೇಕು. ಇದರೊಂದಿಗೆ ಆಗಾಗ ಹೊರಗಿನ ತಂಡಗಳನ್ನೂ ಆಮಂತ್ರಿಸಿ ಅವರೊಂದಿಗೆ ಆಡಲು ಅವಕಾಶ ಮಾಡಿಕೊಡುತ್ತದೆ.

ಕ್ಯಾಡೆಟ್‌ನ ಸಾಧನೆ, ಶ್ರಮ, ಆರೋಗ್ಯ ಮುಂತಾದವುಗಳನ್ನು ಅಕಾಡೆಮಿ ತೀರಾ ಸಮೀಪದಿಂದ ಗುರುತಿಸುತ್ತದೆ. ಗೈದ ಸಾಧನೆಗೆ ತಕ್ಕ ಪುರಸ್ಕಾರ ನೀಡಲಾಗುತ್ತದೆ. ಅಕಾಡೆಮಿ ರೂಪಿಸಿರುವ ನಿಯಮ ಹಾಗೂ ಶಿಸ್ತನ್ನು ಉಲ್ಲಂಘಿಸಿದವರ ವಿರುದ್ಧ ಸೂಕ್ತಕ್ರಮ ತೆಗೆದುಕೊಳ್ಳಲಾಗುತ್ತದೆ. ಶಿಸ್ತುಬದ್ಧ ಜೀವನದ ಪೂರ್ಣಪಾಠ ಇಲ್ಲಿ ದೊರಕುತ್ತದೆ.

ಕೇವಲ ಒಬ್ಬನನ್ನು ಅಥವಾ ಹಲವರನ್ನು ಉತ್ತಮ ಯೋಧರನ್ನಾಗಿಸುವದು ಮಾತ್ರ ಅಕಾಡೆಮಿಯ ಗುರಿಯಾಗಿಲ್ಲ. ಅಕಾಡೆಮಿಯಲ್ಲಿ ತರಬೇತಿಗಾಗಿ ಸೇರಿದ ಯುವಕನ ಸರ್ವಾಂಗೀಣ ಪ್ರಗತಿಯನ್ನು ಅದು ಬಯಸುತ್ತದೆ. ಕ್ಯಾಡೆಟ್‌ನ ಆಸಕ್ತಿ ಹಾಗೂ ಒಳ್ಳೆಯ ಹವ್ಯಾಸಗಳನ್ನು ಗುರುತಿಸಿ ಅವುಗಳನ್ನು ಪ್ರೋತ್ಸಾಹಿಸಲಾಗುತ್ತದೆ. ಪಠ್ಯೇತರ ಚಟುವಟಿಕೆಗಳಿಗಾಗಿಯೇ ಎರಡು ಕ್ಲಬ್‌ಗಳು ಇಲ್ಲಿವೆ: ಇನ್‌ಡೋರ್ ಮತ್ತು ಔಟ್‌ಡೋರ್ ಕ್ಲಬ್‌ಗಳು. ಪ್ರತಿ ಶನಿವಾರ ಹಾಗೂ ಬುಧವಾರ ಇವುಗಳ ಚಟುವಟಿಕೆ.

ಕೆಲವು ಬುಧವಾರಗಳು ಕ್ಯಾಡೆಟ್‌ಗಳ ಪಾಲಿಗೆ ವಿಶೇಷ ಅನುಭವವನ್ನು ಒದಗಿಸುತ್ತವೆ. ಆ ದಿನ ಹೊರಗಿನಿಂದ ಕೆಲವು ಕಲಾವಿದರನ್ನು ಕರೆಯಿಸಿ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಏರ್ಪಡಿಸಲಾಗುತ್ತದೆ. ಮನೋರಂಜನದೊಂದಿಗೆ ಬೌದ್ಧಿಕ ಶಕ್ತಿ ಉದ್ದೀಪಕ್ಕೂ ನೆರವು ನೀಡುವ ಈ ಬಗೆಯ ಕಾರ್ಯಕ್ರಮಗಳಿಗೆ **ವಿಶೇಷ** ಮಹತ್ವ ಉಂಟು.

ತ್ಯಾಗ, ಸೇವೆಗಳ ಧೀಮಂತ ಮನೋಭಾವ ಬೆಳೆಸುತ್ತಿರುವ ದೇಶದ ಈ ಅಕಾಡೆಮಿ 'ರಾಷ್ಟ್ರದ ರಕ್ಷಣಾ ಸಂಸ್ಥೆ' ಮಾತ್ರವಲ್ಲ ರಾಷ್ಟ್ರ ಪ್ರಜ್ಞಾ ಸಂಸ್ಥೆ ಕೂಡ.

✡

**( ಆಧಾರ: 'ದಿ ಇಲಸ್ಟ್ರೇಡ್ ವೀಕ್ಲಿ'ಯ ಸಂಪಾದಕ ಎಂ. ವಿ. ಕಾಮತರ ಲೇಖನ ಮತ್ತು ಎನ್ ಡಿ ಎ ಯನ್ನು ಸಂದರ್ಶಿಸಿ ಬಂದ ಕೆಲವು ಸ್ನೇಹಿತರ ಅಭಿಪ್ರಾಯಗಳು. )**



**ಸರ್ ಆರ್ಥರ್ ಕಾನನ್ ಡಾಯ್ಲ್** ಎಂಬ ಪ್ರಖ್ಯಾತಲೇಖಕನಿಗೆ ಅಧ್ಯಾತ್ಮದಲ್ಲಿ ಬಹಳ ಒಲವು. ತಾನು ಮೃತಾತ್ಮರೊಂದಿಗೆ ಮಾತನಾಡಬಲ್ಲೆ ಎಂದು ಹೇಳುತ್ತಿದ್ದ ಡಾಯ್ಲ್. ಒಮ್ಮೆ ಆತನ ಮಿತ್ರನೊಬ್ಬನನ್ನು ಆಸ್ಪತ್ರೆಗೆ ಸೇರಿಸಿದ. ಸುದ್ದಿ ಬಂತು. ಪರಿಸ್ಥಿತಿ ತೀರಾ ಚಿಂತಾಜನಕ ಎಂದು ತಿಳಿದರೂ "ನಾಳೆ ಬಂದು ಕಾಣುತ್ತೇನೆ" ಎಂದು ಹೇಳಿದ ಸುದ್ದಿ ತಂದವನಿಗೆ.

"ನಾಳೆ ಅಂದರೆ ತುಂಬಾ ತಡವಾಗಬಹುದು. ಆತ ಬದುಕುಳಿಯುವ ಭರವಸೆ ಇಲ್ಲ ಎನ್ನುತ್ತಿದ್ದಾರೆ ಡಾಕ್ಟರರು," ಎಂದ ಆತ.

"ಹಾಗಾದರೆ, ಮುಂದಿನ ವಾರ ಆತನೊಂದಿಗೆ ಮಾತನಾಡುತ್ತೇನೆ. ನೀನು ಹೋಗು," ಎಂದ ಡಾಯ್ಲ್.

# ಅದೃಷ್ಟದ ಎಂಜಿನ್ನಲ್ಲಿ

ಸ್ವಾತಂತ್ರ್ಯ ಬಯಸಿದ ಎಳೆವಯದ ಕ್ಯೂಬದ ಸಾಹಸಿ ಹುಡುಗರಿಬ್ಬರು ಸಾವನ್ನು ಸಮೀಪಿಸಿಯೂ ಸ್ವತಂತ್ರರಾದ ಕಥೆ

ನಿ. ಕೃ. ರಾಮಶೇಷ

ಇದು ನಂಬಲು ಕಷ್ಟವಾದದ್ದು: ಆಶ್ಚರ್ಯಕರ ಎನ್ನಿ. ಅಂತೂ ಪ್ರತ್ಯಕ್ಷ ನಡೆದದ್ದು. ಆ ಅನುಭವವನ್ನು ಆ ಹುಡುಗನಿಂದ ಕೇಳಿದರೇನೇ ಚೆನ್ನ. ಸ್ವಾತಂತ್ರ್ಯ ಬೇಕು ನಿಜವೆ. ಎಲ್ಲ ಜೀವಿಗಳೂ ಮೊತ್ತ ಮೊದಲು ಬಯಸುವುದು ಅದನ್ನೇ. ಸೆರೆಯ ಬಂಧನ. ಅವು ಬಯಸುವುದಿಲ್ಲ: ಹೊಟ್ಟೆಗಿರದಿದ್ದರೂ ಸರಿಯೆ, ಸ್ವತಂತ್ರನಾಗಿರಬೇಕು ಇದು ಹುಡುಗನ ಒತ್ತಾಸೆ. ಇದಕ್ಕೆ ಆತ ಕೈಕೊಂಡ ರೋಮಾಂಚಕ ಸಾಹಸವಾದರೂ ಎಂಥದು?

*

ಹವಾನಾದ ಜೋಸ್ ಮಾರ್ಟಿ ವಿಮಾನ ನಿಲ್ದಾಣದ ಪರಿಸರ. ಐಬೇರಿಯ ಏರ್‌ಲೈನ್ಸ್ ಡಿ. ಸಿ–೮ ರ ಹತ್ ಜೆಟ್ ವಿಮಾನದ ಎಂಜಿನ್ನಿನ ಆರೋಹಣ ಸದ್ದು ಕಿವಿ ಗಡಚಿಕ್ಕುವ ಹಾಗೆ ನಮಗೆ ಮೊರೆಯುತ್ತಿದೆ. ವಿಮಾನ, ಹಾರುವ ಮುನ್ನ ಓಡುತ್ತ ನಮ್ಮೆಡೆಯ–ಹಸುರು ಹುಲ್ಲಿನ ಓಡು ದಾರಿಯಲ್ಲೆ (ರನ್‌ವೇ) ಬರುತ್ತಿದೆ. ಹುಲ್ಲು, ಸಾಕಷ್ಟು ಎತ್ತರವಾಗಿ ಬೆಳೆದಿದೆಯೆಂಬುದೆ ನಮಗೂ ಧೈರ್ಯ. ವಿಮಾನ ಬರುವುದನ್ನೇ ಕಾತುರದಿಂದ ನಿರೀಕ್ಷಿಸುತ್ತ ಹುಲ್ಲಿನ ಮೇಲೇ ಮಲಗಿದ್ದೇನೆ. ಅದೆಷ್ಟು ತಿಂಗಳುಗಳಿಂದಲೊ ಏನೋ ನಾವು–ನಾನು, ನನ್ನ ಗೆಳೆಯ ಜಾರ್ಜ್ ಪಿರೆಜ್ ಬ್ಲಾಂಕೊ–ಯೋಜನೆ ಹಾಕುತ್ತಿದ್ದದ್ದು. ವಿಮಾನದ ಚಕ್ರಗಳು ಇರುತ್ತವೆಯಲ್ಲ, ಅವು ಮುದುರಿಕೊಳ್ಳುವಲ್ಲಿ ಇರುವ ಕಿರಿದಾದ ಸ್ಥಳದಲ್ಲಿ ಅಡಗಿಕೊಂಡು ಕಳ್ಳತನದಿಂದ ತಪ್ಪಿಸಿಕೊಳ್ಳಬೇಕು ಇದೇ ನಮ್ಮ ಯೋಜನೆ. ಅದಕ್ಕೆ ಅವಕಾಶ? ವಾರಕ್ಕೊಮ್ಮೆ, ಹವಾನಾದಿಂದ ಮಾದ್ರಿಡ್‌ಗೆ ತಡೆರಹಿತ ವಿಮಾನ ಹಾರಾಟವಿದೆ. ಐಬೇರಿಯದ ನಂಬರ್ ೬೦೨ರ ಜೆಟ್ ವಿಮಾನ. ಅದೇ ನಮ್ಮ ಕಳ್ಳ ಪ್ರಯಾಣಕ್ಕೆ ತಕ್ಕುದಾದದ್ದು, ಇದೇ ನಾವು ಕೈಗೊಂಡ ನಿರ್ಧಾರ. ಈಗ, ಜೂನ್ ತಿಂಗಳ ೩ನೆ ದಿನಾಂಕ ಆದ ಇಂದು ಮಧ್ಯಾಹ್ನ. ಆ ಬಿಸಿಲು ಕಟ್ಟ... ಗಳಿಗೆ ಬಂದಿದೆ.

ಇದು ಒಂದು ಪ್ರಾಣಾಂತಿಕ ಅದೃಷ್ಟ ಪಂದ್ಯವೇ. ಕೈಗೊಳ್ಳುವ ನಾವೋ ... ಎಳೆಯರೇ. ನನ್ನ ಹೆಸರು ಅರ್ಮಾಂಡೊ ಸೊಕರ‍್ರಾಸ್ ರ‍್ಯಾವಿರೇಜ್. ನನ್ನ ವಯಸ್ಸು ೧೭.

ನನ್ನ ಮಿತ್ರ ಜಾರ್ಜ್, ೧೬ರ ವಯಸ್ಸಿನವನು. ಆದರೆ, ನಮ್ಮ ನಿರ್ಧಾರವೋ ಅಚಲ, ದೃಢ ವಾಗಿತ್ತು. ಕ್ಯೂಬಾದ ಉಸಿರು ಕಟ್ಟಿಸೋ ವಾತಾ ವರಣದಿಂದ ಪಾರಾಗಲೇ ಬೇಕು. ಅಂತೆಯೆ ನಮ್ಮ ಈ ಯೋಜನೆಯನ್ನು ಅತ್ಯಂತ ಜಾಗ ರೂಕತೆಯಿಂದ ನಿಯೋಜಿಸಿಕೊಂಡೆವು.

ಜೊಸ್ ಮಾರ್ಟಿ ವಿಮಾನ ನಿಲ್ದಾಣ ನಮಗೆ ತಕ್ಕ ಆಸರೆಯ ತಾಣ ಎಂದೆನ್ನಿಸಿತು. ಅಲ್ಲಿಂದ ಹೊರಡುವ ವಿಮಾನಗಳು ಏರುವ ಮೊದಲು, ಓಡುದಾರಿಯಲ್ಲಿ (ರನ್ ವೇ) ೩,೫೦೦ ಮೀಟರ್ ದೂರದಂಚಿನವರೆಗೆ ಓಡುತ್ತವೆ. ಅಲ್ಲಿ ಅವು ತಿರುಗುವಾಗ, ಒಂದೆಡೆ ಚಣಕಾಲ ನಿಂತು ತಿರುವು ತೆಗೆದುಕೊಳ್ಳುವಾಗ, ಅವುಗಳ ಎಂಜಿನ್ನಿನ ನಿಯಂತ್ರಕ ಕವಾಟದ ಕಡೆಯಿಂದ ಕಿವಿ ಮೊರೆ ಯುವ ಕೀರಲು ಧ್ವನಿ! ಹೊರಡಿಸಿ ಮೇಲೇ ರುತ್ತವೆ. ಅಲ್ಲೆ, ಆ ಜಾಗದಲ್ಲೆ ನಾವು ಗಕ್ಕನೆ ಏರಬೇಕಾದದ್ದು ! ನಾವು ರಬ್ಬರ್ ಷೂಗಳನ್ನು ಹಾಕಿಕೊಂಡಿದ್ದೇವೆ, ವಿಮಾನದ ಚಕ್ರಗಳ ಮೇಲೆ ಹಾಗೇ ತೆವಳಿ ಒಳಸರಿಯಲು . ಅನುಕೂಲ ಆಗಲಿ ಅಂತ. ಚಕ್ರ ಮುದುರಿಕೊಳ್ಳುವ ಬದಿ ಯಿರುವ ಕಿರಿದಾದ ಜಾಗ, ನಮಗೆ ಭದ್ರವಾಗಿ ಆಸರೆ ನೀಡಬಲ್ಲುದೆಂಬುದೆ ನಮಗಿರುವ ನಂಬಿಕೆ. ನಾಲ್ಕು 'ಜೆಟ್ ಎಂಜಿನ್ನುಗಳೂ ಒಮ್ಮೆಲೇ ಮೊರೆಯುವಾಗ, ನಮ್ಮ ಕಿವಿ ಏನಾಗಬೇಕು? ಅಂತೆಯೇ ಅದನ್ನು ನಿವಾರಿಸಲೋಸುಗ ಹತ್ತಿ– ಯನ್ನು ಕಿವಿಯೊಳಗೆ ಅದುಮಿ ಇರಿಸಿಕೊಂಡಿದ್ದೇವೆ, ಆ ಕೀರಲು ಧ್ವನಿ ನಮ್ಮ ಕಿವಿ ಕಿವುಡುಗೊಳಿಸ– ದಿರಲೆಂದು!

ಆದರೂ... ಆದರೂ ಏನೋ ಹೆದರಿಕೆ. ಬೆವರು ಕಿತ್ತು ಬರುತ್ತಿದೆ ನಮಗೆ! ಅಬ್ಬಬ್ಬ! ದೈತ್ಯ ವಿಮಾನ ಓಡುದಾರಿಯಲ್ಲಿ ಹೇಗೆ ಧಾವಿಸಿ ಬರುತ್ತಿದೆ! ಆ ಜೆಟ್ ಎಂಜಿನ್ನಿನಿಂದ ಹೊರಡುವ



"ಭುಸ್! ಭುಸ್!" ಸದ್ದಿನೊಡಗೂಡಿ ಹೊರ ಬರುವ ಹವೆ, ನಮ್ಮ ಸುತ್ತ ಇರುವ ಹುಲ್ಲನ್ನು ಸವರಿಕೊಂಡೇ ಬರುತ್ತಿವೆ(ಅವರೂ, ನಾವು ಕಾಣಿಸು ವುದಿಲ್ಲ. ಅಷ್ಟು ಎತ್ತರವಾಗಿ ಬೆಳೆದಿದೆಹುಲ್ಲು!).

"ಜಾರ್ಜ್, ಓಡು, ಬೇಗ ಓಡೋಣ ಬಾ" ಎಂದು, ನಾನು ವಿಮಾನ ಬರುತ್ತಿದ್ದಂತೆಯೇ ಜಾರ್ಜ್‌ನನ್ನು ಕೂಗಿದೆ. ಬಗ್ಗಿಕೊಂಡೇ ವೇಗ ವಾಗಿ ಓಡಿದ ನಾವು. ವಿಮಾನ ತಿರುವು ತೆಗೆದು ಕೊಳ್ಳುವ ಮುಂಚೆ ಕ್ಷಣ ಕಾಲ ನಿಂತದ್ದು ಕಂಡು ವಿಮಾನದ ಎಡ ಭಾಗದ ಚಕ್ರಗಳೆಡೆ ಓಡಿದೆವು. ಚಕ್ರದ ಟಾಯರ್‌ಗಳು, ೧೦೭ಗ ಸೆಂ. ಮೀ. ಸುತ್ತಳತೆ ಇರುತ್ತವೆ. ಅವನ್ನು ಜಾರ್ಜ್ ದೇಕಿ-ಕೊಂಡು, ತೆವಳುತ್ತ ಒಳಹೊಕ್ಕ. ನಾನು ನೋಡು ತ್ತೇನೆ. ಇಬ್ಬರಿಗಾಗುವಷ್ಟು ಸ್ಥಳವೇ ಅಲ್ಲಿಲ್ಲ! "ನಾನು ಬೇರೆ ಕಡೆ ನೋಡುತ್ತೇನೆ, ನೀನು ಇಲ್ಲೆ ಅಡಗಿಕೊ" ಅಂತ ಕೂಗಿ, ಹೇಳಿದೆ. ತಕ್ಷಣವೆ ಕಾತುರದಿಂದ, ಓಡಿ, ವಿಮಾನದ ಬಲ ಭಾಗದ ಚಕ್ರಗಳ ಮೇಲೆ, ಹಾಗೆಯೆ ಅವು ಮುದುರಿ-ಕೊಳ್ಳಲಿರುವ ಒಳಬದಿಯತ್ತ ತೆವಳಿದೆ. ಥಟ್ಟನೆ, ಅಲ್ಲೊಂದು ಪನೊ ಓಡಿ ಸಿಕ್ಕಿತು. ಹಾಗೂ ಹೀಗೂ ನುಸುಳುತ್ತ, ಒದ್ದಾಡುತ್ತ, ಅಲ್ಲಿನ ಆ ಇಕ್ಕಟ್ಟಾದ ಜಾಗದಲ್ಲಿ ಕುಳಿತುಕೊಳ್ಳಲೆತ್ನಿಸಿದೆ. ಇದೆಲ್ಲ ಕೇವಲ ಒಂದೆರಡು ನಿಮಿಷಗಳೊಳಗೇ ನಡೆದುಹೋಯಿತು.

ನಾನು ಕುಳಿತ ಜಾಗ ಪೂರ್ತಿ ಕತ್ತಲಾಗಿರ ಲಿಲ್ಲ. ಅಲ್ಲೊಂದು ಇಲ್ಲೊಂದು ಎಲ್ಲೊ ತೂರಿ ಬರುತ್ತಿದ್ದ ಬೆಳಕಿನ ಕಿರಣಗಳು. ನಾನೂ ಏರಿದೆ ನಲ್ಲ, ವಿಮಾನ ಕೂಡಲೆ ಗಟ್ಟಿಯಾಗಿ ಕಿರಲಿ, ಹೊರಡಲಾರಂಭಿಸಿತು. ಅಬ್ಬಾ! ನಾನು ಹೊರ ಬಿದ್ದೇನೊ ಎಂದು ಒಮ್ಮೆಲೇ ಅಂಜಿದೆ. ಎಂಥದೊ ಯಂತ್ರದ ಭಾಗವೊಂದು ನನಗೆ ಹಿಡಿತಕ್ಕೆ ಸಿಕ್ಕಿತು. ಗಬಕ್ಕನೆ ಹಿಡಿದೆ! ವಿಮಾನ ಏರಿತು. ಎಂಜಿನ್ನುಗಳ ಮೊರೆಯುವ ಧ್ವನಿ ನನ್ನನ್ನು ಕಿವುಡಾಗಿಸುವ ಭ್ರಮೆ ತರಿಸಿತು.

ಈಗ ನಾವು ಗಾಳಿಯಲ್ಲಿ ಹಾರುವ ಜೀವಿ ಗಳಾಗಿದ್ದೇವೆ. ಎಂಥ ದೈತ್ಯ ಚಕ್ರಗಳಿವು, ಅಬ್ಬ! ವಿಮಾನವೇರಿತಲ್ಲ, ಅದರಿಂದ ಒಮ್ಮೆಲೇ ಉತ್ಪನ್ನ ವಾದ ತೀಕ್ಷ್ಣವಾದ ಶಾಖ, ಆ ಚಕ್ರಗಳ ಬಳಿಕ್ಕೆ ಎಳೆದುಕೊಂಡು ನಾನು ಇದ್ದೆಡೆಗೆ ಹತ್ತಿರ ಬರುತ್ತಿ ದ್ದಂತೆಯೆ ನಾನು ನನ್ನ ಶರೀರವನ್ನು ನೇರಾಗಿ, ಚಾಚಲೆತ್ನಿಸಿದೆ. ಕೊನೆಗೆ ಬೇಸರದಿಂದ ನಾನು ಅವುಗಳ ಕಡೆ, ನನ್ನ ಕಾಲಿನಿಂದ ಜೋರಾಗಿ ತಳ್ಳಿದೆ ಅವದ್ದಾಗಲೆಂದು! ಅವರೆ ಆ ಚಕ್ರ ಗಳೋ? ನನ್ನನ್ನು ಹಾಗೆಯೆ ಬಲವಾಗಿ ಅದು ಮುತ್ತಿ ನನ್ನನ್ನು, ಕುಳಿತಿದ್ದ ಜಾಗದ ಮೇಲ್ಭಾಗಕ್ಕೆ ಒಸುಕಿಬಿಟ್ಟವು! "ಹೋದೆನೋ ಸತ್ತೆ!" ಎಂದು ಕೊಂಡೆ. ಅಷ್ಟರಲ್ಲೆ ಚಕ್ರಗಳು ಅವುಗಳ ಸ್ವಸ್ಥಾನ ದಲ್ಲಿ ಕುಳಿತವು. ಆಗ್ಗೆ ಒಂದು ಕಿರಿದಾದ ಬಾಗಿಲು ಬಾಗಿಲು ಬಂದು ಅವುಗಳನ್ನು ಮುಚ್ಚಿಬಿಟ್ಟಿತು. ನನ್ನನ್ನೀಗ ಸಂಪೂರ್ಣ ಕತ್ತಲು ಆವರಿಸಿದೆ. ೧೬೩ ಸೆಂಟಿಮೀಟರ್ ಎತ್ತರವಿರುವ ನನ್ನ ಶರೀರ ವನ್ನು ಅಕ್ಷರಶಃ ಮೂಟೆ ಹಾಗೆ ತುರುಕಿ. ಇಲ್ಲಿ ಇರುವ ರಕ್ಷಿತ ವಿದ್ಯುತ್ ಕೊಳವೆ, ಯಂತ್ರಗಳು, ಇನ್ನಾವುದೊ ಉಪಕರಣಗಳು, ಇವೆಲ್ಲವರ ನಡುವೆ ಇಕ್ಕಟ್ಟಿನಲ್ಲಿ ಹಾಗೆಯೆ ಇದ್ದೆ. ಆಗ, ಸ್ವಲ್ಪ ನನ್ನ ಮೆದುಳು ಚುರುಕಾಗಿ ಕೆಲಸ ಮಾಡಿತೆನ್ನಿ. ವಿಮಾನ ಏರುವ ಮೊದಲೆ, ನಾನು ನನ್ನ ಸೊಂಟದ ಸುತ್ತ ಒಂದು ಹಗ್ಗ ಬಿಗಿದುಕೊಂಡಿದ್ದೆ, ಸಮಯಕ್ಕೆ ನೆರವಾದೀತು ಎಂದು! ಈಗ ನನ್ನನ್ನು ಯಾವು ದಾದರೂ ಒಂದು ಯಂತ್ರದ ಹಿಡಿದ ಆ ಹಗ್ಗ ದಿಂದ ಬಿಗಿಯಾಗಿ ಬಿಗಿದುಕೊಂಡುಬಿಡಲೆ ಅಂದರೆ, ಅದು ಹೇಗೆ ಸಾಧ್ಯ? ಆದರೂ ಪ್ರಯತ್ನ ಬಿಡಲಿಲ್ಲ. ಹಾಗೂ ಹೀಗೂ ಒದ್ದಾಡಿ ಆ ಕೈ ಈ ಕೈ ಭಾಗ ಇಕ್ಕಟ್ಟಲ್ಲೆ ಅತ್ತಿತ್ತ ಓಡಾಡಿಸಿ. ನನ್ನ ಸೊಂಟದ ಸುತ್ತ ಬಿಗಿದಿದ್ದ ಹಗ್ಗದ ಇನ್ನೊಂದು ತುದಿಯನ್ನು ನನ್ನ ಮೇಲೇ ಕಾಣಿಸುತ್ತಿದ್ದ ಒಂದು ಒಂದು ಪೈಪಿಗೆ ಬಿಗಿದು ಜೋರಾಗಿ ಎಳೆದೆ, ಈಗ ಪರವಾಗಿಲ್ಲ ಎನ್ನಿಸಿತು.

ಆಮೇಲೇನಾಯಿತು ಗೊತ್ತೆ? ನಾನಿನ್ನೂ ಉಸಿರು ತಗೊಳ್ಳುವುದಕ್ಕಿಲ್ಲ, ವಿಮಾನದ ಚಕ್ರ ಗಳೆ ಮುಂಬಾಗಿಲು ಇದ್ದಕ್ಕಿದ್ದಂತೆಯೆ ತೆರೆದು ಕೊಳ್ಳಬೇಕೆ? ಅರೆ, ಇದೇನಪ್ಪ ಗ್ರಹಚಾರ! ಅಯ್ಯೋ ನನ್ನ ಪ್ರೀತಿಯ ಜೀವವೇ, ಅಂದು ಕೊಂಡೆ. ಅಗಾಧವಾದ ಕೂಪದಡಿ ಜೀವವೊಂದಲ್ಲಿ ತೂಗಾಡುತ್ತಿದೆ, ಮೇಲೆ ವಿಮಾನ ಹಾರುತ್ತಿರು ವುದರಿಂದ, ಅಲ್ಲವೆ? ಈಗ ನಾನು ಸಿಕ್ಕಿ ಹಾಕಿ

...ಆದರೂ. ವಿಮಾನವನ್ನು ಮತ್ತೆ ಕ್ಯೂಬಾದ ... ತಿರುಗಿಸಿ. ಕ್ಯಾಸ್ಟ್ರೋವಿನ ಪೋಲೀಸ್ ... ನನ್ನನ್ನು ಒಪ್ಪಿಸಿ ಬಿಡುತ್ತಾರಷ್ಟೆ!

ಚಕ್ರಗಳು ಮತ್ತೆ ಒಳಕ್ಕೆ ಮುದುರಿಕೊಳ್ಳು ... ನಂತೆ. ನಾನು ಮೇಲೆ ನೋಡಿದೆ. ... ಉಪಕರಣಗಳ ನಡುವೆ, ನನಗೆ ಇನ್ನೂ ... ಸ್ಥಳ ಇದೆಯೆಂದು ತೋರಿತು. ನಾನು ಕ್ಷೇಮದಿಂದಲೇ ಮುದುರಿಕೊಂಡಿರುವಷ್ಟು ... ಸಿಕ್ಕಿತು. ಹಾಗೆಯೆ ನನ್ನ ಶರೀರವನ್ನು ಅತ್ತ ಚಾಚಿದೆ. ಉಸಿರಾಡಲು ಸ್ವಲ್ಪ ಕಷ್ಟವೆ! ಆದರೂ ... ಭದ್ರವಾದ ಕೋಣೆಯೆ ... ಅಷ್ಟೇ ಸಾಕು.

... ನಿಮಿಷ ಕಳೆದ ನಂತರ ಚಕ್ರಗಳನ್ನು ... ನೋಡಿದೆ. ಕಾವು ಕಡಿಮೆಯಾಗಿ, ತಣ್ಣಗಾಗಿದ್ದುವು. ಒಂದೇ ಸಮನಾದ ಕಿವಿಗಡಚಿಕ್ಕುವ ಎಂಜಿನ್ ಸದ್ದು ಕೇಳಿ ಕೇಳಿ ತಲೆ ಚಿಟ್ಟು ಹಿಡಿದು, ... ಜೇಬಿನಿಂದ ಒಂದೆರಡು ಆ್ಯಸ್ಪಿರಿನ್ ಮಾತ್ರೆ ತೆಗೆದು ನುಂಗಿದೆ. ನನ್ನ ಈ ... ಅಂಗಿ. ಷರಾಯಿ ಬದಲು. ಉಲ್ಲನ್ ಪ್ಯಾಂಟ್. ... ಅಂಗಿ ಧರಿಸಿದ್ದರೆ ಬೆಚ್ಚಗಿರುತ್ತಿದ್ದೆನೇನೊ ಎಂದೆನ್ನಿಸಿತು. ಹಾಗೇ ಕಣ್ಣುಮುಚ್ಚಿದೆ...

೯೦೪ನೆಯ ನಂಬರ್ ಜೆಟ್ ವಿಮಾನ ವಿಭಾಗದ ಉಡ್ಡಾಣಾಧಿಕಾರಿಗಳ ವಿಶ್ರಾಂತಿ ಗೃಹದಲ್ಲಿ ಹಾಗೇ ಒರಗಿಸಿಕೊಂಡಿದ್ದಾನೆ, ೪೪ರಪ್ರಾಯದ ಅಧಿಕಾರಿ ಕ್ಯಾಪ್ಟನ್ ಪ್ಯಾಲೆಂಟೀನ. ವಾರದೆಲ್ಲಾ ರಾತ್ರಿಯೆಲ್ಲ ವಿಮಾನ ಹಾರಾಟವೆ. ೮ ಘಂಟೆ ... ನಿಮಿಷಗಳ ಅವಧಿಯ ಪ್ರಯಾಣ. ಹಾಗೇ ಮಗ್ನನಾದ. ಏನೇನೋ ಯೋಚನೆ ಅವನಿಗೆ!... ವಿಮಾನ ಹಾರುವಾಗ, ಚೆನ್ನಾಗಿಯೆ ಇತ್ತು ಅಲವೆ? ೧೪೭ ಜನ ಪ್ರಯಾಣಿಕರು, ವಿಮಾನದ ಸಿಬ್ಬಂದಿ ೧೦, ಘಂಟೆಗೆ, ೨೭೪ ಕಿ.ಮೀ. ವೇಗದಲ್ಲೆ ವಿಮಾನ ಏರಿದ್ದು! ಆದರೆ... ಎಲ್ಲಿ ತೊಂದರೆ ಕಾಣುತ್ತಿದೆ, ತಿಳಿಯಲೊಲ್ಲದೆ? ವಿಮಾನ ಸಲಕರಣೆಯ ವಿಭಾಗದಲ್ಲಿ ಇರುವ ಮೂರು ಕೆಂಪು ... ಒಂದು ಇನ್ನೂ ಉರಿಯುತ್ತಲೇ ಇದೆ. ವಿಮಾನವಿಳಿಯುವಾಗ ಚಕ್ರಗಳಿರುತ್ತವಲ್ಲ, ಅವು ಮುದುರಿಕೊಳ್ಳುವಲ್ಲಿ ಏನೋ ತೊಂದರೆ ಕಂಡು ಬರುತ್ತಿರುವಂತಿದೆ!

ನಿಯಂತ್ರಿತ ಗೋಪುರದಿಂದ ಸುದ್ದಿ ಬಂದಿತು. "ನಿಮಗೆ ಏನಾದರೂ ತೊಂದರೆ ಇದೆಯೇನು?"

ಕ್ಯಾಪ್ಟನ್ ಉತ್ತರಿಸಿದ, "ಹೌದು, ವಿಮಾನದ ... ಭಾಗದ ಚಕ್ರ ಸರಿಯಾಗಿ ಒಳಕ್ಕೆಳೆದುಕೊಂಡಿಲ್ಲ ಎಂಬುವರ ಸೂಚನೆಯಿದೆ. ನಾನು ಪುನಃ ಪರಿಶೀಲಿಸುತ್ತೇನೆ."

ಕ್ಯಾಪ್ಟನ್ ನೇರವಾಗಿ ವಿಮಾನ ಚಕ್ರಗಳು ಅವು. ವಿಮಾನವಿಳಿಯುವಾಗ ಹೇಗೆ ಹೊರ ಚಾಚಿಕೊಳ್ಳುವೋ ಹಾಗೆ ಚಾಚುವಂತೆ ಮಾಡಿದ! ಮತ್ತೆ ಅವು ಒಳಕ್ಕೆಳೆದುಕೊಳ್ಳುವಂತೆ ಸಲಕರಣೆಯ ನೆರವಿನಿಂದ ನಿಯಂತ್ರಿಸಿದ. ಓಹೊ! ಈಗ ಕೆಂಪು ದೀಪ– ಆರಿಹೋಗದ್ದು– ಆರಿತು! ಸಧ್ಯ, ಎಲ್ಲ ಸರಿಯಾಗಿ ಇದೆ! ಎಂದು ತೃಪ್ತಿಯ ಉಸಿರೆಳೆದ. (ಆಗಲೇ ಆರ್ಮೆಂಡೊನಿಗೂ ಸಾಕಾಗುವ ಸ್ಥಳ ವಿಮಾನ ಚಕ್ರದ ಮೇಲ್ಭಾಗದಲ್ಲಿ ದೊರೆತು. ಅತ ತೆವಳಿದ್ದು. ಅದರಿಂದಲೆ ಚಕ್ರ ತಾನಾಗಿಯೆ ಸರಿಯಾದ ರೀತಿಯಲ್ಲಿ ಮುದುರಿಕೊಂಡಿತು. ಇದು ಕ್ಯಾಪ್ಟನ್ನನಿಗೆ ಹೇಗೆ ಅರಿವಾದೀತು?)

ಎಲ್ಲಿಯೊ ಯಂತ್ರ ವಿಭಾಗದಲ್ಲಿ ಸ್ವಲ್ಪ– ತೊಂದರೆ ಇದ್ದೀತು ಎಂದು ತನ್ನ ಆಲೋಚನೆಯಿಂದ ಅದನ್ನು ತಳ್ಳಿಹಾಕಿದ ಕ್ಯಾಪ್ಟನ್. ವಿಮಾನ ಎತ್ತರದಲ್ಲಿ ಹಾರುತ್ತಿದೆ. ಆ ಬಗ್ಗೆ ಗಮನವೀಯ ಬೇಕಾದ್ದು ಅವನ ಕರ್ತವ್ಯ. ವಿಮಾನದ ಕಾರ್ಯ ನಿರ್ವಹಿಸುತ್ತ ಮನಸ್ಸನ್ನು ಕೇಂದ್ರೀಕರಿಸಿದ. ವಿಮಾನ ಏರಿದ ನಂತರ ಮತ್ತೆ ಸಮತಲಕ್ಕೆ ಬಂದಂತೆ, ಹೊರಗಣ ಉಷ್ಣಾಂಶ ಗಮನಿಸಿದ ಪ್ಯಾಲೆಂಟೀನ; ಅದು ಶೂನ್ಯಕ್ಕಿಂತ ೪೦ ಡಿಗ್ರಿ ಕೆಳಗಡೆಯಿದ್ದಿತು! ಅಂಥ ಶೈತ್ಯ ಹೊರಗಡೆ ಇದ್ದದ್ದು! ವಿಮಾನದೊಳಗಡೆ, ಯಥಾಪ್ರಕಾರ, ಗಗನ ಸಖಿಯರು ತಮ್ಮ ಮೃದು ಮಾತುಗಳೊಡನೆ, ಪ್ರಯಾಣಿಕರಿಗೆ ರಾತ್ರಿಯೂಟ ನೀಡುವುವರಲ್ಲಿ ತೊಡಗಿದ್ದರು.

*

ಅಸ್ಥಿಪಂಜರವನ್ನು ಮುತ್ತಿಡುವ ಚಳಿ! ನಡುಕವನ್ನು ತಡೆಯಲು ಸಾಧ್ಯವೆ ಆಗುತ್ತಿಲ್ಲ! ಗಡಗಡ ನಡುಗುತ್ತಲೆ ಅಚ್ಚರಿಯಿಂದ ಆಲೋಚಿಸಿದೆ. ಜಾರ್ಜ್ ಹೇಗಿದ್ದಾನೆಯೊ... ಅವನೂ

ವಿಮಾನದ ಒಳಭಾಗದ ಚಕ್ರದಡಿ ಸರಿಯಾಗಿ ಅಡಗಿಕೊಂಡನೋ ಇಲ್ಲವೋ... ಮತ್ತೆ ಅದೇ ಚಳಿ! ಈ ದುರವಸ್ಥೆ ನನಗೇಕೆ ಬಂತು? ಎಂಬ ಯೋಚನೆಯೂ ಬೆಂಬತ್ತಿ ಬಂದಿತು. ನನ್ನ ಪ್ರೀತಿಯ ಅಮ್ಮ-ಅಪ್ಪ, ಒಲವಿನ ಗೆಳತಿ ಮೇರಿಯ ಎಸ್ಥರ್... ನಾನು ಹೀಗೆ ಮಾಡಿದೆನೆಂಬುದು ಅವರಿಗೆ ತಿಳಿದುಬಂದರೆ ಏನು ಮಾಡಿ ಬಿಡುತ್ತಾರೆಯೊ ಎಂಬ ಕುತೂಹಲ, ಗಾಬರಿ!

ನನ್ನ ತಂದೆ ಕೊಳಾಯಿಗಾರ. ಕೊಳಾಯಿ ಮಾಡುವ ಕೆಲಸ ಅತನದು. ನನಗೆ ನಾಲ್ಕು ಜನ ಅಣ್ಣ ತಮ್ಮಂದಿರು. ಒಬ್ಬಳೇ ತಂಗಿ. ಬಹುಪಾಲು ಕ್ಯೂಬನ್ನರು ಬಡವರೇ. ಅವರಲ್ಲಿ ನಾವೂ ಒಬ್ಬರು. ಹವಾನಾದಲ್ಲಿ ನಮ್ಮ ಮನೆ ಎಷ್ಟಿದೇಂದ್ರೆ ದೊಡ್ಡದಾದ ಒಂದು ಕೋಣೆ. ಅಷ್ಟೆ. ಅದರಲ್ಲಿ ನಾವು ಹನ್ನೊಂದು ಜನ ಇದ್ದೆವು. ಆಹಾರಕ್ಕೆ ಪಡಿತರ! ಎಷ್ಟು ಬೇಕೊ ಅಷ್ಟು ಸಿಗುವಂತಿಲ್ಲ! ಉಸಿರು ಬಿಗಿ ಹಿಡಿಯುವ ವಾತಾವರಣ! ಎಲ್ಲದರಲ್ಲೂ ಬಿಗಿತ. ನನಗಿದ್ದ ಒಂದೇ ಖುಷಿ. ಸಂತೋಷ ಎಂದರೆ, ಚೆಂಡಾಟವೊಂದು; ಹಾಗೂ ಮೇರಿಯಾಳ ಸಂಗದ ಕಡಲಂಚಿನ ಗೋಡೆಗಳ ಮಗ್ಗುಲಲ್ಲಿ ಓಡಾಡುತ್ತಿದ್ದುದು. ಇಷ್ಟೆ.

ನಾನು ಹದಿನಾರರ ವರ್ಷದವನಿದ್ದಾಗ, ಸರ್ಕಾರ ನನ್ನನ್ನು ತಾಂತ್ರಿಕ ಶಾಲೆಗೆ ಕಳಿಸಿತು. ಮತಾನ್‌ಜಾಸ್ ಪ್ರಾಂತ್ಯಕ್ಕೆ ಸೇರಿದ ಬೆಟನ್‌ಕೋರ್ಟ್ ಎಂಬ ಹಳ್ಳಿಯಲ್ಲಿ ಆ ತರಬೇತಿ ಶಾಲೆಯಿದ್ದುದು. ಆ ಹಳ್ಳಿ ಕಬ್ಬಿಗೆ ಹೆಸರುವಾಸಿ. ಶಾಲೆಯಲ್ಲಿ ನಮಗೆ ಬೆಸುಗೆ ಹಾಕುವವರ ಬಗೆಗೆ ತರಬೇತಿ ನೀಡುತ್ತಿದ್ದರು. ಆದರೇನು? ತರಗತಿಯೇನೂ ವೇಳೆಗೆ ತಕ್ಕಂತೆ ಕ್ರಮಬದ್ಧವಾಗಿ ನಡೆಯುತ್ತಿರಲಿಲ್ಲ. ಇದರ ಜತೆಗೆ, ನಾವು ಕಬ್ಬಿನ

ಗದ್ದೆಯ ಕೆಲಸಕ್ಕೂ ಹೋಗಿ, ದುಡಿಯಬೇಕಿತ್ತು. ಇದು ಸರ್ಕಾರದ ಹುಕುಮು.

ನಾನಿನ್ನೂ ಚಿಕ್ಕವನಲ್ಲವೆ? ಪ್ರತಿಯೊಬ್ಬನ ಜೀವನವನ್ನೂ ಎಲ್ಲ ರೀತಿಯಲ್ಲೂ ನಿಯಂತ್ರಿಸುತ್ತಿದ್ದ ವಾತಾವರಣ, ಆ ದೇಶ, ಕಂಡು ಕಂಡು ರೋಸಿಹೋದೆ, ಬೇಸತ್ತೆ. ಸದಾ ನನಗೊಂದೇ ಕನಸು: "ನನಗೆ ಸ್ವಾತಂತ್ರ್ಯ ಬೇಕು." ಅಮೇರಿಕದಲ್ಲಿ ನನಗೊಬ್ಬ ಚಿಕ್ಕಪ್ಪನಿದ್ದ. ನಾನು ಚಿತ್ರ ಕಲಾವಿದ ಆಗಬೇಕು, ಅಮೇರಿಕದಲ್ಲಿ ನೆಲಸಬೇಕು. ಎಂಬೆಲ್ಲ ಆಶಯ ಬೆಳಸಿಕೊಂಡಿದ್ದೆ. ಸಾವಿರಾರು ಜನ ಕೂಬನ್ನರು ಅಮೇರಿಕಕ್ಕೆ ಹೋಗಿ, ಚೆನ್ನಾಗಿ ಬದುಕುತ್ತಿದ್ದುದನ್ನು ನಾನು ಕೇಳಿ ತಿಳಿದಿದ್ದೆ. ಇಲ್ಲಿಂದ ಹೊರಬೀಳಬೇಕು, ಇದೇ ನನ್ನ ಆಲೋಚನೆ. ಆದರೆ, ಹೇಗೆ? ಪ್ರತಿನಿತ್ಯ, ಹವಾನಾದಿಂದ ಮಿಯಾಮಿಗೆ ಎರಡು ವಿಮಾನಗಳಲ್ಲಿ ಜನರು ಪ್ರಯಾಣ ಮಾಡುತ್ತಿದ್ದರು. ಆದರೆ, ಆ ವಿಮಾನಗಳಲ್ಲಿ ಟಿಕೆಟ್ಟಿಗೋಸುಗ ಕಾಯುತ್ತಿರುವವರು ಎಷ್ಟು ಇದ್ದರು ಗೊತ್ತೇನು? ೮ ಲಕ್ಷದಷ್ಟು!! ಅಲ್ಲದೆ, ನೀವು ಹವಾನಾ ಬಿಡುತ್ತೇವೆಂದು ಬರೆದುಕೊಟ್ಟರೆ ತೀರಿತು. ಸರಕಾರ ನಿಮ್ಮನ್ನು ಕೇವಲ ಹುಳುವಿನಂತೆ ನೋಡಿಕೊಳ್ಳುತ್ತದೆ ಅಲ್ಲದೆ ಇಲ್ಲಿ ನಡೆಸಬೇಕಾದ ಬದುಕು ಇನ್ನೂ ಭಾರವಾಗಿ, ತಡೆಯಲಸಾಧ್ಯವಾಗುತ್ತದೆ!

ನನ್ನ ನಂಬುಗೆ, ಆಕಾಂಕ್ಷೆಗಳೆಲ್ಲ ನಿಷ್ಫಲ ಆದವು. ಅನಂತರ ಒಂದು ದಿನ, ಹವಾನಾದ ಚೆಂಡಾಟದ ಪಂದ್ಯವೊಂದರಲ್ಲಿ ಜಾರ್ಜ್‌ನನ್ನು ಕಂಡದ್ದು. ಪಂದ್ಯ ಮುಗಿಯಿತು. ಸ್ನೇಹ ಮೊಳೆತಿತು. ನಾವು, ಅದು ಇದು ಮಾತಾಡಿದೆವು. ನಮ್ಮ ನಡುವಣ ಮಾತಿನಲ್ಲಿ ನನಗೆ ತಿಳಿಯಿತು, ನನ್ನ ಹಾಗೆಯೆ ಜಾರ್ಜ್ ಕೂಡ ಕ್ಯೂಬಾದಲ್ಲಿರಲು ಬಯಸುತ್ತಿಲ್ಲ ಎಂದು.

"ಇಲ್ಲಿನ ಸರ್ಕಾರದ ರೀತಿ, ಜನರಿಗೆ ಕೊಡುವ ತಪ್ಪು ತಿಳುವಳಿಕೆಗಳು, ಆಡಳಿತ ಕ್ರಮ, ನಿನ್ನ ಸ್ವಾತಂತ್ರ್ಯವನ್ನು ಶಾಶ್ವತವಾಗಿ ಕಸಿದುಕೊಂಡು ಬಿಡುತ್ತದೆ, ಅಷ್ಟೇ ನೋಡು," ಎಂದು ಜಾರ್ಜ್ ಕ್ಯೂಬಾ ಆಡಳಿತವನ್ನು ಕುರಿತು ನಿಂದಿಸಿದ. ಅದು ನನಗಿನ್ನೂ ಅಪ್ಯಾಯಮಾನ ಆಯಿತು. ನನ್ನ ವಿಚಾರ ಸರಣಿಗೆ ಬೆಂಬಲಿಗನೂ ಇದ್ದಾನೆ ಎಂಬ ಸಮಾಧಾನ ಕೂಡ ಆಗಿ, ನಾನು ಸಂತಸಗೊಂಡೆ.

ಜಾರ್ಜನೇ ನನಗೆ ತಿಳಿಸಿದ್ದು, ವಾರಕ್ಕೆ ಒಮ್ಮೆ ಹವಾನಾದಿಂದ ಮಾದ್ರಿಡ್‌ಗೆ ವಿಮಾನ ಹೋಗುತ್ತದೆ ಎಂಬುದನ್ನು. ಎರಡು ಬಾರಿ ನಾವಿಬ್ಬರೂ ವಿಮಾನ ನಿಲ್ದಾಣಕ್ಕೆ ಹೋದೆವು. ಅಲ್ಲಿ ನಮ್ಮ ಕಳ್ಳ ಪಯಣಕ್ಕೆ ತಕ್ಕ ಪೂರ್ವಭಾವೀ ಪರಿಶೀಲನೆ ನಡೆಸಿದೆವು. ಒಮ್ಮೆಯಂತೂ ಡಿಸಿ–೮ರ ವಿಮಾನವೊಂದು ಮೇಲೇರಿ, ನಮ್ಮ ತಲೆಯ ಮೇಲೇ ಹಾದು ಹೋಯಿತು. ವಿಮಾನದ ಚಕ್ರಗಳಿನ್ನೂ ಕೆಳಗೇ ಇದ್ದು, ವಿಮಾನದಡಿಯು, ಅವುಗಳ ಒಳಗಿನ, ಎಲ್ಲ ವಿಭಾಗ, ಉಪಕರಣಗಳೂ ಸ್ಪಷ್ಟವಾಗಿ ಕಾಣಿಸುತ್ತಿದ್ದವು. ನಾನು ಜಾರ್ಜ್‌ನೊಡನೆ ಹೇಳುತ್ತಿದ್ದುದು ನನಗೀಗಲೂ ಮತ್ತೆ ಮತ್ತೆ ನೆನಪಾಗುತ್ತಿದೆ. "ಅದರಲ್ಲಿ ನನಗಾಗುವಷ್ಟು ಜಾಗವಿದೆ: ಅಷ್ಟು ಸಾಕು."

ಇವೆಲ್ಲ ಆಗ ಇದ್ದ ಯೋಚನೆಗಳೇ. ಇದೀಗ, ಅಟ್ಲಾಂಟಿಕ್ ಸಾಗರದ ಮೇಲೆ, ಭೂಮಿಯಿಂದ ೮೦೦೦ ಮೀಟರಿಗಿಂತ ಹೆಚ್ಚು ಎತ್ತರದಲ್ಲಿ ವಿಮಾನ ಹಾರಿಹೋಗುತ್ತಿರುವಾಗ, ಆ ಎಲ್ಲ ಹಿಂದಿನ ಯೋಚನೆಗಳೂ ಮರುಕಳಿಸುತ್ತಿವೆ!! ಈಗಾಗಲೇ ಒಂದು ತಾಸಿಗೂ ಹೆಚ್ಚು ಕಳೆಯಿತು, ನಾವು ಆಕಾಶದ ಪರಿಸರದಲ್ಲೆ ಇರುತ್ತ. ಎತ್ತರದಲ್ಲಿ ಆಮ್ಲಜನಕ - ಕಡಿಮೆ ಆದ್ದರಿಂದ, ನನಗೆ ತಲೆತಿರುಗುತ್ತ ಎತ್ತೆತ್ತಲೋ ತೂಗುತ್ತಿರುವಂತಿದೆ. ಕೇವಲ ಕೆಲವೇ ಗಂಟೆಗೆ ಮುಂಚೆ, ನಾನು, ಜಾರ್ಜ್ ಮನೆಯಿಂದ ಸೈಕಲ್ಲೇರಿ ಸುರಿಯುತ್ತಿದ್ದ ಜಡಿಮಳೆಯನ್ನು ಲೆಕ್ಕಿಸದೆ ಧಾವಿಸಿ, ವಿಮಾನ ನಿಲ್ದಾಣಕ್ಕೆ ಬಂದದ್ದು; ಓಡುದಾರಿಯ ಹುಲ್ಲಲ್ಲಿ ಅಡಗಿಕೊಂಡದ್ದು, ಎಲ್ಲ ನಿಜತಾನೆ? ಜಾರ್ಜ್ ಹೇಗಿದ್ದಾನೊ? ಚೆನ್ನಾಗಿದ್ದರೆ ಸಾಕು. ನನ್ನ ಅಪ್ಪ– ಅಮ್ಮಂದಿರೊ? ಒಲವಿನ ಗೆಳತಿ ಮೇರಿಯ?... ಇದೇನಿದೇನು?... ಅಷ್ಟೇ ನನಗೆ ನೆನಪು ಮರುಕ್ಷಣವಲ್ಲೆ ನನಗೆ ಪ್ರಜ್ಞೆ ತಪ್ಪಿಹೋಯಿತು.

ಸೂರ್ಯ ಉದಯಿಸಿದ. ಅಟ್ಲಾಂಟಿಕ್ ಸಾಗರದ ತೆರೆಗಳಿಂದ ಸೂರ್ಯ, ದೊಡ್ಡ ಚಿನ್ನದ

ಗೋಲವಂತೆ ವಿಜೃಂಭಿಸಿದ., ಡಿಸಿ– ೮ರ ಫಲಕ ವಿಮಾನ ಮೈಕಟ್ಟಿನ ಬೆಳ್ಳಿ–ಕೆಂಪು ಬಣ್ಣದ ಅಂಚೆಲ್ಲ ಸೂರ್ಯನ ಕೆಂಗಿರಣಗಳಿಗೆ ಮಿರು ಮಿರುಗಿ ಹೊಳೆಯಿತು. ಯುರೋಪಿನ ಪೋರ್ಚು ಗಲ್ ತೀರ ಪ್ರದೇಶವನ್ನು ದಾಟಿತು ವಿಮಾನ. ೮,೫೫೦ ಕಿಲೋಮೀಟರ್ ದೂರದ ದೀರ್ಘ ಹಾರಾಟದ ಮುಗಿಯುವ ಸೂಚನೆ ಕಾಣಬರುತ್ತಿ ರುವಂತೆ ಕ್ಯಾಪ್ಟನ್ ವ್ಯಾಲೆಂಟೀನ ಮಾದ್ರಿದ್‌ನ ಬಾಲೂ ಜಾಸ್ ವಿಮಾನ ನಿಲ್ದಾಣದೆಡೆಗೆ ವಿಮಾನ ವನ್ನು ಇಳಿಸಲಾರಂಭಿಸಿದ. ಪ್ರಯಾಣಿಕರಿಗೆಲ್ಲ ಸರಿ ಯಾದ ಸೂಚನೆ ನೀಡಲಾಯಿತು. ಸ್ಥಳೀಯ ಕಾಲ ಮಾನದ ಪ್ರಕಾರ, ಬೆಳಿಗ್ಗೆ, ೮ ಘಂಟೆಗೆ ಸರಿಯಾಗಿ ವಿಮಾನ, ಮಾದ್ರಿದ್ ತಲುಪಬೇಕು. ವಿಮಾನ ದೊಳಗಡೆ, ಸಂಪರ್ಕ ಸಾಧನದ ಮೂಲಕ, ಮತ್ತೊಮ್ಮೆ ಪ್ರಯಾಣಿಕರಿಗೆ ತಿಳಿಸಲಾಯಿತು. "ಹವಾಮಾನ ಹಿತಕರವಾಗಿದೆ, ಬಿಸಿಲು ಹಿತ ವಾಗಿದೆ. ಮಾದ್ರಿದ್, ಇದೋ ಬಂದಿತು" ಎಂದು. ಮಾದ್ರಿದ್ ಸನಿಹದ ಟೊಲೆಡೊವನ್ನು ವಿಮಾನ ದಾಟಿ ಹೋಗುತ್ತಿದ್ದಂತೆ ಕ್ಯಾಪ್ಟನ್ ವಿಮಾನ, ಇಳಿಯುವ ಉಪಕರಣವನ್ನು ಕೆಳಗಿಳಿಸಿದ. ಯಾವಾ ಗಲೂ ಹೀಗೆಯೆ; ಅದೇ ರೂಢಿ, ವಿಮಾನ ಕೆಳಗಿಳಿ ಯುತ್ತಿದ್ದಂತೆ ಚಕ್ರಗಳು ಓಡುವ ದಾರಿಯನ್ನು ಮೆಲ್ಲಗೆ ಬಡಿದು ಮುಂದುವರಿದವು. ೩೦೦ ಕಿಲೋಮೀಟರ್ ವೇಗದಲ್ಲಿ ಚಕ್ರ ತಿರುಗಿದವು. ಇದೀಗ ವಿಮಾನ ಕೊನೆಯ ನಿಲುಗಡೆ ಬಂದಿತು. ಡಿ.ಸಿ. ೮; ನೆಲಕ್ಕೆ ತಲುಪಿದ್ದು, ಘಂಟೆಗೆ ಸುಮಾರು ೨೨೫ ಕಿಲೋಮೀಟರ್ ವೇಗದಲ್ಲಿ ಬೆಂಕಿಯ ಡಿಕ್ಕಿ, ಹೊಗೆ ಬುಸ್ಸೆಂದು ಹೊರಬಿದ್ದಿತು.

ಕೆಳಗಿಳಿದು, ನೆಲ ತಲುಪಿ, ನಿಲ್ಲುವಿಕೆಯಲ್ಲಿ ಯಾವುದೇ ಅಪ್ಪಳಿಕೆ ಆಗಲಿ, ಪುಟ ನೆಗೆದಂತೆ ಆಗಲಿ, ಇರಲಿಲ್ಲ. ಎಂದಿನಂತೆಯೆ ಸರಾಗ ವಾಗಿತ್ತು. ಹಾಗೆಯೆ ಒಮ್ಮೆ ವಿಮಾನದೊಳಗೆ ಕಣ್ಣು ಹಾಯಿಸಿ, ಎಲ್ಲ ವೀಕ್ಷಿಸಿದ ಕ್ಯಾಪ್ಟನ್ ಮೆಟ್ಟಿಲಿಳಿದ. ವಿಮಾನದ ಮೂತಿಯ ಬಳಿನಿಂತ. ಕಾರು ಬಂದು, ಅವನನ್ನು ಇತರ ಸಿಬ್ಬಂದಿಯ ಸಮೇತ ಕರೆದೊಯ್ಯಬೇಕು. ಇದು ರೂಢಿ.

ಹತ್ತಿರದಲ್ಲೆ, ಧೊಪ್ಪನೆ ಒಮ್ಮೆಲೆ–ನೀರೊಳಗೆ ಪುಳಕ್ಕನೆ ಜಿಗಿದೊಲ್ಲದೆ ಹಾಗೆ ಬಿದ್ದ ಸದ್ದು! ಆರ್ಮೆಂಡೋನ ತಣ್ಣಗೆ ಮಂಜುಗಡ್ಡೆಯಂತಾದ ಶರೀರ, ವಿಮಾನದ ಮುಂದಿನ ಗಾರೆ ನೆಲದ ಮೇಲೆ ಬಿದ್ದಿತು! ರಕ್ಷಣಾದಳದ ಸಿಪಾಯಿ, ಜೋಸ್ ರೋಪ ಮೋರೆಂಜಾನೆ, ಕುಸಿದು ಬಿದ್ದ ವಸ್ತುವಿನತ್ತ ಮೊತ್ತ ಮೊದಲಿಗೆ ಓಡಿ ಹೋಗಿ ನೋಡಿದ. ಅವನ ಕಣ್ಣಿಗೆ ಕಂಡದ್ದು ಮೂಟೆ ಅಲ್ಲ, ಎಳೆಯ ನೊಬ್ಬನ ದೇಹ! "ಅವನ ಬಟ್ಟೆ ಮುಟ್ಟಿನೋಡಿದೆ. ಅವು ಮಂಜಿನಿಂದ ಮರಗಟ್ಟಿದ್ದವು" ಎಂದು ನುಡಿದ ರೋಪ್. "ಅಯ್ಯೋ ಎಂಬ ಆರ್ತ ಧ್ವನಿ ಯೊಂದೆ ಅವನು ಕಿರಲಿದ್ದು, ಭಯ ಹುಟ್ಟಿಸೋ ಚೀತ್ಕಾರ ಅದು. ಅಷ್ಟೇ ಆ ಹುಡುಗ ಮಾಡಿದ ಕೆಲಸ" ಎಂದು ತಿಳಿಸಿದ ಸಿಪಾಯಿ.

ಆರ್ಮೆಂಡೋವಿನ ಪ್ರಕರಣ ಎಲ್ಲರಿಗೂ ಮಿತಿ ಮೀರಿದ ಅಚ್ಚರಿ ತಂದಿತು. ಮೈಜುಮ್ಮೆನ್ನಿ ಸಿತು! ವ್ಯಾಲೆಂಟೀನ್, "ಮೊದಲು ನನಗೆ ನಂಬಲಿಕ್ಕೆ ಆಗಲಿಲ್ಲ" ಎಂದು ನುಡಿದು, "ಅನಂತರ, ಅವನನ್ನು ನೋಡ ಹೋದೆ. ಅವನ ಮೂಗು, ಬಾಯಿಗಳ ಮೇಲೆ ಮಂಜುಗಡ್ಡೆಗಟ್ಟಿತ್ತು. ಅವನ ಕುತ್ತಿಗೆಯೊ …ಸೆಟೆದು ಬಿಟ್ಟಿತ್ತು," ಅಂದ. ಪ್ರಜ್ಞಾಹೀನ ನಾಗಿದ್ದ ಆ ಹುಡುಗನನ್ನು ಹಾಗೆಯೆ ಮೂಟೆ ತರಹ ಕಟ್ಟಿಕೊಂಡೆ; ಅಂಬುಲೆನ್ಸ್‌ನೊಳಗೆ ಸಾಗಿಸಿ ದರು, ವಿಮಾನದಳದವರು, ಹಾಗೂ ಇತರ ಸಿಬ್ಬಂದಿ. ಕ್ಯಾಪ್ಟನ್ ಪದೇ ಪದೇ ಹೇಳಿಕೊಳ್ಳು ತ್ತಿದ್ದ: "ಇದು ಅಸಾಧ್ಯ, ಕನಸಿನಲ್ಲಿಯೂ ಊಹಿಸ ದಷ್ಟು ಅಸಾಧ್ಯ!" ಸುತ್ತಲಿದ್ದವರಿಗೂ ಅದು ಕೇಳಿಸಿದಾಗ, ಕ್ಯಾಪ್ಟನ್ನನ ಮಾತು, ಅಕ್ಷರಶಃ ಸತ್ಯ ಎನ್ನಿಸಿತು.

*

ಪ್ರಜ್ಞೆ ತಪ್ಪಿದ ಮೇಲೆ, ನನಗೆ ಮತ್ತೆ ಎಚ್ಚರ ವಾದದ್ದು ವಿಮಾನ ನಿಲ್ದಾಣದಲ್ಲಿ ನೆಲಕ್ಕೆ ಧೊಪ್ಪನೆ ಬಿದ್ದಾಗ ಮಾತ್ರ, ಆ ನೆನಪೆ ನನ್ನ ಮೊದಲ ನೆನಪು. ಮತ್ತೆ ಕಣ್ಣು ಕತ್ತಲಿಟ್ಟಿತ್ತು. ಪುನಃ ಎಚ್ಚರಗೊಂ ಡಾಗ, ನಾವು ಯಾವುದೋ ಆಸ್ಪತ್ರೆಯಲ್ಲಿದ್ದೇನೆ, ಎಂದು ಅರಿವಾಯಿತು. ಜೀವಿಸಿದ್ದೇನೆ ಅನ್ನುವುದ ಕ್ಕಿಂತ ಹೆಚ್ಚು ಕಡಿಮೆ ಶವಪ್ರಾಯವೆ ಆಗಿದ್ದೆ! ನಾನು ನನಗೆ ತಿಳಿಯಿತು, ಮಾದ್ರಿದ್‌ನ ಗ್ರಾನ್‌ಡಿಲ್ ಬೆನಿಫಿಷೆನ್ಸಿಯಾ ಆಸ್ಪತ್ರೆಯಲ್ಲಿ ನಾನು ಇದ್ದೇನೆ,

ಎಂದು. ಡಾಕ್ಟರರು ನನ್ನ ಮೈ ಉಷ್ಣಾಂಶ ಪರೀಕ್ಷಿಸಿದಾಗ, ಅದೆಷ್ಟು ಇಳಿದಿತ್ತು ಎಂದರೆ, ಉಷ್ಣಮಾಪಕದಲ್ಲಿ ಅದನ್ನು ಗುರುತಿಸಲಾಗಲೇ ಇಲ್ಲ!

ಮೊತ್ತಮೊದಲು ನಾನು ಕೇಳಿದ್ದದು: "ನಾನು ಸ್ಪೈಯಿನ್‌ನಲ್ಲಿದ್ದೇನೆಯೆ?" ಆ ಮೇಲೆ, ಪುನಃ ಕೇಳಿದೆ: "ನನ್ನ ಮಿತ್ರ ಜಾರ್ಜ್ ಎಲ್ಲಿ?" (ವಿಮಾನದ ಚಕ್ರಗಳನ್ನೇರಲಾರದೆ ವಿಮಾನದ ಬಿರುಸಾದ ಗಾಳಿಗೆ ಎಸೆಯಲ್ಪಟ್ಟು, ಕ್ಯೂಬಾ ಪೋಲೀಸರಿಗೆ ಸಿಕ್ಕಿದನೋ ಎಂಬುದೇ ನನ್ನ ಭಯ, ಸಂಶಯ.)

ಅನಂತರ, ಡಾಕ್ಟರು ಹೇಳಿದರು: "ಬೇರೊಬ್ಬ ರೋಗಿ ತೀವ್ರವಾದ ಶೈತ್ಯದಿಂದಾಗಿ ಶಸ್ತ್ರ ಚಿಕಿತ್ಸೆಯನ್ನನುಭವಿಸುತ್ತಿದ್ದಾನೆ" ಎಂದು. (ಅದಂತೂ ಇನ್ನೂ ಸೂಕ್ಷ್ಮ ಆದದ್ದು. ಅತಿ ಜಾಗರೂಕತೆಯಿಂದ, ಹವಾಮಾನ ನಿಯಂತ್ರಿಸಿದ ಪರಿಸರದಲ್ಲಿ ಆ ಶಸ್ತ್ರಚಿಕಿತ್ಸೆಯನ್ನು ನಡೆಯಿಸಬೇಕಾಗುತ್ತದೆ). ಅವನಿಗಿಂತ ನೀನೆಷ್ಟೋ ಪಾಲು ಮೇಲು" ಎಂದ ಡಾಕ್ಟರರ ಮೃದುಮಾತು. ನನಗೆ ಸ್ವಲ್ಪ ನೆಮ್ಮದಿಯಿತ್ತಿತ್ತು. ಡಾಕ್ಟರರ ಹೆಸರು ಜೊಸ್ ಮಾರಿಯ ಪಜರೇಸ್ ಅಂತ.




"ನೀವು ಅಮ್ಮನಿಗೆ ಹೊಸಾ ಚಪ್ಪಲ್ ತರುವದು ಬೇಡಾ!!.. ನಾನೇ ನಾಳೆ ತರ್ತೀನಿ... ..."

ಒಂದು ದಿನ ಟೆಲಿಫೋನ್ ಮಾಡಿದರು. ನನ್ನನ್ನು ಅಮೇರಿಕಕ್ಕೆ ಬಂದು ತಮ್ಮೊಡನಿರುವಂತೆ ಕರೆದರು. ಒಲವಿನ ನುಡಿಗಳು ಅವು. ನೊಂದ ನನ್ನ ಎಳೆ ಮನಸ್ಸಿಗೆ ಚೇತನ ನೀಡಿದುವು ಎಂದು ಹೇಳಬೇಕೆ? ಅಂತಾರಾಷ್ಟ್ರೀಯ ರಕ್ಷಣಾಸಮಿತಿ ನನಗೆ ರಹದಾರಿಯ ವ್ಯವಸ್ಥೆ ಮಾಡಿತು. ಇನ್ನೂ ಅನೇಕ ರೀತಿಯ ನೆರವನ್ನು ನೀಡಿತು.

ನಾನು ಅಮೇರಿಕಕ್ಕೆ ಬಂದೆ. ಈಗ ಇಲ್ಲಿ ಚೆನ್ನಾಗಿದ್ದೇನೆ. ನನ್ನ ಆರೋಗ್ಯ ಉತ್ತಮಗೊಂಡಿದೆ. ಚಿಕ್ಕಪ್ಪನ ಜತೆ ಇದ್ದೇನೆ. ಸ್ಕೂಲಿಗೆ ಸೇರಿ, ಇಂಗ್ಲೀಷನ್ನು ಕಲಿಯುತ್ತಿದ್ದೇನೆ. ಇನ್ನೂ ಕಲಿಯ ವ್ಯಾಮೋಹ ಹೋಗಿಲ್ಲ. ನಾನು ಚಿತ್ರಗಳ ತಯಾರಿಕೆಯ ಕುಶಲ ಕಲೆಯಲ್ಲಿ ಉತ್ತಮ ಮಟ್ಟದ ಕಲಾವಿದನಾಗುವ ಬಯಕೆ. ಇನ್ನೂ ಹಸಿರಾಗಿದೆ. ಆಗಾಗ್ಗೆ ನನಗೆ, ಗೆಳೆಯ ಜಾರ್ಜನ ನೆನಪಾಗುತ್ತದೆ, ನಿಟ್ಟುಸಿರುದುತ್ತೇನೆ. ನಮಗಿಬ್ಬರಿಗೂ ನಾವು ಕೈಕೊಂಡ ಕಾರ್ಯ, ಜೀವಕ್ಕೇ ಗಂಡಾಂತರ ತರುವಂಥದೆಂದು ತಿಳಿದಿತ್ತು. ಹಾಗೂ ತಪ್ಪಿಸಿಕೊಳ್ಳುವ ಸನ್ನಾಹದಲ್ಲಿ ನಾವು ಸಿಕ್ಕಿ ಬಿದ್ದರೆ ನಮ್ಮನ್ನು ಸಾಯಿಸಿ ಬಿಡುವರೆಂದೂ ನಾವು ನನ್ನನ್ನು ಪ್ರೀತಿಯಿಂದ ನೋಡಿಕೊಂಡ. ನಿಷ್ಣಾತ ವೈದ್ಯ. ಆತ ಹೇಳಿದರು, "ನನ್ನ ಉಳಿವಿಕೆ, ವೈದ್ಯಕೀಯ ಪವಾಡ" ಎಂದು. ನಾನೂ ಅಷ್ಟೆ. ಜೀವ ಒಂದ ಉಳಿದದ್ದು: ಅದೃಷ್ಟ ಹಾಗೂ ಯಾವುದೋ ದೈವೀ ಚೇತನದ ಕೃಪೆ–ಎಂದುಕೊಂಡಿದ್ದೇನೆ.

ನಾನು ಕ್ಯೂಬಾದಿಂದ ತಪ್ಪಿಸಿಕೊಂಡು ಕೆಲವು ದಿನ ಕಳೆಯಿತು. ಆಸ್ಪತ್ರೆಯಲ್ಲಿಯೇ ಓಡಾಡುತ್ತಿದ್ದೆ. ಜಾರ್ಜನ ಬಗ್ಗೆ ಹೆಚ್ಚು ಮಾಹಿತಿ. ದೊರೆಯಲಿಲ್ಲ. ಹಾಗಾದರೆ, ಅವನೇನಾದನೊ? ನಾನು ಆಟ ಆಡುವಷ್ಟು ತ್ರಾಣ ಪಡೆದಿದ್ದೆ. ಪೋಲೀಸ್ ರಕ್ಷಣಾದಳದ ಕೆಲವರು ನನ್ನ ಮಿತ್ರರಾದರು. ಅವರಿಗೆ ನನ್ನ ಅದ್ಭುತ ಸಾಹಸ ಕಂಡು ತುಂಬ ಅಚ್ಚರಿ, ಸಂತೋಷ! ಅವರೊಂದಿಗೆ ಇಸ್ಪೀಟಾಡುತ್ತಿದ್ದೆ. ಎಲ್ಲೆಡೆಯಿಂದಲೂ ಬರುವ ರಾಶಿಗಟ್ಟಲೆ ಪತ್ರಿಕೆ, ಪತ್ರಗಳನ್ನು ಓದುತ್ತಿದ್ದೆ. ನನ್ನ ಚಿಕ್ಕಪ್ಪ ಇದ್ದಾರೆ. ಅಂತ ಹೇಳಿದ್ದೆನಲ್ಲ. ಅವರ ಹೆಸರು ಎಲಿಯೊ ಫರ್ನಾಂಡಿಸ್. ಅವರಿಗೆ ನಾನು ಇಲ್ಲಿ ಇರುವುದು ತಿಳಿಯಿತೆಂದು ತೋರುತ್ತದೆ.

ತಿಳಿದಿದ್ದೇವೆ! ಆದರೆ, ಅದೃಷ್ಟ ಅವಕಾಶ, ಏಕೆ ಬಿಡಬೇಕು? ಅಂತ ಕೂಡ ಅನ್ನಿಸಿತು. ಇದೊಂದು ಸುವರ್ಣಾವಕಾಶ ದೊರೆಯಿತೆಂತಲೇ ನಮ್ಮ ಭಾವನೆ!

•

ಡಗ್ಲಾಸ್ ಏರ್‌ಕ್ರಾಫ್ಟ್ ಕಂಪೆನಿಯ ಉಪಾಧ್ಯಕ್ಷ ಚಾರ್ಲ್ಸ್‌ಗ್ಲಾಸ್ಗೊ– ಎಂಬುವವ. ಅದೇ ಸಂಸ್ಥೆಯೆ ಡಿಸಿ–೮ರ ವಿಮಾನಗಳನ್ನು ತಯಾರಿಸುವುದು. ಅವನು ಹೇಳುವುದಿದು: "ಎಲ್ಲಿಯೊ ಕೋಟಿಗೊಬ್ಬರಿಗೆ ಈ ರೀತಿ ಉಳಿಯಲು ಅವಕಾಶ ದೊರೆಯುವುದೇನೋ ಅಷ್ಟೆ. "ಏಕೆಂದರೆ, ವಿಮಾನದ ದೊಡ್ಡ ದೊಡ್ಡ ಚಕ್ರಗಳು ಒಳಕ್ಕೆಳೆದುಕೊಂಡಾಗ, ಮನುಷ್ಯ ಅಪ್ಪಚ್ಚಿಯಾಗದೆ ಉಳಿದಾನೆಯೆ? ಚಕ್ರಗಳು ಎಳೆದುಕೊಳ್ಳುವಲ್ಲಿ, ೯ ವಿಭಾಗದಲ್ಲಿ ಒಬ್ಬ ಸಾಮಾನ್ಯ ಗಾತ್ರದ ಮನುಷ್ಯ ಇರಲು ಸ್ಥಳವಿರುವುದೇನೋ ನಿಜ. ಎಂದು ಗ್ಲಾಸ್ಗೊ ಮುಂದುವರಿದು ಹೇಳುವುದಿದು "ಅವನು ಮೈಯನ್ನು ಹೇಗೆಂದರೆ ಹಾಗೆ ತಿರುಚಿಕೊಂಡು, ಸನ್ನಿವೇಶಕ್ಕೆ, ಸ್ಥಳಕ್ಕೆ ತಕ್ಕಂತೆ ಹೊಂದಿಕೊಳ್ಳುವಂತಿರಬೇಕು. ಅಂಥ ಸೂಕ್ಷ್ಮ ಪ್ರವೃತ್ತಿಯವನಿರಬೇಕು. ಅಲ್ಲಿರುವ ( ವಿಮಾನದಡಿಯ ವಿಭಾಗದಲ್ಲಿ) ನೀರೆತ್ತುವ ಪೈಪುಗಳು, ಚಕ್ರದ ಒತ್ತುವಿಕೆ, ವಿದ್ಯುತ್ ಕೊಳವೆಗಳು ಇವೆಲ್ಲಸಲಕರಣೆಗಳ ನಡುವೆ ಅವನು ಇರುಕಿಕೊಂಡೆ ಇರಬೇಕಾಗುತ್ತದೆ" ಅದೆಷ್ಟು ದುಸ್ತರ ಎನಿಸುವುದಲ್ಲವೆ?

ಆರ್ಮೆಂಡೋ ಕೂಡ, ಆಮ್ಲಜನಕದ ಕೊರತೆ ತೀವ್ರ ಆದ ಗಂಭೀರಕರ ಶೈತ್ಯಕ್ಕೊಳಗಾಗಿ ಸಾವು ಕಾಣಬೇಕಿತ್ತು. ಭೂಮಿಯಿಂದ ೮,೯೦೦ ಮೀಟರ್ ಎತ್ತರದಲ್ಲಿ ವಿಮಾನ ಹಾರುವಾಗ, ಸಮುದ್ರ ಮಟ್ಟದಲ್ಲಿರುವ ಗಾಳಿಯಲ್ಲಿನ ಆಮ್ಲಜನಕಕ್ಕಿಂತ. ಅರ್ಧದಷ್ಟು ಪ್ರಮಾಣದಲ್ಲಿ ಮಾತ್ರ ಆಮ್ಲಜನಕ ಆ ಎತ್ತರದಲ್ಲಿ ಇರುತ್ತದಷ್ಟೆ. ಇನ್ನೂ ಉಷ್ಣಾಂಶವೊ? (ಶೂನ್ಯಕ್ಕಿಂತ ೪೦ ಡಿಗ್ರಿ ಕೆಳಗೆ! ಒಬ್ಬ ನುರಿತ ಅನುಭವಿ ಹೇಳುತ್ತಾರೆ: "ಆ ಎತ್ತರದಲ್ಲಿ, ಅಂಥ ಸ್ಥಿತಿಗಳಲ್ಲಿ ಒಬ್ಬ ಮನುಷ್ಯ ಸಾಧಾರಣವಾಗಿ ೨ ಅಥವಾ ೩ನಿಮಿಷ ಪ್ರಜ್ಞೆಯಿಂದಿರಲು ಸಾಧ್ಯವಾದೀತು. ಅಥವಾ ಉಸಿರು ನಿಯಂತ್ರಿಸಬಲ್ಲನಾದರೆ, ಇನ್ನೂ ಒಂದೆರಡು ನಿಮಿಷ ಇದ್ದಾನು, ಅಷ್ಟೆ."

"ಆರ್ಮೆಂಡೋನ ಅದ್ಭುತ ಅನುಭವವನ್ನು ಸಂಕ್ಷಿಪ್ತವಾಗಿ ಸ್ಪೇನಿಷ್ ಡಾಕ್ಟರರೊಬ್ಬರು ಹೇಳಿದರುತೆ; ಅವನು ಜೀವದೊಂದಿಗೆ ಬದುಕಿದ್ದು, ಅದೃಷ್ಟದಿಂದಾಗಿ ಮಾತ್ರ. ಅದೃಷ್ಟ ಎಂದರೆ, ಒಂದೆರಡು ಪ್ರಮಾಣದಷ್ಟು ಅಲ್ಲ, ಟನ್ ಗಟ್ಟಲೆ, ಆಗಣಿತ ಪ್ರಮಾಣದ ಅದೃಷ್ಟದಿಂದ ಮಾತ್ರ." ಕಿಶೋರ ಬಾಲಕನ ಈ ಸಾಹಸ, ಅನುಭವ, ಆತ ಬದುಕಿ ಉಳಿದದ್ದು ಖಂಡಿತ ಅದೃಷ್ಟದಿಂದ ಎಂಬ ಡಾಕ್ಟರರ ಮಾತು ಅಕ್ಷರಶಃ ನಿಜ ಎನ್ನಿಸೀತು ಅಲ್ಲವೆ? (ಸಾಧಾರ)

## ಅಳತೆಗೋಲು

ಚಿಕ್ಕ ಮಗು ಸಂತೋಷದಿಂದ ತಾಯಿಗೆ ಹೇಳಿತು: "ಅಮ್ಮಾ, ನಾನು ಒಂಭತ್ತು ಅಡಿ ಎತ್ತರ ಇದೀನಿ."

"ಅಂ? ಅದ್ಹ್ಯಾಗೋ?" ಅಚ್ಚರಿಯಿಂದ ಕೇಳಿದಳು ತಾಯಿ.

"ನಾನು ನನ್ನದೇ ಒಂದು ಅಳ್ತೆಗೋಲು ಮಾಡಿಕೊಂಡಿದ್ದೀನಿ. ಅದರಿಂದ ಅಳೆದೆ, ಒಂಭತ್ತು ಅಡಿ ತೋರಿಸಿತು."

ಜಗತ್ತಿನಲ್ಲಿ ಇಂಥ ಜನ ಬಹಳ. ಅವರು ಚಿಕ್ಕ ಮಗುವಿನಂತೆ – ತಮ್ಮದೇ ಆದ ವಿಧಾನದಿಂದ— ತಮ್ಮನ್ನು ಅಳೆದುಕೊಂಡು ತಾವೇ ದೊಡ್ಡವರೆಂದುಕೊಳ್ಳುತ್ತಾರೆ.

-ಟೂನ್ಸಿ ಡಬ್ಲ್ಯು. ಮನೂ

ಜಿ. ಕೆ. ಐತಾಳ

ಪ್ರೇಮವು ಬದುಕಿನಲ್ಲಿ ಯಾವಾಗ, ಹೇಗೆ ಕಾಲಿಡುತ್ತದೆ ಅಂತ ನಾವು ನಿರ್ಧರಿಸಲಾರೆವೇನೋ. ಬದುಕಿನ ಒಂದು ಹಂತದಲ್ಲಿ ನಮಗೆ ನಿರ್ಧರಿಸಲಾಗದ ಮಟ್ಟದಲ್ಲಿ ನಾವು ಸೋತು ಲೀನವಾಗಿ ಹೋಗುತ್ತೇವೆ. ಆ ಲೀನತೆಯಲ್ಲಿ ಆತ್ಮಾನಂದದ ಅನುಭೂತಿ ಇರದಿದ್ದರೆ ಅರಿಯುವಿಕೆ ಎಚ್ಚರಗೊಳ್ಳುತ್ತದೇನೋ. ಆದರೆ ಪ್ರಣಯದ ಉನ್ಮಾದದಲ್ಲಿ ಯಾವ ಅರಿಯುವಿಕೆಯೂ ಚಿಗುರೊಡೆಯುವುದಿಲ್ಲ.

ನಾನಾಗ ತರುಣನಾಗಿದ್ದೆ. ಬದುಕು ನನಗಾಗಿ ತೆರೆದಿತ್ತು. ಬದುಕನ್ನು ಹೇಗೆ ಬಂದರೆ ಹಾಗೆ ಸ್ವೀಕರಿಸುತ್ತೇನೆಂದು ಹೊರಟ ಪ್ರಗತಿಗಾಮಿ ನಾನು. ಮತ್ತೆ ದಿನಗಳೆದಂತೆ ಹಾಗೆ ಅಂದುಕೊಂಡದ್ದು ನನ್ನ ಭ್ರಮೆ ಅಥವಾ ತಿಳಿತನವೋ ಅಂತ ನಾನೇ ನಿರ್ಧರಿಸಲಾಗದ ಮಟ್ಟಕ್ಕೆ ಬಂದೆ. ಬದುಕಿನ ಪರಮಾವಧಿ ಹಂತದ ಗಣನೆಯಲ್ಲಿ. ಮಧ್ಯೆ ನಿಂತು ವಿರಮಿಸಿ ಹಿನ್ನೋಟ ಹರಿಸುವ ಮನಸ್ಸು ನನಗಿಲ್ಲ. ಈ ದಿಸೆಯಲ್ಲಿ ನನ್ನ ಬದುಕಿನಲ್ಲಿ ಬೃಹತ್ ಅವಸ್ಥಾಂತರ ಆಗಿದೆ. ನಾನು ಯಾರು?–ಅನ್ನುವ ಪ್ರಶ್ನೆ ಹುಟ್ಟುವ ಕಾಲಕ್ಕೆ ನನಗೆ ಅಂಟಿಕೊಂಡಿದ್ದ ಹಲವಾರು ಪರಂಪರೆಯ ಪಳಿಯುಳಿಕೆಗಳು ಜಾರಿ. ಶುದ್ಧ ನಾಗರಿಕತೆಯ ಗುಂಗಿನಲ್ಲಿ ಸಂಸ್ಕೃತಿಯ ಉದ್ಧಾರದ ಕುರಿತು ಭಾಷಣ ಬಿಗಿಯುವವನಾಗಿದ್ದೆ.

ವಿಶ್ವವಿದ್ಯಾನಿಲಯ ನನ್ನ ಬದುಕಿಗೇನೂ ನೀಡಲಿಲ್ಲ, ಬರೇ ಬುರುಡೆ ಬಿಡುವ ದಾರ್ಶನಿಕನನ್ನಾಗಿ ನನ್ನ ಸೇವೆ ಬಯಸಿತ್ತು. ನನ್ನ ಮಾತುಗಳು ಎಲ್ಲರಿಗೂ ಅರ್ಥವಾದೀತೆನ್ನುವ ವಿಶ್ವಾಸ ನನಗೇ ಇಲ್ಲ. ಇತ್ತೀಚೆಗಂತೂ ನನ್ನ ಮಾತುಗಳೆಲ್ಲ ಬರಿ ದಾರ್ಶನಿಕತೆಯ ಬಿಂಬವಾಗುತ್ತವೆ. ಮಾತು ಬದುಕಿನದಾದರೂ ನನ್ನ ಹೃದಯದಿಂದ ಪಡಿಮೂಡಿಸುವಾಗ ಶುಷ್ಕವಾಗಿರುತ್ತದೆ. ನನ್ನ ಬದುಕು, ನನ್ನ ಮಾತುಗಳೇಕೆ ಶುಷ್ಕವಾಗಿವೆ ಅನ್ನುವ ವೇದಾಂತವೇ ನನ್ನ ತರ್ಕಕ್ಕೆ [illegible]ಯುವುದಿಲ್ಲ.

ಕೆಲವೊಮ್ಮೆ ಭಾಷೆ ನಮ್ಮ ಗುಲಾಮನಾದಷ್ಟೇ ಅರ್ಥವನ್ನು ಕಳೆದುಕೊಳ್ಳುತ್ತದೆ. ನನ್ನ ಯಾವ ಭಾವನೆಯನ್ನೂ ಈಗ ಭಾಷೆಯ ಮೂಲಕ ಪಡಿಮೂಡಿಸಲಾರೆ. ಮೊದಮೊದಲು ಭಾಷೆಯಲ್ಲಿ ಬದುಕಿನ ಸಾರಸರ್ವಸ್ವವೆಂದು, ನನ್ನ ನೋವು-ನಲಿವು, ನನ್ನ ಅನಿಸಿಕೆ–ಆಕಾಂಕ್ಷೆ, ನನ್ನ ಪ್ರೇಮ-ಕಾಮ ಎಲ್ಲದಕ್ಕೂ ಭಾಷೆ ಮುಖವಾಣಿ ಎಂದು ತಿಳಿದಿದ್ದೆ.

ಇದೆಲ್ಲವನ್ನು ಮೀರಿ ಬದುಕು ಇದೆ. ಆ ಅನುರಣನಕ್ಕೆ ಯಾವ ಭಾಷೆಯೂ ಸ್ಪಂದಿಸಲಾರದನ್ನು ತೋರಿಸಿಕೊಟ್ಟವಳು ಪರು. ಈ ಬದುಕಿನಲ್ಲಿ ಯಾವ ಸಂಬಂಧಗಳಿಗೆ ನಾವು ಎಷ್ಟು ಮಾತ್ರಕ್ಕೂ ಕಾರಣರಾಗುವುದಿಲ್ಲವೋ ಅಷ್ಟೇ ಆ ಸಂಬಂಧಗಳ ಕೂಡಿಕೆ, ವಿಕರ್ಷಣೆಗೆ ನಾವು ಕಾರಣರಲ್ಲ.

ಕನಸುಗಳು ಮೂಡುವ ಕಾಲ ಮಧುರವಾಗಿರುತ್ತದೆ. ಅದು ಯೌವನದ ಅಂಗಣದಲ್ಲಿ ದುಮುದುಮುಸಿ ಸಾಗುವಾಗ ಮತ್ತೂ ಮಜ. ನಾವೆತ್ತಲೋ ತೇಲುತ್ತಿರುತ್ತೇವೆ. ಒಂದು ಕಾಲದಲ್ಲಿ ನಾನೂ ತರುಣನಾಗಿದ್ದೆ. ಹುಡುಗಿಯರು ನನ್ನನ್ನು ಕಂಡಾಗಲೆಲ್ಲಾ, ಕಂಡು ಮುಗುಳ್ನಕ್ಕಾಗಲೆಲ್ಲಾ ನನ್ನನ್ನು ಪ್ರೀತಿಸುವರೆಂದು ಭಾವಿಸುತ್ತಿದ್ದೆ. ಆದರೆ ಆ ನಗುವಿನಲ್ಲೇ ಸಾವಿನ ಅಂಚು ಸುಳಿದಾಡುತ್ತಿರುವುದು ನನಗೆ ಕಾಣಿಸುತ್ತಿರಲಿಲ್ಲ.

ಇಂತಹ ಮಧುರ ಬದುಕಿನಲ್ಲಿ ಪರು ಮಾತಾದಳು. ಮಾತು ಬದುಕನ್ನು ತೆರೆಯುತ್ತದೆ. ಇಲ್ಲವೆ ಬದುಕಿನ ಅವಸ್ಥಾಂತರಕ್ಕೂ ಕಾರಣವಾಗುತ್ತದೆ. ಮಾತಿಗಾಗಿ ಈ ಮಾತು. "ಚುಂಬನದ ಅಗತ್ಯವಿದೆಯೇ ಅಶು? ಇದು ಬರೇ ನನ್ನ–ನಿನ್ನ ಸಮಾಗಮವಷ್ಟೇ ಅಲ್ಲದೆ ನಮ್ಮ ಧರ್ಮಗಳ ಚುಂಬನವೂ ಆಗುತ್ತದೆ.

ಯಾವ್ಯವೂ ಪೂರ್ವದಲ್ಲಿ ಸಿಹಿಯಾಗಿರುತ್ತದೆ. ಆಕರ್ಷಣೆ ಕಳೆದುಕೊಂಡ ತಕ್ಷಣ ಮಧು ಸಹ ಮರಣವಾಗುತ್ತದೆ. ನಿನ್ನಷ್ಟೇ ಬದುಕಿನ ಉತ್ಕಟತೆ, ಪ್ರೀತಿ, ಕಾಮ, ಆಕರ್ಷಣೆ ಮತ್ತು ನೀನು ಏನೇನು ಅನ್ನುತ್ತೀಯೋ ಅದೆಲ್ಲಾ ನನ್ನಲ್ಲೂ ಇದೆ. ಆದರೆ ಬದುಕಿನ ಪಥಗಳು ತೀವ್ರ ವಿಮುಖ. ಎಂದೂ ಕೂಡದ, ಸಮಾಂತರಿಸದ ಆ ದಾರಿಯಲ್ಲಿ ಚುಂಬನದ ಮುದ್ರೆ ಬೀಳಬಾರದು."

"ಚುಂಬನದ ವಿಷಯವಲ್ಲ ಪರು, ನಿನ್ನದು ಶುಷ್ಕ ವೇದಾಂತ. ನಾನು ಯಾವ ಭಾವನೆಗೂ ಗುಲಾಮನಾಗಲು ಇಷ್ಟ ಪಡುವುದಿಲ್ಲ. ಈ ಬದುಕು ನನ್ನದು. ಇಂದು ನಾನಿಲ್ಲಿ ಇರುವೆನು. ನನ್ನ ಪದದಲ್ಲಿ ನನ್ನ ನಂಬಿಕೆಯಲ್ಲಿ ನನಗೆ ವಿಶ್ವಾಸವಿದೆ. ಈ ಜೀವನದಿಯ ಪ್ರವಾಹದ ಗಭೀರತೆಯನ್ನು ಗಮನದಲ್ಲಿ ಈ ಅಲ್ಪ ಆಯುಷ್ಯದ ಆಟಕ್ಕೆ ಏನೇನೂ ಅರ್ಥವಿಲ್ಲ ಅನ್ನಿಸುತ್ತೆ ಪರು. ಇರುವ ನಾಲ್ಕು ದಿನಗಳಲ್ಲಿ ಧರ್ಮ ಜಾತಿ ಪ್ರೇಮದ ಮಧ್ಯೆ ಆಹ್ವಾನಿಸಲ್ಪಡಬೇಕೆ?

ನಾಲ್ಕು ವರ್ಷಗಳ ಮಾತಿದು. ಈ ಮಾತಿಗೆ ಉತ್ತರ ಬಂದೂ ನಾಲ್ಕು ವರ್ಷಗಳು ಸಂದಿವೆ. ಈ ಮಾತು ಹುಟ್ಟಲೂ ನನ್ನ ಪರವಿನಳ ನಾಲ್ಕು ವರ್ಷದ ಸ್ನೇಹದ ಸೆಲಿಗೆ ಸಂದಿತ್ತು.

"ಅಶು, ಯಾವ ಬದುಕೂ ಧರ್ಮ-ಜಾತಿಯ ನೆಲೆಯಿಲ್ಲದೇ ಸ್ಥಿರವಾಗಿರಲಾರದು. ಯಾವ ಬದುಕಿಗೂ ಬಂಧನದ ಕಡಿವಾಣವಿಲ್ಲದಿದ್ದರೆ, ಬದುಕು ಮೂರಾಬಟ್ಟೆಯಾಗುತ್ತದೆ. ಅಶುವಿನ್, ನೀನು ಬದುಕನ್ನು ಏಕಮುಖವಾಗಿ ನೋಡಿದ್ದಿ. ನಾಗರಿಕತೆಯ ಪ್ರವಾಹದಲ್ಲಿ ಸಂಸ್ಕೃತಿಯ ಮೌಲ್ಯ ಗ್ರಹಿಸಲಾರದಾಗಿದ್ದಿ. ಧರ್ಮದ ಅಂತ್ಯದರ್ಶನವನ್ನು ಮಾತ್ರ ಕಾಣುತ್ತಿದ್ದಿ. ಪೂರ್ವ ದಿಗಂತವನ್ನು ನೋಡು. ಮುಳುಗುವ ಸೂರ್ಯನನ್ನೇ ಕಂಡು, ಹುಟ್ಟುವ ಸೂರ್ಯನೂ ಹೀಗೆ ಎಂದು ನಿರ್ಧರಿಸಲಾಗುವುದಿಲ್ಲ."

"ನಿನ್ನ ಮಾತುಗಳು ನನಗರ್ಥವಾಗುವುದಿಲ್ಲ. ಪರು, ನಿನ್ನ ಸಾಹಿತ್ಯದ ಭಾಷೆ, ಬದುಕಿನ ಕಥೆಗೆ ಪೂರಣ ಒದಗಿಸಲಾರದು. ನನ್ನ ನಿರ್ಧಾರದ ಕುರಿತು ನಿನ್ನ ಅನ್ನಿಸಿಕೆ ಏನು? ನನ್ನ ಬದುಕು ಇಷ್ಟರವರೆಗೂ ಅತ್ಯಗತ್ಯ-ಅನಿವಾರ್ಯಗಳನ್ನು ಕಂಡಿರಲಿಲ್ಲ. ಅದು ಈಗ ಬಯಸುವ ಸುಮಾಗಮ-ವನ್ನು ಕ್ಷುಲ್ಲಕ ಎಂದೂ ನಾನು ಹೇಳಲಾರೆ. ಯಾಕೆಂದರೆ ನಾನು ಬದುಕನ್ನು ತ್ಯಜಿಸಲಾರೆ."

"ಅಷ್ಟೇ ಸಾಕು ಅಶು. ಬದುಕು ಕಡೆಯುತ್ತಿದೆ. ಅದರಲ್ಲಿ ನಿನ್ನ ವ್ಯಕ್ತಿತ್ವ ಅಸ್ತಿತ್ವ ಪಡೆಯುತ್ತಿರುವ ಶುಭಸೂಚನೆ ಅದು. ಬದುಕು ದರ್ಪಣ ಅಶು. ದೇವರು ಧರ್ಮ ಇಲ್ಲವೆಂದರೂ ನೀನು ಬದುಕನ್ನು ಪ್ರೀತಿಸುತ್ತಿ. ಅನಿವಾರ್ಯತೆಯನ್ನು ಬಯಸುತ್ತಿ, ಇದೇ ನಿನ್ನ ನಂಬಿಕೆಯ ಸಾಕಾರರೂಪ. ಅದೇ ನಿನ್ನ ಅವಸ್ಥಾಂತರದ ಜೀವಂತ ಸ್ವರೂಪ."

ಇಂತಹದೇ ಮಾತುಗಳನ್ನಾಡಿ ಪರು ನನ್ನನ್ನು ಗೆದ್ದಿದ್ದಳು. ಕೆಲವೊಮ್ಮೆ ಅವಳ ಮಾತುಗಳೇ ಅರ್ಥವಾಗುವುದಿಲ್ಲ.

"ಚುಂಬನದ ಮಾತು ಇಷ್ಟೊಂದು ಒಣ ಚರ್ಚೆಗೆ ಕಾರಣವಾಗಬೇಕಾಗಿರಲಿಲ್ಲ. ಕಾಮದ ಉತ್ಕಂಠೆ-ಯಿಂದ ನಿನ್ನನ್ನು ನಾನು ಬಯಸಲಿಲ್ಲ. ನಮ್ಮ ಸಮಾಗಮ ಎಂದರೆ ಪಥಭೇದನವಾಗದೇ ಸಾಧ್ಯವಿಲ್ಲವೇ? ಪಥಗಳು ಸಂಗಮಿಸುವ ಬದಲು ಸಮಾ-ನಾಂತರಿಸಿದರೆ ಅಷ್ಟರಿಂದಲೇ ನಾನು ತೃಪ್ತನಾಗಬಲ್ಲೆ, ಮದುವೆಯಾದರೂ ದೇಹ ಸೌಖ್ಯದಿಂದ ದೂರವಿರಬಹುದಲ್ಲವೇ?"

ಕ್ಷಣಕಾಲ ಪರವಿನ್ ಮಾತನಾಡಲಿಲ್ಲ.

"ಕ್ಷಮಿಸು ಅಶು. ವೈಚಾರಿಕವಾಗಿ ನೀನೆಂದೋ ನನ್ನನ್ನು ಸ್ವಯಂವರಿಸಿದ್ದಿ. ದೈಹಿಕವಾಗಿ ಬೇಕಾದರೂ ನೀಡುತ್ತೇನೆ. ಅದೇ ನಮ್ಮ ಬದುಕು, ಧರ್ಮ, ಅನಿಸಿಕೆಗಳಿಗೆ ಸೇತುವೆ ಹೂಡುತ್ತದೆ ಅನ್ನುವ ಆಸಕ್ತಿ ನೀನು ತಳೆದಿದ್ದರೆ ಅದಕ್ಕೆ ನಾನು ಜೀವ ನೀಡಲಾರೆ. ಪಥದೊಳಗೆ ಪಥ ನಿರ್ಮಿಸುವ ಹಂಬಲ ನನಗಿಲ್ಲ. ಇತಿಹಾಸ ಕಾಲದಿಂದ ನಿಮ್ಮ-ನಮ್ಮಲ್ಲಿ ಧರ್ಮ ಸಂಘರ್ಷ ನಡೆದು ಬಂದಿರುವುದಕ್ಕೆ ಇವೆರಡೂ ತಲೆ ಎತ್ತಿ ನಿಂತಿರುವುದಕ್ಕೆ ಇವುಗಳ ಒರಿಜಿನಾಲಿ-ಟಿಯೇ ಕಾರಣ. ಒಪ್ಪಂದ ಮಾಡಿಕೊಳ್ಳಲಾಗದ ವಿಚಾರಗಳಲ್ಲಿ ದೈಹಿಕ, ಮಾನಸಿಕ ವ್ಯಭಿಚಾರಗಳನ್ನು ನಾನು ಬಯಸಲಾರೆ..."

"ಇದೆಂತಹ ಹುಚ್ಚುತನ! ಬದುಕು ನಮಗಾಗಿ ಇದೆ. ಧರ್ಮ ಬದುಕಿಗಾಗಿ ಇದೆ." ನನ್ನ ಮಾತು ಧ್ವನಿ ಕೂಡಿಸಿಕೊಳ್ಳುತ್ತಿತ್ತು.

ಪರವಿನ್ ಮುಗುಳುನಗೆ ಮಿಂಚುತ್ತಾ ಹೇಳಿದಳು. "ಅದರೊಂದಿಗೆ ನೈತಿಕತೆ ಬದುಕಿಗಾಗಿ ಇದೆ.

ನಾನು ನಿನ್ನನ್ನು ನನ್ನ ಪಥದಲ್ಲಿ ಸೆಳೆಯುತ್ತಾಳೆ. ಬರುತ್ತೇನೆ ಅಶು, ಗುಡ್‌ಬೈ."

ಪರವಿನ್ ಎದ್ದು ಸೀರೆ ಜಾಡಿಸಿ ಹೊರಳಿದಾಗ ಸೂರ್ಯ ದಿಗಂತದ ಕೆನ್ನೆತ್ತರದಿಂದ ಸಮುದ್ರ ಗರ್ಭಕ್ಕೆ ಇಳಿಯುತ್ತಿದ್ದ. ವಸಂತದ ತಿಳಿ ಮಧುರ ಗಾಳಿ ಸಮೀಪಿಸುತ್ತಾ ಪರವಿಗಳಿಂದ ಹೊರ-ಬಂದ ಸುಗಂಧ ಕಂಪನ್ನು ಕ್ಷಣಕ್ಷಣಕ್ಕೂ ಬೀರಿ ವಾಸುತ್ತಿತ್ತು. ಮರಳ ಹಾಸಿಗೆಯ ಮೇಲೆ ಪಥ ಮೂಡಿಸುತ್ತಾ ಸಾಗಿದ ಆಕೆಯನ್ನೇ ದಿಟ್ಟಿಸುತ್ತಿದ್ದೆ. ಕ್ಷಣಕ್ಷಣಕ್ಕೂ ದ್ವಂದ್ವ ವಿಕಲ್ಪವಾಗುತ್ತಾ ದಿಗಂತದಲ್ಲಿ ಮೇಳವಿಸುತ್ತದೆ.

ಮತ್ತೆಷ್ಟು ಹೊತ್ತು ಕುಳಿತಿದ್ದೆನೋ...

ಸೂರ್ಯನ ನಿರ್ಗಮನ ಕನಸುಗಳಿಗೆ ಮುಸುಕು ಹಾಕುತ್ತವೆ. ಎದ್ದು ಹೊರಡುತ್ತೇನೆ, ಪರವಿನ್‌ಳ ಹೆಜ್ಜೆ ಗುರುತುಗಳನ್ನು ಅರಸುತ್ತಾ, ಅವುಗಳು ಕಡಲ ಗರ್ಭದಲ್ಲಿ ಕಣ್ಮರೆಯಾಗಿವೆ. ತೆರೆಗಳು ಹೆಜ್ಜೆಗಳ ಮೇಲೆ ಲಾಸ್ಯ ಮಾಡುತ್ತಿವೆ. ನಾನೊಬ್ಬನೇ ಹೊಸ ಪಥ ಹುಡುಕುತ್ತಾ, ಕಡಿಯುತ್ತಾ ಸಾಗುತ್ತೇನೆ...

೨

ಬದುಕಿನ ಒಂದು ಮುಖದ ಅನುಭವ ಮಾತ್ರ ನನಗಾಗಿದೆ ಎಂದು ಇತ್ತೀಚೆಗೆ ನನಗನ್ನಿಸುತ್ತಾ ಇದೆ. ಸಂಜೆಯ ಸಾಗರದಂಚಿನಿನ ಕೆಂಬೆಳಕನ್ನು ಕಂಡ ನಲಿವು-ನೋವಷ್ಟೇ ಮಿಡಿತಕ್ಕೆ ಆವಿಷ್ಕಾರವಾಗಿದೆ ವಿನಾ ಪೂರ್ವ ದಿಗಂತದ ಹೊಂಬಣ್ಣದ ಪ್ರಸವ ವೇದನೆಯ ಅರಿವು ಬದುಕಿನ ಕಣ್ಣಿಗೆ ಗೋಚರಿಸಲಿಲ್ಲ.

ಗುರುತುಗಳನ್ನು ಮರೆಯದೇ ನಾವು ಬದುಕಲಾರೆವು. ಮರೆಯುವುದು ನನ್ನ ಉಸಿರ ತುಡಿತದ ಕೊನೆಯ ತಾಣಕ್ಕೆ, ಇದನ್ನೇ ಪರು ವಿರೋಧಿಸುತ್ತಾಳೆ. "ನೀನೇಕೆ ಅಷ್ಟು ನಿರ್ವಿಣ್ಣನಾಗುತ್ತೀ? ಯಾವ ಬದುಕೂ ಅನಿವಾರ್ಯಗಳೊಂದಿಗೆ ಹೋ-ರಾಡದೇ ಬದುಕಲಾರದು. ಹೋರಾಟದಲ್ಲಿ ಗೆದ್ದರೆ ಅನಿವಾರ್ಯತೆ ಶರಣಾಗಿ 'ಅರ್ಥ' ಕಳೆದುಕೊಳ್ಳುತ್ತದೆ. ನಿನ್ನ ಅನಿವಾರ್ಯತೆಯಲ್ಲಿ ನಾನು. 'ಪ್ರಶ್ನೆ' ಯಾಗಿಯೇ ಉಳಿಯುವುದಾದರೆ ನಾನು ಕಣ್ಮರೆಯಾಗಲು ಯತ್ನಿಸುತ್ತೇನೆ..."

"ಎಂತಹ ಮಾತನಾಡುತ್ತಿ ಪರು?" ನನ್ನ ಕಾಳಜಿಯ ಅರಿವು ಆಕೆಗಾಗಿ, ನಗೆ ಮೂಡಿತು ಮೊಗದ ಮೇಲೆ.

"ಇಲ್ಲ ಅಶು. ಕಣ್ಮರೆ ಅಂದರೆ ಕಣ್ಣೆದುರಿನಿಂದ ಅಷ್ಟೇ-ಚಲನೆಯಿಂದ. ಯಾವ ಅನಿವಾರ್ಯತೆಯ ಉದಯದ ಮೂಲವೂ ಕಾಮವಾಗಿರುತ್ತದೆ. ಅದಕ್ಕೆ ನಮ್ಮ ಸೌಜನ್ಯದ ಮುಖವಾಡ ಭಾಷೆ ಅಷ್ಟೇ. ನೀನು ನನ್ನನ್ನು ಮರೆಯಬೇಕು...ಪಥ ಬದಲಿಸಬೇಕು..."

"ಅದು ಅಸಾಧ್ಯ. ನನ್ನ ನಿನ್ನ ಮಾನಸಿಕ ಸಾಂಗತ್ಯ, ದೈಹಿಕ ಮಿಲನಕ್ಕಿಂತ ಹೆಚ್ಚು ಅರ್ಥವತ್ತಾಗಿದೆ. ಇದಕ್ಕೆ ಪ್ರಾಪಂಚಿಕ ಮೌಲ್ಯ ಬೀಳಬೇಕಾದರೆ ಮದುವೆಯ ನಾಟಕ ಆಡಲೇಬೇಕು. ನಾನು ನಡೆಯದ ಹಾದಿಯಲ್ಲಿ ಜನರ ಮಾತಿನ ಒತ್ತುಗಳೇ ನನ್ನ ಹೆಜ್ಜೆಯ ಗುರುತನ್ನು ಮೂಡಿಸಿಬಿಟ್ಟಿವೆ. ಈಗ ಈ ಗುರುತುಗಳು ನನ್ನದೆಯೋ ಎಂದು ವಿವೇಚಿಸುತ್ತಾ, ನಾನೇ ಇದಕ್ಕೆ ಹೊಣೆಯಾಗಬೇಕಾಗಿ ಬಂದಿದೆ..."

"ಅದಕ್ಕೆ ಕಾಲವೇ ಸಮರ್ಪಕ ಉತ್ತರ ನೀಡುತ್ತದೆ."



"ನಮ್ಮನ್ನು ಶಾಲೆ ಕಲಿಯೋ ಅಂತಾ ಬೈದು ಕಳಿಸುವುದು ಮುಂದೆ ಅವರನ್ನೇ ಸಾಕೋಕೆ ನಾರಾಯಣಾ..."

"ಅಂದರೆ ನಮ್ಮ ಬದುಕು ಕಾಲದೊಂದಿಗೆ ನಿರ್ಣ್ಣವಾಗಿ ಸಾಗಬೇಕೆ ?"

ಪರು ಮಾತನಾಡಲಿಲ್ಲ. ಆಕೆಯ ಮೊಗ ದಿಗಂತವನ್ನು ವೀಕ್ಷಿಸುತ್ತಿತ್ತು.

"ನನ್ನನ್ನು ಯಾಕೆ ಕೊಲ್ಲುತ್ತಿ?"

ಕ್ಷಣ ತಡೆದು ಆಕೆಯಿಂದ ಶಬ್ದಗಳು ಹೊರಟವು. "ಈ ಮಾತುಗಳೆಲ್ಲಾ ಸತ್ತುಹೋಗಿವೆ ಅಶು. ಯಾರೂ ಯಾರನ್ನೂ ಕೊಲ್ಲುವುದಿಲ್ಲ. ಈ ಉತ್ತರಕ್ಕೂ ಗೋರಿ ಆಗಿ ಇತಿಹಾಸ ಹುಟ್ಟಿದೆ ಪ್ರಣಯದ ಕುರಿತು ಭಾಷೆ ಅರ್ಥಹೀನ."

"ನನ್ನ ಭಾವನೆಗಳು ನಿನಗರ್ಥವಾಗುವುದಿಲ್ಲವೇ? ಮೇಲಾಗಿ ನೀನು ಪ್ರಜ್ಞಾವಂತ ಲೇಖಕಿ..."

ಪರುವಿನಿಂದ ಬಂದ ಮಾತು ಭೂಕಂಪನಿಸಿತು. "ಇಲ್ಲ ಅಶು, ನಿನ್ನನ್ನು ಮದುವೆಯಾಗಲಾರೆ..."

ಮತ್ತೆ ದಿನಗಳು ಸತ್ತವು. ಮುಗಿಲು ಹುಟ್ಟಿತು. ಬಿಸಿಲು ಬಿದ್ದಿತು. ಮುಗಿಲು ಕರಗಿತು, ತಂಪು ಬೀಸಿತು.

"ನೀನಾದರೂ ಮದುವೆಯಾಗು. ನಾನು ಪ್ರೀತಿಯನ್ನು ತ್ಯಾಗ ಮಾಡಬಲ್ಲೆ. ಆದರೆ ನೀನು ಸುಖವಾಗಿರಬೇಕು. ನಿನ್ನ ಭಾವೀ ಪತಿಯ ವೈಚಾರಿಕ ಮನದಲ್ಲಿ ಅನುರಣಿಸಿ ನಿನ್ನ ರಮಿಸಬಲ್ಲೆ. ಅಷ್ಟಾದರೂ ಅವಕಾಶ ಮಾಡಿಕೊಡು..."

"ಮದುವೆಯ ಕುರಿತು ನನಗೆ ಸ್ಪಷ್ಟ ಕಲ್ಪನೆ ಇದೆ. ಅಶು ಅದೆಲ್ಲಾ ಎಂದೋ ನಡೆದಿರುತ್ತದೆ. ಮದುವೆಯ ಕಲ್ಪನೆ ಮುಂದುವರಿಯುತ್ತಲೇ ಇರಬೇಕು. ನಾನು ಹಾರೈಸುತ್ತಲೇ ಇರಬೇಕು. ನೀನು ಹಂಬಲಿಸುತ್ತಲೇ ಇರಬೇಕು. ಸಮಾಜ ಮೂದಲಿಸುತ್ತಲೇ ಇರಬೇಕು. ಇದೇ ಬದುಕು..."

ದಿಗಂತ ಸ್ತಬ್ಧವಾಗಿತ್ತು.

ಮರೆಯುವಿಕೆಯ ಚಿಂತೆಯು ನನ್ನಲ್ಲಿ ನೋವನ್ನು ಕೊಲ್ಲುವುದಿಲ್ಲ. ಪುನಃ ಪುನಃ ಚಿಗುರಿಸುತ್ತದೆ ಚಿತೆಯನ್ನು.

ಪರವಿನ್‌ಳ ಭಾಷಾ ವೈಖರಿಗೆ ರೋಮಾಂಚನಗೊಂಡಿದ್ದೆ. ಕರ್ತೃತ್ವ ಶಕ್ತಿಗೆ ದಂಗಾಗಿದ್ದೆ. ಶೈಲಿಗೆ ಶರಣಾಗಿದ್ದೆ. ಅಂತಾರಾಷ್ಟ್ರೀಯ ಕಲಾಮೇಳದಲ್ಲಾದ ಪರಿಚಯದಿಂದ ಬದುಕಿಗೇ ಕನಸುಗಳನ್ನು ಕಾಣುವ ಅವಕಾಶ ಕೊಟ್ಟೆ. ಲೇಖನದ ಧಾಟಿ ಮೆಚ್ಚಿ ವಿಮರ್ಶಕನಾದೆ. ಪತ್ರಮೈತ್ರಿ ಗಾಢವಾಯ್ತು. ಆರಾಧಿಸಿದೆ. ಬದುಕು ಹತ್ತಿರ ತಂದಿತು; ಆಕರ್ಷಿಸಲ್ಪಟ್ಟೆ. ಜೀವನದುದ್ದದ ಮಧುರ ಮೈತ್ರಿ ತಂದ ಮಹಾತೃಪ್ತಿ ನೀಡಿದ ಆಕೆಯಿಂದ ಪುಳಕಿತಗೊಂಡೆ. ಪರವಿನ್ ನನ್ನ ಭಾವನೆಗಳನ್ನು ಸಮರ್ಥಿಸುತ್ತಿದ್ದಳು, ದೃಷ್ಟಿಕೋನವನ್ನು ಗೌರವಿಸುತ್ತಿದ್ದಳು. ನೋವು ತಿಂದು ಪುಟಿದೇಳುವ ಅಂತಃಸ್ಸರಿತೆಯನ್ನು ಪ್ರಚೋದಿಸುತ್ತಿದ್ದಳು. ಇದನ್ನು ಪ್ರೇಮವೆಂದು ಕರೆಯಲೇ? ವಾತ್ಸಲ್ಯ ಅನ್ನಲೇ?

ಬದುಕಿನಲ್ಲಿ ವ್ಯಕ್ತಿಗತ ಸಂಬಂಧಗಳಿಗೆ ಅರ್ಥ ಹುಡುಕುವುದು ತುಂಬಾ ಕಷ್ಟ. ಪರು ಹೇಳುತ್ತಾಳೆ, ಯಾವುದೊ ಮೈತ್ರಿಗಳಿಗೆ, ಸಂಬಂಧಗಳಿಗೆ ಭಾವನೆಗಳ ಕಡಿವಾಣವಿಲ್ಲದಲ್ಲಿ ಅದು ಹೆಚ್ಚು ಕಾಲ ಬದುಕಲಾರದು ಎಂದು. ಕಡಲ ತೀರದ ನಡುಗಡ್ಡೆಯ ಅಲೆತದಲ್ಲಿ, ಬೆಟ್ಟದಿಳಿಯ ನಗೆದಾಟದಲ್ಲಿ ಸಂಜೆಗೆಂಪಿನ ಜಗಿದಾಟದಲ್ಲಿ ಕೈಗೆ ಕೈ ನೀಡಿ ನಡೆದ ಆಕೆ, ನನ್ನೊಳಗೆ ಯಾವ ಭಾವನೆಗಳ ರೂಪುತೊಡುತ್ತಿವೆ ಅನ್ನುವ ಅರಿವಿದ್ದೂ ಏಕೆ ಬಲಿಯಬಿಟ್ಟಳು?

ಸಂಬಂಧಗಳ ಮೌಲ್ಯ ತೀರ್ಮಾನವಾಗುವುದು ಕೇವಲ ಅಂತರಂಗದಲ್ಲಿ ಅಥವಾ ರುದ್ರ ಬಹಿರಂಗದಲ್ಲಿ ಮಾತ್ರ. ಆದರೆ ಎಂತಹ ಸನ್ನಿವೇಶದಲ್ಲೂ ಪರು ಮನಸ್ಸಿನ ಪದರನ್ನು ಕೆದಕಿ ಕಾಣಿಸಿಕೊಳ್ಳಲಿಲ್ಲ. ಅವಳ ಬರಹದ ಭಾವನೆಗಳು ಅವಳ ಮನಸ್ಸಿನ ಬಿಂಬಗಳಾಗಿ ರೂಪು ತೊಡುವುದಿಲ್ಲ. ಪಾತ್ರಗಳೇ ಅವಳೆಂದು ತಿಳಿದು ಮೋಸಹೋಗುವ ವಿಮರ್ಶಕನ ದಿಸೆಯಲ್ಲಿ ನಾನು ಪಥದರ್ಶನ ಪಡೆಯುತ್ತಿದ್ದೆ.

ದಿನಗಳು ಸಾಗುತ್ತಿರುವಂತೆ ಕನಸುಗಳು ಸಾಯುತ್ತಿವೆ. ಮತ್ತೆಲ್ಲಾ ನೋವು ನೀಡುವ ಹಿನ್ನೋಟ. ಕಲ್ಪನೆಯೊಳಗೇ ಜೀವಕಣಗಳು ವಿಲವಿಲನೆಒದ್ದಾಡಿ ಸಾಯುವ ಆಟ.

ಮತ್ತೊಮ್ಮೆ ಪರು ಸಿಕ್ಕಿದ್ದಳು. ಪಕ್ಕದಲ್ಲೊಬ್ಬ ಸುಂದರ ತರುಣನಿದ್ದ. ನನ್ನ ಕಣ್ಣುಗಳು ಮತ್ಸರದಿಂದ ಅವನತವಾಯ್ತು. ಆಕೆ ನಸುನಕ್ಕಳು ಭಾವನೆಗಳನ್ನು ಓದಿ.

"ನಾವು ಸದ್ಯದಲ್ಲೇ ನಿಖಾ ಮಾಡಿಕೊಳ್ಳುತ್ತೇವೆ. ಇವನು ಅಕ್ಬರ್ ಅಲಿ ಷಾ..."

ನನಗೆ ನಗು ಉಕ್ಕಿತು. ಎಲ್ಲಿ ಸಾಧ್ಯ? ಅಭಿನಯಿಸಿದೆ. ಕೊರಳುಬ್ಬಿ ಬರುವ ಮುನ್ನ ಮುಖ ತಿರು

ಗಿಸಿದೆ. ಬೆಳೆದ ಗುಡ್ಡಗಳ ಮರೆಯಲ್ಲಿ ಭಾವನೆಗಳನ್ನು ತಣಿಸಿದೆ.

"ಹೌದು ಹುಡುಗಿಯರು ಬೇಗ ಮದುವೆಯಾಗಬೇಕು..."

"ತುಂಬ ಬುದ್ಧಿವಂತನಾಗುತ್ತಿದ್ದಿ ಅಪು..." ಪರು ಕೊರಳು ತಿರುಗಿಸಿದಳು. ಕಂಠಭಾರವಾಗಿತ್ತೆಂದು ನಾ ಬಲ್ಲೆ. ಸುಂದರ ಮುಖದ ತರುಣ ಯಾವುದನ್ನೂ ಹಚ್ಚಿಕೊಳ್ಳದೇ, ನಿರಪೇಕ್ಷ ಭಾವದಿಂದ ಅವಳ ಬೊಗಸೆಗಂಗಳ ದಾಸನಾಗಿದ್ದ.

೩

ನನ್ನ ಬದುಕಿನ ಬಹುದೊಡ್ಡ ಪತನ. ಪರುವಿನ್ನೆನ್ನು ಅರ್ಥಮಾಡಿಕೊಂಡಿದ್ದೇನೆ ಅನ್ನುವ ಅಹಂಕಾರದ ಸೋಲು ದಾರ್ಶನಿಕತೆಯು, ಸೋಲಲ್ಲ, ದೃಷ್ಟಿಕೋನದ ಸೋಲು.

ಮತ್ತೆ ತಿಂಗಳ ನಡುವೆ ನಿಖಾದ ಮೆರವಣಿಗೆ ಸಾಗಿತ್ತು. ಕಣ್ಣೆದುರಿನಲ್ಲೇ ಪರು ತಾಗಿ ಹೋದಳು. ನೆನಪುಗಳೆಲ್ಲಿ ಮಾಸುತ್ತೇ?

ನಾನವಳನ್ನು ಮರೆಯಲೆತ್ನಿಸುತ್ತೇನೆ. ಕನಸುಗಳನ್ನು ಕಾಣದೇ ನಾವು ಬದುಕಲಾರೆವು. ಕನಸು ಕಂಡರೆ ಅದರ ತುಂಬೆಲ್ಲಾ ಆಕೆಯೇ ಕಾಣಿಸುತ್ತಾಳೆ.

ಕಾಲಗಳು ಮಾಸುತ್ತಿವೆ. ಹಳೇ ನೆನಪುಗಳಿಗೆ ಪ್ರೇರೆ ಬರುತ್ತವಂತೆ. ನಾನಿನ್ನೂ ಹಾಗೇ ಉಳಿದಿದ್ದೇನೆ. ಮತ್ತೊಮ್ಮೆ ಆಕೆಯಿಂದ ಪತ್ರ ಬಂದಿತು. ಪುಟ್ಟ ಅಶ್ವಿನ್ ಹುಟ್ಟಿದ್ದಾನೆಂದು. ನನ್ನ ಬಾಯಿ ನಗುವುದನ್ನು ಮರೆತಿದೆ. ಕಣ್ಣುಗಳು ಅಳುವುದನ್ನು ಮರೆತಿವೆ. ಮುಖ ಭಾವನೆಗಳನ್ನು ಮೂಡಿಸಲು ಅಶಕ್ಯವಾಗಿದೆ.

ದಿನಗಳು ಓಡುತ್ತಿವೆ ಅಥವಾ ಬಾಡುತ್ತಿವೆ, ನನ್ನ ದಾರ್ಶನಿಕತೆ ಮಕ್ಕಳಿಗೆ ಅರ್ಥವಾಗುವುದಿಲ್ಲ. ತಲೆಕೂದಲುಗಳು ಬಿಳಿದಾಗಿವೆ. ಹುಡುಗರು ತಮಾಷೆ ಮಾಡಿ ನಗುತ್ತಾರೆ. ಹುಡುಗಿಯರು ಕನಿಕರ ಬೀರುತ್ತಾರೆ. ಒಂಟಿ ಭೂಪ–ದಾರ್ಶನಿಕ, ಪಂಡಿತ ಎಂದೆಲ್ಲಾ ಕೂಗುತ್ತಾರೆ.

ನಾಗರಿಕತೆ ಬದಲಾಗಿದೆ. ಹೊಸ ಹುಟ್ಟು ಎಷ್ಟೋ ವಿಧದಲ್ಲಿ ಬದಲಾಗಿದೆ ಅನ್ನಿಸುತ್ತದೆ. ಹೊರ ನೋಟದಲ್ಲಿ ಆದರೆ ಧರ್ಮ–ಸಂಸ್ಕಾರ ಬದಲಾಗಿದೆ ಅಂದುಕೊಳ್ಳುವುದು ನಮ್ಮ ಮೂರ್ಖತನ. ಹೊರ ನೋಟಕ್ಕಷ್ಟೇ ಬದುಕು ಬದಲಾಗುದಂತೆ ಕಾಣಿಸುತ್ತದೆ. ಅವಸ್ಥಾಂತರದ ಸುಗ್ಗಿಯೇ ಕಾಣಿಸುತ್ತದೆ.

ಎಂದಿನಿಂದಲೋ ಸಾಗಿಬಂದ ಜೀವ ಪ್ರವಾಹದಲ್ಲಿ ನಾನು–ನನ್ನಂತಹ ಎಷ್ಟೋ ಮಂದಿ ಸಾಗಿ ಹೋಗಿದ್ದಾರೆ. ನಾನು ಮತ್ತು ಪರು, ಕಾಲ...ಧರ್ಮ, ದೇಶ–ಸಂಸ್ಕೃತಿ ಕಾಲದಿಂದ ಕಾಲಕ್ಕೆ ಅವಸ್ಥಾಂತರಗೊಳ್ಳುವಲ್ಲಿ ಉಳಿದುಕೊಳ್ಳುವ ಬದಲಾಗದ ಮೌಲ್ಯಗಳು, ಇದಕ್ಕಾಗಿಯೇ ನಾನು ಆಕೆಯನ್ನು ದೂರುವುದಿಲ್ಲ: ನಾವಿಬ್ಬರೂ ಧರ್ಮದ ದಿಗಂತಗಳಾಗಿದ್ದೇವೆ. ನಾಗರಿಕತೆಯೊಂದಿಗೆ ಒಪ್ಪಂದ ಮಾಡಿಕೊಳ್ಳುವ ಆಕೆಯ ಧರ್ಮ, ನನಗಿಂತ ಹೆಚ್ಚು ನೆಲೆಕಾಣುತ್ತದೆ ಲೌಕಿಕದಲ್ಲಿ. ನನ್ನ ದಾರ್ಶನಿಕತೆಯ ಹಾದಿಯಲ್ಲಿ ಬದುಕು ಸಾಗುತ್ತಿದೆ. ಇದೇ ಜೀವನದ ಸುರಮ್ಯ ಸಂಗೀತ. ಇದನ್ನೇ ಆಲಿಸುವ ನನಗೆ ಕೆಲವರೆನ್ನುತ್ತಾರೆ ಹುಚ್ಚ ಎಂದು.

ಈ ಹುಚ್ಚು ಕಾಲದಿಂದ ಕಾಲಕ್ಕೆ ...ಸಾಗುತ್ತಲೇ ಇರುತ್ತದೆ. ನಾನು, ಪರು, ದಿಗಂತಗಳು...ಯಾವ ಕಾಲದಲ್ಲೂ ಒಂದಾಗದ ದಿಗಂತಗಳು. ✡

**(ಕೃಪೆ: ಆಕಾಶವಾಣಿ, ಮಂಗಳೂರು)**

## ಪ್ರೇಮಿಗಳ ರಜಾದಿನ

ತೃತೀಯ ಶತಕದಲ್ಲಿದ್ದ ಕ್ರೈಸ್ತ ಹುತಾತ್ಮರಾದ ಸಂತ ವಾಲೆಂಟರ ಗೌರವಾರ್ಥ ಫೆಬ್ರವರಿ ೧೪ ರಂದು ಕ್ರೈಸ್ತ ಬಾಂಧವರು ಹಬ್ಬವನ್ನು ಆಚರಿಸುವರು. ಸಾಂಪ್ರದಾಯಿಕವಾಗಿ ಕ್ರೈಸ್ತರು ಈ ದಿನವನ್ನು (ಅಘೋಷಿತ) 'ಪ್ರೇಮಿಗಳ ರಜಾದಿನ'ವನಾಗಿ ಪರಿಗಣಿಸಿದ್ದಾರೆ. ಅಂದು, ಪ್ರೇಮಪಾಶಕ್ಕೆ ಸಿಲುಕಿದವರು ಪರಸ್ಪರ ವಿಚಾರವಿನಿಮಯ ಮಾಡಿಕೊಳ್ಳುವರು.

ಒಂದು ಅಪರೂಪದ ಘಟನೆ

# ಅಂತೂ ಕಾಲ ಪಕ್ವವಾಯಿತು!

**ಅಶೋಕ ಬುರ್ಲಿ**

ಭಾರತೀಯ ನ್ಯಾಯಾಂಗ ಇತಿಹಾಸದಲ್ಲಿ ಹಲವಾರು ಕುತೂಹಲಕಾರಿ ಘಟನೆಗಳು ನಡೆದುಹೋಗಿವೆ. ಅವುಗಳಲ್ಲಿ ಇತ್ತೀಚಿನದು ಮದ್ರಾಸ್ ನ್ಯಾಯಾಂಗದಲ್ಲಿ ತೀರ್ಮಾನವಾಯಿತು.

ಮೂವತ್ತೈದು ವರ್ಷಗಳ ನಂತರ ಇತ್ತೀಚೆಗೆ ಮದ್ರಾಸ್ ಹೈಕೋರ್ಟು ಓರ್ವ ವ್ಯಕ್ತಿಯನ್ನು ಕೊಲೆ ಮೊಕದ್ದಮೆಯಿಂದ ಮುಕ್ತವಾಗಿಸಿತು. ವೆಂಕಟಯ್ಯ ಎಂಬ ವ್ಯಕ್ತಿ ತನ್ನ ಪ್ರೇಯಸಿ ಪಟ್ಟಮ್ಮಾಳ್ ಎಂಬವಳನ್ನು ಜುಲೈ ೨೭, ೧೯೪೪ರಂದು ಕೊಲೆಮಾಡಲು ಯತ್ನಿಸಿದ್ದ. ಅದೇ ವ್ಯಕ್ತಿ ಗೋವಿಂದಸ್ವಾಮಿ ಪಿಳ್ಳೆ ಎಂಬುವವನ್ನು ಕೊಲೆಮಾಡಿದ. ಪಟ್ಟಮ್ಮಾಳ್ ಕೆಲವು ದಿನಗಳ ಕಾಲ ಸಂದಾನಗುಡಿ ಎಂಬಲ್ಲಿ ವೆಂಕಟಯ್ಯನ ಜೊತೆ ವಾಸವಾಗಿದ್ದಳು. ಇವರೆಲ್ಲ ವೃತ್ತಿಯಲ್ಲಿ ಕೂಲಿಕಾರರು. ದಿನ ಕಳೆದಂತೆ ಪಟ್ಟಮ್ಮಾಳ್ ಗೋವಿಂದಸ್ವಾಮಿ ಪಿಳ್ಳೆಯೊಡನೆ ಅಕ್ರಮ ಸಂಬಂಧ ಬಯಸಿದಳು. ಇದನ್ನು ತಿಳಿದ ವೆಂಕಟಯ್ಯ ಗೋವಿಂದಸ್ವಾಮಿಯನ್ನು ಕೊಲೆಮಾಡಿದ.

ತಂಜಾವೂರಿನ ಸೆಶನ್ಸ್ ನ್ಯಾಯಾಧೀಶರು ವೆಂಕಟಯ್ಯನಿಗೆ ಕೊಲೆ ಆಪಾದನೆಯ ಮೇಲೆ ಡಿಸೆಂಬರ್ ೩೦, ೧೯೪೪ರಂದು ಮರಣದಂಡನೆ ವಿಧಿಸಿದರು. ಶಿಕ್ಷೆ ವಿಧಿಸಿದ ಕೆಲವೇ ದಿನಗಳಲ್ಲಿ ವೆಂಕಟಯ್ಯ ಜೈಲಿನಿಂದ ತಪ್ಪಿಸಿಕೊಂಡ. ಆಪಾದಿತ ವ್ಯಕ್ತಿ ತಪ್ಪಿಸಿಕೊಂಡರೂ ಅವನ ಮೇಲೆ ವಿಧಿಸಿದ ಆಪಾದನೆಯನ್ನು ಖಚಿತಪಡಿಸಲು ಸೆಶನ್ಸ್ ನ್ಯಾಯಾಧೀಶರು ೧೯೪೫ರಲ್ಲಿ ಈ ದಾವೆಯನ್ನು ಮದ್ರಾಸ್ ಹೈಕೋರ್ಟಿಗೆ ಪರಿಶೀಲನೆಗೆಂದು ಕಳುಹಿಸಿದರು. ಅಂದಿನಿಂದ ೧೯೭೨ನೆಯ ಇಸವಿಯವರೆಗೂ ಈ ಕೊಲೆಗೆ ಸಂಬಂಧಿಸಿದ ಕಾಗದಗಳು ಹೈಕೋರ್ಟಿನಲ್ಲೇ ಇದ್ದವು.

೧೯೭೨ರಲ್ಲಿ ತಂಜಾವೂರಿನ ಕಲೆಕ್ಟರರು ತಮಿಳುನಾಡು ಸರಕಾರಕ್ಕೆ ಪತ್ರ ಬರೆದು ಈ ದಾವೆಯನ್ನು ಹಿಂತೆಗೆದುಕೊಳ್ಳಬೇಕೆಂದು ಕೋರಿದರು. ಇದಕ್ಕೆ ಉತ್ತರವಾಗಿ ಪಬ್ಲಿಕ್ ಪ್ರಾಸಿಕ್ಯೂಟರರು ದಾವೆಯನ್ನು ಸರಕಾರ ಹಿಂತೆಗೆದುಕೊಳ್ಳಲು ಸಾಧ್ಯವಿಲ್ಲವೆಂದು ಅಭಿಪ್ರಾಯ ವ್ಯಕ್ತಪಡಿಸಿದರು.

ಕೆಲದಿನಗಳ ಹಿಂದೆ ಮದ್ರಾಸ್ ಹೈಕೋರ್ಟಿನ ನ್ಯಾಯಮೂರ್ತಿಗಳಾದ ರತ್ನವೇಲು ಪಾಂಡ್ಯನ್ ಹಾಗು ಸಂಗೊತ್ತುವೇಲನ್ ಅವರುಳ್ಳ ನ್ಯಾಯಪೀಠವು ತೀರ್ಪು ನೀಡಿ ಕೊಲೆಗಾರ ವೆಂಕಟಯ್ಯನನ್ನು ಖುಲಾಸೆ ಮಾಡಿ ಈ ದಾವೆಯನ್ನು ಮುಂದುವರಿಸದಂತೆ ಆದೇಶ ನೀಡಿತು.

ನ್ಯಾಯಮೂರ್ತಿಗಳು ತಮ್ಮ ತೀರ್ಪಿನಲ್ಲಿ "ಕೊಲೆಗಡುಕನ ಸುಳಿವೇ ಇಲ್ಲದೆ ಇಷ್ಟು ದಿನ ಈ ದಾವೆಯನ್ನು ಜೀವಂತವಿರಗೊಟ್ಟಿದ್ದು ಆಶ್ಚರ್ಯಕರ. ಎಷ್ಟು ಸಲ ಕೇಳಿಕೊಂಡರೂ ರಾಜ್ಯ ಸರಕಾರ ಕೊಲೆಗಡುಕನ ಪತ್ತೆ ಹಚ್ಚಿಲ್ಲ. ಕೋರ್ಟಿನ ಕಾಗದ ಪತ್ರಗಳ ಮೂಲಕ ತಿಳಿಯುವಂತೆ ಆ ವ್ಯಕ್ತಿಯನ್ನು ಹಿಡಿದಾಗ ೧೯೪೪ರಲ್ಲಿ ಅವನಿಗೆ ೩೫ ವರ್ಷ. ಅಂದಾಗ ವೆಂಕಟಯ್ಯ ಈಗ ಬದುಕಿದ್ದರೆ ಈಗ ಅವನಿಗೆ ಎಪ್ಪತ್ತು ವರ್ಷ. ಇಷ್ಟಾದರೂ ರಾಜ್ಯ ಸರಕಾರ ಈ ದಾವೆಯನ್ನು ಹಿಂತೆಗೆದುಕೊಳ್ಳದೆ ಕೇವಲ ೧೯೭೨ರ ತಂಜಾವೂರು ಕಲೆಕ್ಟರರ ಪತ್ರವನ್ನೇ ತೋರಿಸುತ್ತಿದೆ," ಎಂದು ಉದ್ಗರಿಸಿದರು.

ಭಾರತೀಯ ನ್ಯಾಯಾಲಯಗಳ ಮೇಲಿನ ಸಾಮಾನ್ಯ ದೂರೆಂದರೆ ಒಂದಿಲ್ಲೊಂದು ಕಾರಣದಿಂದ ತಮ್ಮೆದುರಿಗಿನ ಪ್ರಕರಣಗಳನ್ನು ಮುಗಿಸುವಲ್ಲಿ ಅತಿ ವಿಲಂಬ ನೀತಿಯನ್ನು ಅನುಸರಿಸುತ್ತಿವೆ ಎಂಬುದು. ಆದರೆ ಅದಕ್ಕೆ ನ್ಯಾಯಾಂಗವನ್ನು ಮಾತ್ರ ದೂರಿದರೆ ಸಾಲದೆನ್ನುವುದಕ್ಕೆ ಈ ಉದಾಹರಣೆಯೊಂದು ನಿದರ್ಶನ. **( ಸಂಗ್ರಹ )**

ಇದರಲ್ಲಿ ತಥ್ಯವೆಷ್ಟು? ಮಿಥ್ಯವೆಷ್ಟು?

# ಭವಿಷ್ಯಜ್ಞಾನ

**ಶಿವರಾಮು ಜೋಶಿ**

ಎರಡನೆಯ ಮಹಾಯುದ್ಧವು ನಡೆದ ಸಮಯದಲ್ಲಿ ಬ್ರಿಟನ್ನಿನ ಪ್ರಧಾನಿ ವಿನ್ಸ್ಟನ್ ಚರ್ಚಿಲ್ಲರು ಭವಿಷ್ಯವಾದಿಯೊಬ್ಬನನ್ನು ಕುರಿತು ಹೀಗೆ ಕೇಳಿದರಂತೆ: "ಯುದ್ಧದಲ್ಲಿ ಯಾರು ಗೆಲ್ಲುತ್ತಾರೆ ಹೇಳಿ ನೋಡೋಣ" ಆಗ ಆ ಭವಿಷ್ಯವಾದಿ ಹೇಳಿದ, "ಖಂಡಿತ ನೀವೇ ಗೆಲ್ಲುತ್ತೀರಿ ಎಂದು ಹೇಳಿದರೆ ನನಗೇನು ಕೊಡುತ್ತೀರಿ?" ಚರ್ಚಿಲ್ ನಕ್ಕುಬಿಟ್ಟರು. ಚರ್ಚಿಲ್ಲರು ಭವಿಷ್ಯವಾದಿಗೆ ಏನು ಕೊಟ್ಟರೋ ಏನು ಬಿಟ್ಟರೋ, ಅವರು ಎರಡನೆಯ ಯುದ್ಧವನ್ನು ಗೆದ್ದುದು ಮಾತ್ರ ನಿಜ.

ಭವಿಷ್ಯವಾದಿಗಳು ಏನೆಲ್ಲವನ್ನೂ ಮುಂದಾಗಿ ಹೇಳುತ್ತಿರುತ್ತಾರೆ. ಅವು ನಿಜ ಆಗುತ್ತವೆ ಕೂಡ. ಹಾಲಕ್ಕಿ ಶಕುನ ಎಂದು ನಮ್ಮ ಕಡೆ ಇರುತ್ತಾರೆ. ಅವರು ಕೇಳುವವರಿಲ್ಲದೆ ಹೇಳುತ್ತ ತಿರುಗುತ್ತಿರುತ್ತಾರೆ. ಅಲ್ಲಿ ಇಲ್ಲಿ ಭಿಕ್ಷೆ ಬೇಡುತ್ತಾರೆ. ಕೇಳುವವರಿಗೆ ಹೇಳುತ್ತಾರೆ. ನಾನೊಮ್ಮೆ ನಸುಕಿನಲ್ಲಿ ಮನೆ ಮುಂದಿನ ಬಾಗಿಲಿನಲ್ಲಿ ನಿಂತಿದ್ದೆ. ಆಗ ಒಬ್ಬ ಹಾಲಕ್ಕಿ ಶಕುನ ಹೇಳುವಾತ ರಸ್ತೆಯ ಮೇಲೆ ಒಡನುಡಿಯುತ್ತ ಹೊರಟಿದ್ದ. ನನ್ನನ್ನು ಕಾಣುತ್ತಲೇ ಮನೆಯ ಬಳಿ ಬಂದು. "ದೂರ ದೇಶದ ಪ್ರಯಾಣದ ಚಿಂತೆ. ಬೇಗ ಹೋಗುವಿರಿ. ಹಣ ಸಂಪಾದಿಸುವಿರಿ." ಎಂದು ಜಾನಪದ ಶೈಲಿಯಲ್ಲಿ ಹೇಳಿದ. ನಾನು ಅವನಿಗೆ ಏನು ಹೇಳಬೇಕು? ಹೌದು ಎನ್ನಲೇ? ನನ್ನ ಭವಿಷ್ಯ ಕೇಳಲೇ? ಅವನ ಭವಿಷ್ಯವಾದ ಅಲ್ಲಿಗೆ ಮುಗಿದಿತ್ತು. ಅವನಿಗೆ ನಾನೇನಾದರೂ ಕೊಡಬೇಕಿತ್ತು. ಏನೂ ಕೊಡಲಿಲ್ಲ.

ಇನ್ನೊಮ್ಮೆ ಬೀದಿಯಲ್ಲಿ ಹೊರಟಿದ್ದೆ. ಊರಿಗೆ ಹೋಗುವ ಚಿಂತೆ, ಆದರೆ ಹೋಗಲು ಉಪಾಯವಿಲ್ಲ. ಆಗ ಅವನಂತಹವನೇ ಇನ್ನೊಬ್ಬ ಭವಿಷ್ಯವಾದಿ ನನಗೆದುರಾದ. ಅವನು ನನಗೆ ಭವಿಷ್ಯ ಹೇಳುವ ಉತ್ಸುಕತೆಯುಳ್ಳವ. ನಾನು ಕೇಳುವುದರಲ್ಲಿ ಆತುರನಾಗಿದ್ದೆ. ಅವನೂ ಹೇಳಿದ, ನೀವು ಖಂಡಿತ ನಿಮ್ಮ ಊರಿಗೆ ಹೋಗುತ್ತೀರಿ ಚಿಂತಿಸಬೇಡಿ ಎಂದು. ಕಿಸೆಯಲ್ಲಿದ್ದ ಪುಡಿಗಾಸನ್ನು ಅವನಿಗೆ ಕೊಟ್ಟೆ.

ಒಂದು ಸಲ ನಾನು ನನ್ನ ಮಿತ್ರನೊಬ್ಬನ ಬಳಿಗೆ ಹೋದಾಗ ಅವನ ಬಂಧುವೊಬ್ಬ ಅವನ

ಮನೆಯಲ್ಲಿ ಬಿಡಾರ ಹೂಡಿದ್ದ. ಅವನ ಬಳಿ ಅನೇಕ ಶ್ರೀಮಂತರು, ವರ್ತಕರು, ಸಿನೆಮಾ ನಿರ್ಮಾಪಕರು, ನಟನಟಿಯರು ಭವಿಷ್ಯ ತಿಳಿಯಲು ಬರುತ್ತಿದ್ದರು. ನಾನು ಆಗ ಬಹಳ ತೊಂದರೆಯಲ್ಲಿದ್ದೆ. ನನ್ನ ಮಿತ್ರ ಹೇಳಿದ, "ಇರು ಅವನನ್ನು ಕೇಳೋಣ" ಎಂದು. ಅವನಿಂದಾಗಿ ಮನೆ ಯಾವಾಗಲೂ ತುಂಬಿರುತ್ತಿತ್ತು. ಕಾಫಿ ತಿಂಡಿಯ ಹೊಳೆ ಹರಿಯುತ್ತಿತ್ತು. ಅವನಿಗೆ ಬಿಡುವೆಂದರೆ ಅವನ ಪೂಜೆ ಮತ್ತು ಊಟದ ಸಮಯ. ನಾಲ್ಕಾರು ದಿನ ಕಳೆಯಿತು. ನಾನು ಭವಿಷ್ಯ ಕೇಳುವುದಕ್ಕಿಂತ ಮುಂದೇನು ಎಂಬ ಚಿಂತೆಯಲ್ಲಿದ್ದೆ. ಒಂದು ದಿನ ಅವನೊಂದಿಗೆ ಮಾತನಾಡುತ್ತ ಕುಳಿತಾಗ ನನ್ನನ್ನು ಕುರಿತು ಹೇಳಿದ. ಅವನಿಗೆದುರಾಗಿ ನಾನು ಕುಳಿತಿದ್ದೆ. ಮಾತು ಮುಗಿದು ಮೌನ ಆವರಿಸಿತ್ತು. "ಇದ್ದ ಸ್ಥಳ ಬಿಡಬೇಡಿ. ನಿಮಗೆ ತೊಂದರೆ ಬಹಳ ಇದೆ" ಎಂದು ಹೇಳಿದ. ಅವನು ಹೇಳಿದಂತೆ ನಾನು ನನ್ನ ಸ್ಥಳ ಬಿಡಬಾರದಿತ್ತು. ಬಿಟ್ಟಾಯಿತು. ಅನೇಕ ತೊಂದರೆಗಳನ್ನು ಅನುಭವಿಸಬೇಕಾಯಿತು. ಅವನು ನನಗೆ ಮುನ್ನೆಚ್ಚರಿಕೆ ಕೊಟ್ಟಿದ್ದರೂ ನಾನೇಕೆ ಬಿಟ್ಟೆ? ನಾನು ನನ್ನ ಸ್ಥಳ ಬಿಡುವುದೇ ನಿಜವಿದ್ದುದರಿಂದ ನೀವು ನಿಮ್ಮ ಸ್ಥಳ ಬಿಡುವಿರಿ ಎಂದೇಕೆ ಹೇಳಲಿಲ್ಲ. ಅವನು ನನಗೆ ಭವಿಷ್ಯ ಹೇಳಲಿಲ್ಲ, ಎಚ್ಚರಿಕೆ ಹೇಳಿದ.

ಆದರೆ ಅವನು ಏನೋ ಒಂದು ಸಂಗತಿ ಹೇಳಲಾರದೆ ಮುಚ್ಚಿಟ್ಟ . ಅವನ ಮುಖದ ಮೇಲೆ ನಗೆ ಮೂಡಿತ್ತು. ಅದೇಕೆಂದು ನನಗೆ ತಿಳಿಯಲಾರದೆ ಹೋಯಿತು. ಅದು ನನ್ನ ಜೀವನದ ಒಂದು ಘಟನೆ.

ಅದು ಸಂಭವನೀಯವೆಂಬುದು ಕೂಡ ನನಗೆ ಅನಿಸಿದೆ. ಅವನೇನೂ ನನಗೆ ಈ ಸಂಭವನೀಯ ಘಟನೆಯ ಬಗೆಗೆ ಒಡನುಡಿಯಲಿಲ್ಲ. ಅವನು ತಿಳಿದುಕೊಂಡ ಘಟನೆ ನಿಜವೇ ಆದರೂ ನನಗೆ ನೋವಿಲ್ಲ. ನಾನು 'ಶುಭಸ್ಯ ಶೀಘ್ರಂ' ಎನ್ನುತ್ತೇನೆ.

ಇಂಗ್ಲಂಡಿನ ದೊರೆ ಎಡ್ವರ್ಡ್ ಒಮ್ಮೆ ಹೀಗೆಯೆ ಚೀರೋನನ್ನು ಭವಿಷ್ಯ ಕೇಳಿದನಂತೆ. ತಾನು ದೊರೆಯಾಗಿ ಕೇಳಿದರೆ ಚೀರೋ ಇದ್ದುದನ್ನು ಇದ್ದಂತೆ ಹೇಳಲಿಕ್ಕೆ ಹಿಂಜರಿಯಬಹುದೆಂದು ತೆರೆಯ ಮರೆಯಲ್ಲಿ ನಿಂತು ತನ್ನ ಕೈ ತೋರಿಸಿ "ನಾನು ಯಾವಾಗ ಸಾಯುತ್ತೇನೆ ಹೇಳು" ಎಂದು ಕೇಳಿದನಂತೆ. "ನೀವು ದೋಣಿಯ ದುರಂತದಲ್ಲಿ ಸಮುದ್ರದ ಮಧ್ಯೆ ಕೆಲವೇ ದಿನಗಳಲ್ಲಿ ಸಾಯುವಿರಿ" ಎಂದು ಚೀರೋ ಹೇಳಿದನಂತೆ. ಎಡ್ವರ್ಡ್ ಕೇಳಿದ ಎಂದು ಚೀರೋ ಹೇಳಿದ. ಚೀರೋ ಹೇಳಿದ್ದಂತೆ ಎಡ್ವರ್ಡ್ ಮರಣವನ್ನಪ್ಪಿದ.

ನಾವು ಯಾವಾಗ ಸಾಯುತ್ತೇವೆ ಎಂದು ಏಕೆ ಕೇಳುತ್ತಾರೆ? ಸಾವನ್ನಪ್ಪಲು ಕುತೂಹಲಿಗಳಾಗಿರುವವರೂ ಇದ್ದಾರೆ. ಜೀವನದಲ್ಲಿ ಹುಟ್ಟಿದ ಮೇಲೆ ಸಾಯುವುದರ ವಿನಾ ಮತ್ತೇನಿದೆ? ಜಾತಸ್ಯ ಮರಣಂ ಧ್ರುವಂ.

ಜಾತಕದಲ್ಲಿ ಮಾರಕ ಗ್ರಹದ ದೆಸೆ ಬಂತೆಂದರೆ ಮರಣ ತಪ್ಪುವುದಿಲ್ಲ. ಜಾತಕದ ಪ್ರಮಾಣದಿಂದ ಎಲ್ಲ ಪೂರ್ವ ನಿಶ್ಚಿತ. ಹೀಗೆ ಆದಾಗ ಭವಿಷ್ಯದ ಬಗೆಗೆ ಕುತೂಹಲವಾಗಲಿ ಉತ್ಸುಕತೆಯಾಗಲಿ ಉಳಿಯುವುದಿಲ್ಲ. ಆದರೆ ಜೀವನದ ಎಲ್ಲ ಆಗುಹೋಗುಗಳು ರೈಲಿನಂತೆ ನಿಶ್ಚಿತ ಪಥದಲ್ಲಿ ನಿಯಮಿತ ವೇಳೆಯಂತೆ ನಡೆಯುವುದಿಲ್ಲ. ಸಮಯ ಸಂದರ್ಭ, ಸನ್ನಿವೇಶ ಎಲ್ಲ ಅಥವಾ ಅನೇಕ ಘಟನೆಗಳಿಗೆ ಕಾರಣವಾಗುತ್ತವೆ. ಮೇಲಾಗಿ ನಾವೊಬ್ಬರೇ ಈ ಜಗತ್ತಿನಲ್ಲಿ ಜೀವಿಸುತ್ತಿಲ್ಲ. ನಮ್ಮ ಜೀವನ ಏಕಾಂಗಿಯಾಗಿಲ್ಲ. ಸಾವು, ಬದುಕು, ಆಗುಹೋಗುಗಳು ನಮ್ಮನ್ನು ಮಾತ್ರವಲ್ಲದೆ ಸುತ್ತು ಮುತ್ತಲಿನ ಪರಿಸರ ಹಾಗು ಜನರನ್ನು ಹೊಂದಿಕೊಂಡಿವೆ.

ಒಮ್ಮೆ ಏನಾಯಿತೆಂದರೆ ಒಬ್ಬ ಎಂದಿನಂತೆ ರಾತ್ರಿ ಮನೆ ಬಿಟ್ಟು ಊರ ಹೊರಗಿನ ತನ್ನ ತೋಟಪಟ್ಟಿ ಕಾಯಲು ತೋಟದ ಗುಡಿಸಲಿಗೆ ಬಂದು ಮಲಗಿದ. ಆದರೆ ಅಂದು ರಾತ್ರಿ ಅವನಿಗೆ ಅದೇಕೋ ಅಲ್ಲಿಂದ ನೆರೆಯ ಊರಿಗೆ ಹೋಗಿಬಿಡುವ ಮನಸ್ಸಾಯಿತು. ತತ್‌ಕ್ಷಣ ಅಲ್ಲಿಂದ ಕಾಲು ಕೀಳಬೇಕೆಂಬ ಬಲವಾದ ಇಚ್ಛೆಯಾಯಿತು. ಕೂಡಲೇ ಅವನು ಅಲ್ಲಿಂದ ನೆರೆಯೂರಿಗೆ ಕಾಲು ನಡಿಗೆಯಲ್ಲಿ ಹೊರಟುಹೋದ. ಮುಂದೇನಾಯಿತೆಂದರೆ, ಅಂದೇ ರಾತ್ರಿ ಅವನಿಗೆ ಆಗದವರು ತೋಟಕ್ಕೆ ನುಗ್ಗಿ ಗುಡಿಸಲಿಗೆ ಬೆಂಕಿ ಇಟ್ಟರು. ಗುಡಿಸಿಲು

ಸುಟ್ಟು ಬೂದಿಯಾಗಿ ಹೋಯಿತು. ಅವನು ಸತ್ತನೆಂದು ಎಲ್ಲರೂ ಬಗೆದರು. ಆದರೆ ಅವನು ಬದುಕಿದ್ದ. ಅವನ ಪ್ರಜ್ಞೆಯೆ ಅವನನ್ನುಳಿಸಿತು. ಮರಳಿ ಊರಿಗೆ ಬಂದ.

ಜೀವ ಸಾಯಬೇಕೆನ್ನುವುದಿಲ್ಲ, . ಬದುಕಬೇಕೆನ್ನುತ್ತದೆ. ನಾವು ವಾಸಿಸುವ ಮನೆಯನ್ನು ಕೆಡವಬೇಕೆಂದು ನಮಗೆ ಯಾರಿಗೂ ಅನಿಸುವುದಿಲ್ಲ. ಮನೆ ಬಿಟ್ಟು ಹೋಗಬೇಕೆಂದೂ ಅನಿಸುವುದಿಲ್ಲ. ಆದರೆ ಒಮ್ಮೊಮ್ಮೆ ಮನೆಯ ಮಾಲಕ ಬಂದು ಬಾಡಿಗೆದಾರರನ್ನು ಮನೆ ಬಿಟ್ಟು 'ಓಡಿಸಿಬಿಡುವಂತೆ ಜೀವನದಲ್ಲಿಯೂ ನಮ್ಮನ್ನು ಓಡಿಸುವವರು ಇರುತ್ತಾರೆ. ಮನೆಮಠ ಆಶ್ರಯವಿಲ್ಲದ ಈ ಜೀವ ಜಂಗಮವಾಗಿ ಬದುಕುತ್ತದೆ. ನಿತ್ಯ ಜಂಗಮ ಜೀವಿಗೆ ಆಶ್ರಯವೆಲ್ಲಿ? ಆಧಾರವೆಲ್ಲಿ? ದೇಹಧಾರಿ ಜೀವಕ್ಕೆ ಇವೆರಡೂ ಬೇಕು. ಮಾನವ ಹಕ್ಕಿಯಂತೆ ಹಾರುತ್ತಾನೆ ನಿಜ. ಹಕ್ಕಿಯಂತೆ ತನ್ನ ಗೂಡು ತಾನು ಕಟ್ಟಬಲ್ಲನೆ?

ಮಾನವನಂತಹ ಪರಾವಲಂಬಿ ಜೀವಿ ಮಾನವನೇ ಆಗಿದ್ದಾನೆ. ತನಗೆ ಅಗತ್ಯವಿರುವ ಸಾಹಿತ್ಯಗಳನ್ನು ಸಂಗ್ರಹಿಸುವದರಲ್ಲಿಯೆ ಅವನ ಪರಮಾಯುಷ್ಯ ಕಳೆದುಹೋಗಿದೆ. ಕೊಡು ತೆಗೆದುಕೊಳ್ಳುವುದರಲ್ಲಿ ಸಮಯ ಸಂದು ಹೋಗಿದೆ. ಇದೇ ಸಾವು ಬದುಕಿನ ಹೋರಾಟವೆಂದು ಅವನು ತಿಳಿದಿದ್ದಾನೆ. ದೇಹ ಸುಕ್ಕುಗಟ್ಟುವವರೆಗೂ ಬದುಕಿದವರಿದ್ದಾರೆ. ದೇಹದ ರಕ್ತ ಮಾಸುವುದರೊಳಗೆ ಸಾವನ್ನಪ್ಪಿದವರೂ ಇದ್ದಾರೆ. ಸಾವು ಬದುಕಿನ ಹೋರಾಟ ಓಟಗೆಯೇ ಎಂದು ಹೇಳಲುಬಾರದು. ಇತ್ತೀಚೆ ಜರುಗಿದ ಮೋರ್ವಿ ದುರಂತದಲ್ಲಿ ಜಲಪ್ರಳಯವೆ ಆಗಿ ಅಸಂಖ್ಯ ಜನ ಸತ್ತರು. ಅನೇಕ ಪಶುಪಕ್ಷಿ ಸತ್ತವು. ಈ ಬೃಹತ್ ಹಾಗು ವ್ಯಾಪಕ ಮಾರಣಹೋಮವನ್ನು ತಪ್ಪಿಸಲು ಯಾರಿಂದ ಸಾಧ್ಯವಾಯಿತು? ದೇಶದ ಅಥವಾ ಜಗತ್ತಿನ ಯಾವ ಭವಿಷ್ಯವಾದಿಯೂ ಈ ದುರಂತವನ್ನು ಭವಿಷ್ಯ ನುಡಿಯಲಿಲ್ಲ. ಅಷ್ಟಗ್ರಹ ಕೂಟದಿಂದ ಜಗತ್ತೇ ಪ್ರಳಯದಲ್ಲಿ ಮುಳುಗುವುದೆಂದು ಭವಿಷ್ಯ ನುಡಿದ ಜ್ಯೋತಿರ್ವಿಜ್ಞಾನಿಗಳು ಮೋರ್ವಿ ಅಣೆಕಟ್ಟು ಒಡೆದುಹೋಗುವುದನ್ನು ಮುಂದಾಗಿ ಹೇಳ[illegible]. [illegible] ಭವಿಷ್ಯವಾದಿಗಳ ಲಕ್ಷ್ಯ ಗ್ರಹಕೂಟಗಳ ಮೇಲಿದ್ದಿರಬೇಕು. ಗ್ರಹಗಳು ಏನೆಲ್ಲವನ್ನೂ ಹೇಳುತ್ತಿರುತ್ತವೆ. ಇಂತಹ ಪ್ರಾಕೃತಿಕ ದುರಂತಗಳ ಬಗೆಗೆ ಏಕೆ ಏನೂ ಹೇಳಲಿಲ್ಲವೆಂಬುದು ಆಶ್ಚರ್ಯ!

ಈಗ ಜಗತ್ತಿನಲ್ಲಿ ಎಲ್ಲ ವ್ಯವಹಾರಗಳು, ಆಗು ಹೋಗುಗಳು ಮಾನವರ ವಶದಲ್ಲಿಯೇ ಇವೆ. ಅರ್ಥಾತ್ ಅವನ ನಿಯಂತ್ರಣದಲ್ಲಿವೆ. ಜಲ ಮಂಡಲದಲ್ಲಾದ ವ್ಯತ್ಯಯವನ್ನು ಅವನು ಅರಿಯಬಲ್ಲವನಾಗಿದ್ದ. ಅದು ಅವನ ಹತೋಟಿಯಲ್ಲಿತ್ತು. ಅವನ ಜ್ಞಾನಕ್ಕೆ ಸೀಮಿತಗೊಂಡುದಾಗಿತ್ತು. ಗ್ರಹಗಳಾದರೊ ಅವನ ಹತೋಟಿಯಿಂದ ಹೊರಗೆ. ಅವನು ಅವುಗಳನ್ನು ನಿಯಂತ್ರಿಸಲಾರ. ಮಾನವನ ಅಸಭ್ಯವರ್ತನೆಗೆ ಪ್ರಕೃತಿಯೂ ರೋಸಿದಂತೆ ಕಾಣುತ್ತದೆ. ಅವನ ಹವಾಮಾನ ನಿಯಂತ್ರಣ ಜ್ಞಾನಕ್ಕೆ ಹದ್ದುಮೀರಿ ಪ್ರಕೃತಿ ನಡೆದುಕೊಂಡಿದೆ. ಚಂಡಮಾರುತಗಳ ಹಾವಳಿ ಒಂದು ದೃಷ್ಟಾಂತ.

ಮಾನವನ ಜೀವನದಲ್ಲಿ ಕೂಡ ಇಂಥ ಹದ್ದು ಮೀರಿದ ಘಟನೆಗಳು ನಡೆಯುತ್ತಿವೆ. ಅದಕ್ಕೆ ಜವಾಬ್ದಾರರು ಗ್ರಹಗಳಲ್ಲ. ಧರ್ಮ ಕರ್ಮ ಎಂದು ಗ್ರಹಗಳನ್ನು ದೂಷಿಸುವುದರಲ್ಲಿ ಏನು ಅರ್ಥವಿದೆ?



ಕಾರ್ಟೂನ್: [illegible]

"ನಿಜವಾಗಿಯೂ ವರದಕ್ಷಿಣೆ ತಗೊಳ್ಳಿಲ್ಲಾ ಅಂದ್ರೂ, ಪ್ರಮಾಣಮಾಡಿ ಹೇಳ್ತೀಯೇನೊ? ಅಂತಾನೆ... ಆ ಬಡ್ಡಿ ಮಗ ರಂಗಯ್ಯಾ".

ಗ್ರಹಶಾಸ್ತ್ರ, ಗ್ರಹಚಾರಗಳ ಅರಿವಿದ್ದವರಿಗೆ ಪ್ರಾಕೃತಿಕ ಘಟನೆಗಳ ಬಗೆಗೆ ಮುನ್ಸೂಚನೆಯ ಜ್ಞಾನವಿರುತ್ತದೆ. ಜ್ಯೋತಿಷ್ಯಶಾಸ್ತ್ರದಲ್ಲಿ ಹೇಳಿರುವುದೆಲ್ಲ ನಿಜವೇ, ಜಲ ಕಂಟಕಕ್ಕೆ ಸೂಚಕವಾದ ಗ್ರಹಕೂಟವನ್ನು ಜ್ಯೋತಿರ್ವಿಜ್ಞಾನಿಯು ಕಂಡನಾದರೆ ತಟ್ಟನೆ ಹೇಳಿಬಿಡುತ್ತಾನೆ, ಜಲಗಂಡವಿದೆಯೆಂದು. ಯಾವ ರೇಖಾಂಶ, ಅಕ್ಷಾಂಶ ಇಷ್ಟು ತಿಳಿದರಾಯಿತು. ಜ್ಯೋತಿಶ್ಶಾಸ್ತ್ರಜ್ಞರು ತಿಳಿದೂ ತಿಳಿದೂ ಹೇಳದೆ ಇರುವುದಿಲ್ಲ. ಧರ್ಮದ ದೃಷ್ಟಿಯಿಂದ ಇದು ಪಾಪಕರವೂ ಅನಿಸಿಬಿಡುತ್ತದೆ. ಕಂಡೂಕಂಡೂ ಪಾಪದ ಹೊರೆಯನ್ನು ಯಾರು ಬಯಸುತ್ತಾರೆ? ಯಾವ ಜ್ಯೋತಿಷಿಗೂ ಮೋರ್ವಿ ದುರಂತದ ಬಗೆಗೆ ಹೊಳೆಯಲಿಲ್ಲವೆಂದು ನನಗೆ ಅನಿಸುತ್ತಿದೆ. ದೇಶದಲ್ಲಿ ಚುನಾವಣೆಗಳು ನಡೆದಿರುವಾಗ ಯಾರು ಗೆಲ್ಲುತ್ತಾರೆಂದು ಅವರು ನೋಡುತ್ತಾರೆ. ಅದನ್ನು ಮುಂದಾಗಿ ಹೇಳುತ್ತಾರೆ ಕೂಡ.

ಸಾಮಾನ್ಯ ಪಂಚಾಂಗದಲ್ಲಿ ನಮಗೆ ಮಳೆ–ಬೆಳೆ, ಪ್ರಾಕೃತಿಕ ಬದಲಾವಣೆ, ಗುಡುಗು–ಮಿಂಚು ಸಹಿತ ಜ್ಞಾನ ನಮಗೆ ಸಿಗುತ್ತದೆ. ಭವಿಷ್ಯವಾದಿಗಳ ಕೆಲಸ ಇದಕ್ಕಿಂತ ಹೆಚ್ಚಿಗಿರುವುದಿಲ್ಲ. ಗಣಿತಜ್ಞರು ಲೆಕ್ಕಾಚಾರ ಹಾಕಿ ಹೇಳಿದುದನ್ನು ಭವಿಷ್ಯವಾದಿಗಳು ಊಹಿಸಿ ಹೇಳುತ್ತಾರೆ.

ಭವಿಷ್ಯವಾದಿಯು ಹೇಳುವುದೆಲ್ಲ ನಿಜವಾಗಬೇಕೆಂದರೆ ಜಗತ್ತಿನಲ್ಲಿ ಒಳ್ಳೆಯದು ಕೆಟ್ಟದು ಎರಡೂ ಇವೆ. ಜ್ಯೋತಿಶ್ಶಾಸ್ತ್ರವು ಎರಡನ್ನೂ ಒಳಗೊಂಡಿದೆ. ತಮಗೆ ಒಳ್ಳೆಯದು ಮಾತ್ರ ಬೇಕು ಎಂದರೆ ಒಳ್ಳೆಯದನ್ನು ಮಾತ್ರ ಇಟ್ಟುಕೊಂಡು ಕೆಟ್ಟದ್ದನ್ನು ಎಲ್ಲಿಗೆ ಸಾಗಹಾಕುವುದು? ಸಮುದ್ರಮಥನ ಮಾಡಿದಾಗ ಅಮೃತ ದೊರೆತಂತೆ ಹಾಲಾಹಲವೂ ಉಕ್ಕಿ ಬಂದಿತು. ಅಮೃತವನ್ನು ಹಂಚಿಕೊಂಡಂತೆ ಹಾಲಾಹಲವನ್ನು ಯಾರು ಹಂಚಿಕೊಳ್ಳುತ್ತಾರೆ? ಜಗತ್ತಿನ ಎಲ್ಲ ಕೆಟ್ಟ ಸಂಗತಿಗಳೂ ನಿಜವೇ ಆಗುವುದಾದರೆ ಅದರ ಘೋರ ಪರಿಣಾಮಗಳನ್ನು ನುಂಗುವ ಪರಶಿವನನ್ನು ಎಲ್ಲಿಂದ ತರುವುದು? ಶನಿಗ್ರಹದಲ್ಲಿ ಬರೀ ಧೂಮ ತುಂಬಿದೆಯಂತೆ. ಇಲ್ಲಿ ಸೂರ್ಯನ ಉರಿಯುತ್ತಿರುವ ಪ್ರಚಂಡ ಬೆಂಕಿಗೆ ಜಗತ್ತೇ ಧಗಧಗಿಸುತ್ತಿದೆ. ಶನಿಗ್ರಹದ ಬಳಿ ಮಾತ್ರ ಹೊಗೆಯಾಡುತ್ತಿದೆ. ಅಡುಗೆ ಮಾಡುವಾಗ ಒಲೆಯ ಬೆಂಕಿಯಿಂದ ಹೊಗೆ ನೇರ ಗವಾಕ್ಷಿಗೆ ಹೋಗದೆ ಹೊರಗೆ ಬಂದರೆ ಕಣ್ಣಿಗೆ ಹಾಯ್ದು ಕಂಬನಿ ಸುರಿಯುತ್ತದೆ. ಶನಿ ನಮ್ಮ ಜಾತಕದಲ್ಲಿ ಬಂದಿದ್ದಾನೆಂದರೆ ಅವನ್ನೇ ಮಾಡುತ್ತಾನೆ. ಶನಿಗ್ರಹವು ವೇದಾಂತಿ ಗ್ರಹ. ಇವನಿಂದ ವೈರಾಗ್ಯ ಪ್ರಾಪ್ತಿಯಾಗುತ್ತದೆ. ಕಷ್ಟ ಕಾರ್ಪಣ್ಯಗಳಿಂದ ನಿರಾಶೆ ಹೊಂದುವುದಕ್ಕಿಂತ ವೈರಾಗ್ಯ ತಳೆಯುವುದು ಒಳ್ಳೆಯದು. ವೈರಾಗ್ಯದಿಂದ ಜ್ಞಾನವಿದೆ. ಜ್ಞಾನದಿಂದ ಮೋಕ್ಷವಿದೆ. ಭವಿಷ್ಯವಾದಿ ಮತ್ತು ಜೋತಿಶ್ಶಾಸ್ತ್ರಗಳಲ್ಲಿ ಒಂದನ್ನು ಆರಿಸುವುದಾದರೆ ನಾನು ಜ್ಯೋತಿಶ್ಶಾಸ್ತ್ರವನ್ನು ಆರಿಸುತ್ತೇನೆ. ಶನಿಯು ಯಾವ ಡಿಗ್ರಿಯಲ್ಲಿದ್ದಾನೆ? ಎಲ್ಲಿಂದ ಆ ಡಿಗ್ರಿ ಪ್ರಾರಂಭ? ಶನಿಯು ಡಿಗ್ರಿಯಾದರೂ ಏನು? ಎಷ್ಟು? ಇದನ್ನೆಲ್ಲ ಜ್ಯೋತಿಶ್ಶಾಶ್ತ್ರ ಹೇಳುತ್ತದೆ. ಜ್ವರದ ತಾಪವನ್ನು ಥರ್ಮಾಮೀಟರ್ ತಿಳಿಸುವಂತೆ ಜಾತಕನ ಹಣೆಯ ಬರಹವನ್ನು ಶನಿಗ್ರಹವು ಸೂಚಿಸುತ್ತದೆ. ಜ್ವರದ ತಾಪ ತಿಳಿದು ವೈದ್ಯನು ಚಿಕಿತ್ಸೆ ನೀಡುವಂತೆ ಜ್ಯೋತಿಶ್ಶಾಸ್ತ್ರಜ್ಞನು ಪರಿಹಾರ ನೀಡುತ್ತಾನೆ. ಭವಿಷ್ಯವಾದಿಯಾದರೋ ಸಲಹೆಗಾರ ವೈದ್ಯನಂತೆ ಕೇವಲ ತಾಪತ್ರಯಗಳನ್ನು ನುಡಿಯುತ್ತಾನೆ.

ಒಬ್ಬ ಸಾಮಾನ್ಯ ಕಾರಕೂನ ಅಥವಾ ತಾಲೂಕು ಅಧಿಕಾರಿ ಕೊಡಬೇಕಾದ ಸೌಲಭ್ಯವನ್ನು ಕೊಡದೆ ಹೋದರೆ ನಾವು ಸುಪ್ರೀಂ ಕೋರ್ಟಿನ ವರೆಗೂ ಎಡತಾಕಬೇಕಾಗುತ್ತದೆ. ಒಬ್ಬ ಕೆಳ ದರ್ಜೆಯ ನ್ಯಾಯಾಧೀಶ ಕೊಟ್ಟ ಆಜ್ಞೆಯನ್ನು ರಾಷ್ಟ್ರಾಧ್ಯಕ್ಷನೂ ತೆಗೆದು ಹಾಕಲಾರ. ಆದರೆ ಆ ಆಜ್ಞೆಯನ್ನು ನ್ಯಾಯಾಧೀಶನೇ ಕೊಡದೆ ಹೋದರೆ?

ಜ್ಯೋತಿಶ್ಶಾಸ್ತ್ರಕ್ಕೂ ಜ್ಯೋತಿಷಿಗೂ ಸಂಬಂಧ ಇಲ್ಲಿ ಬಹಳ ಗಾಢವಾಗುತ್ತದೆ. ಎಷ್ಟು ಗಾಢವಾಗಿರುತ್ತದೆಯೆಂದರೆ ಜ್ಯೋತಿಷಿಗೆ ಜ್ಯೋತಿ–ಶ್ಶಾಸ್ತ್ರದ ಹೊರಗೆ ಏನೊಂದೂ ಉಳಿದಿರುವುದಿಲ್ಲ. ನಾವು ಅನೇಕ ಬಾರಿ ಜ್ಯೋತಿಷಿಗಳನ್ನು ಕಂಡಾಗ ಭವಿಷ್ಯ ಕೇಳಬೇಕೆನಿಸುತ್ತದೆ. ನನಗಂತೂ

ಒಬ್ಬ ವೈದಿಕ ಜ್ಯೋತಿಷಿಗಳು ಭೇಟಿಯಾದರು. ನನ್ನ ಸಹವಾಸಿ ಬಂಧುವೊಬ್ಬರ ಮೂಲಕ ಅವರಿಗೆ ನಾನು ಜ್ಯೋತಿಷ್ಯ ಬಲ್ಲವನೆಂದು ತಿಳಿದಿತ್ತು. ಅವರು ಹಸ್ತ ತೋರಿಸಿ ಭವಿಷ್ಯ ಹೇಳಿ ಅಂದರು, ನಾನು ಹೇಳುವುದನ್ನು ಅವರಿಗೆ ಹೇಳಿದೆ. ಹೇಳಬಾರದ್ದು ಏನೂ ಇರುವುದಿಲ್ಲ. ನಾನು ಹೇಳುವುದೆಲ್ಲ ಸರಿ ಎಂದು ಅವರೆಂದರು, ಅವರೂ ಜ್ಯೋತಿಷ್ಯ ಬಲ್ಲವರೇ ಆಗಿದ್ದರಿಂದ. ಅದು ಹೇಗೆ ಸಾಧ್ಯ? ಇದು ಹೇಗೆ ಎಂದು ಕೇಳತೊಡಗಿದ್ದರೆ ನಾನು ಶಾಸ್ತ್ರದ ಸುರಿಮಳೆಯನ್ನು ಕರೆಯುತ್ತಿದ್ದೆ. ಅಂತಹರಿಗೆ ಬೇಕಾಗಿರುವುದು ಶಾಸ್ತ್ರ ವಿಚಾರ. ನಾನು 'ಅಂತಹ ವಿಚಾರ ಹೇಳುವುದೆಲ್ಲ ಪುಸ್ತಕಗಳಲ್ಲಿ ಹೇರಳವಾಗಿ ದೊರೆಯುತ್ತದೆ. ನನ್ನಂತಹರನ್ನು ಕೇಳುವ ಬದಲು ಅವರು ಪುಸ್ತಕಗಳಿಂದ ತಮ್ಮ ವಿಚಾರ ತಿಳಿದುಕೊಳ್ಳಬಹುದು ಎಂದು ಹೇಳುತ್ತೇನೆ. ಹಸ್ತಸಾಮುದ್ರಿಕಕ್ಕೂ ಜ್ಯೋತಿಷ್ಯಕ್ಕೂ ನೇರ ಸಂಬಂಧವಿದೆಯೆಂದು ಅವರಿಗೆ ಅಂದು ತಿಳಿಯಿತು. ಹಸ್ತ ನೋಡಿಯೆ ಅವರ ಜಾತಕದ ಗ್ರಹಗತಿ ತಿಳಿಸುವವನಾಗಿದ್ದೆ. ಒಬ್ಬ ಸೈನಿಕ ಅಧಿಕಾರಿಗೂ ಹಸ್ತ ನೋಡಿ ಹೇಳಿದೆ. ಕೆಲವು ದಿನಗಳ ನಂತರ ಅವರು ತಮ್ಮ ಕುಂಡಲಿ ಕೊಟ್ಟರು. ಅವರ ಸಮಸ್ಯೆಗಳಿಗೆ ನಾನು ಉತ್ತರ ತಿಳಿಸಿದ್ದೆ. ಅವರಿಗೆ ಸಮಾಧಾನವಾಯಿತೆಂದು ಅವರು ತಮ್ಮ ಮಿತ್ರರಿಗೆ ಬರೆದ ಪತ್ರದಿಂದ ತಿಳಿಯಿತು. ಇದರಿಂದ ಜ್ಯೋತಿಷ್ಯ ಹೇಳಿದವರಿಗೂ ಸಮಾಧಾನವಾಗುತ್ತದೆ.

ಜ್ಯೋತಿಷ್ಯಶಾಸ್ತ್ರದಲ್ಲಿ ಆಸಕ್ತಿಯಿದೆಯೆಂದು ತಮ್ಮ ಭವಿಷ್ಯ ತಿಳಿದುಕೊಳ್ಳುವವರು ಅನೇಕರಿದ್ದಾರೆ. ಅಂತಹವರಲ್ಲಿ ನಾನೂ ಒಬ್ಬ. ನಾನು ಅನೇಕ ಜ್ಯೋತಿಷಿಗಳನ್ನು ಭೇಟಿಯಾಗಿದ್ದೇನೆ. ಕರಾರುವಾಕ್ಕಾಗಿ ಹೇಳುವ ಜ್ಯೋತಿಷಿಗಳನ್ನೂ ನಾನು ಕಂಡಿದ್ದೇನೆ. ಒಬ್ಬ ಜ್ಯೋತಿಷಿ ಹೇಳಿದಂತೆ ನನಗೆ ಅಂದಿಗಿಂದಿನ ಸ್ಥಿತಿ ಅವರು ಹೇಳಿದಂತೆಯೆ ಇದೆ. ಇದು ಇಪ್ಪತ್ತು ವರ್ಷಗಳ ಹಿಂದಿನ ಮಾತು. ಹೆಸರಾಂತ ಜ್ಯೋತಿಷಿಗಳನ್ನು ಸಂದರ್ಶಿಸಿದ್ದೇನೆ. ಅವರು ಹೇಳಿದುದೂ ಸರಿ ಎಂದು ನಾನು ಹೇಳುತ್ತೇನೆ. ಆದರೆ ಜ್ಯೋತಿಷಿಗಳಲ್ಲಿ ಒಂದು ಗುಣವಿದೆ. ಅವರು ಶಾಸ್ತ್ರಕ್ಕೆಂದೂ ವಂಚನೆ ಮಾಡುವುದಿಲ್ಲ; ಶಾಸ್ತ್ರ ಬಿಟ್ಟು ಮಾತನಾಡುವುದಿಲ್ಲ. ಹೀಗಾದರೆ ಗತಿ ಏನು ಎಂದು ನನಗನಿಸತೊಡಗಿದೆ. ರೋಗಿಗಿಂತ ವೈದ್ಯಕಶಾಸ್ತ್ರ ದೊಡ್ಡದಾದರೆ ರೋಗಿಗಳು ಬದುಕುವುದು ಹೇಗೆ? ಆದರೆ ಜ್ಯೋತಿಷ್ಯ ಇತರ ಶಾಸ್ತ್ರಗಳಂತಲ್ಲ. ಸಂಗೀತದಂತೆ ಅದೂ ಒಂದು ಸುಂದರವನ. ಗಾಯಕನು ಇತರರ ಸಂತೋಷಕ್ಕೆ ಹಾಡುವಂತೆ ತನ್ನ ಸಂತೋಷಕ್ಕೂ ಹಾಡುತ್ತಾನೆ. ಜ್ಯೋತಿಶ್ಶಾಸ್ತ್ರದಲ್ಲಿ ಜ್ಞಾನವಿದೆ, ಮನರಂಜನೆ ಇದೆ. ಅದರ ಅಭ್ಯಾಸದಲ್ಲಿ ತೃಪ್ತಿ, ಸಮಾಧಾನವಿದೆ. ಜ್ಞಾನರಂಜನೆಗಿಂತ ಮಿಗಿಲಾದುದು ಬೇರೆ ಯಾವುದಿದೆ?

ಶಾಸ್ತ್ರ ಹೇಳುವವರಿಗಿಂತ ಹೇಳಿಸುವವರು ದೊಡ್ಡವರು. ಅವರ ಸಂಖ್ಯೆ ಒಂಭತ್ತು. ಏಳು ಗ್ರಹ ದೃಗ್ಗೋಚರ. ಇಬ್ಬರು ಅಗೋಚರ. ಒಬ್ಬ ಮಾತ್ರ ಯಾರನ್ನೂ ಬೆಳಗಗೊಡುವುದಿಲ್ಲ. ಇನ್ನೊಬ್ಬ ತಾನಾಗಿ ಬೆಳಗುತ್ತಾನೆ. ಉಳಿದವರು ಇದ್ದೂ ಇಲ್ಲದಂತೆ ದೂರ ದೂರ ಆಗಾಗ ಮಿನುಗುತ್ತಿರುತ್ತಾರೆ. ಹಾಗಾದರೆ ಅವರಲ್ಲಿ ಯಾರು ಯಾವಾಗ ಯಾವುದಕ್ಕೆ ಹೇಗೆ ಕಾರಣರಾಗುತ್ತಾರೆ? ಯಾರು ಎಲ್ಲಿದ್ದಾರೆ? ಯಾವ ಅವಸ್ಥೆಯಲ್ಲಿದ್ದಾರೆ ಎಂಬುದು ಜ್ಯೋತಿಷಿಗಳಿಗೆ ಗೊತ್ತೇ ಆಗುವುದಿಲ್ಲ. ಇಂಥವರು ಇಲ್ಲಿದ್ದಾರೆ, ಹೀಗೆ ಇದ್ದಾರೆ, ಇಂಥದನ್ನು ಮಾಡುತ್ತಾರೆ ಎಂದು ಹೇಳುವವರು ಇದ್ದಾರೆ. ಅವರು ಈ ಜ್ಯೋತಿಷಿಗಳಲ್ಲಿ ಶಾಸ್ತ್ರಜ್ಞರು. ಶಾಸ್ತ್ರ ಬರೆದವರು. ಅಂಥವರು ಈಗ ಯಾರೂ ಇಲ್ಲ. ಹೇಳುವದನ್ನೆಲ್ಲ ಹೇಳಿ, ಬರೆಸುವುದನ್ನೆಲ್ಲ ಬರೆಸಿ, ಬರೆಯುವುದನ್ನು ಬರೆದು, ತಿಳಿಸುವುದನ್ನೆಲ್ಲ ತಿಳಿಸಿ ಕಾಲಗರ್ಭದಲ್ಲಿ ಅಡಗಿಯೋ ಮಾಯವಾಗಿಯೋ ಇರುವ ಋಷಿ ಮುನಿಗಳು ಇವರು. ದ್ರಷ್ಟಾರರು, ಪ್ರಾತಃಸ್ಮರಣೀಯರು. ಇಂಥ–ವರನ್ನು ಯಾವ ವಿಜ್ಞಾನ ಶೋಧಿಸಬೇಕೋ, ಪರಮಾತ್ಮನೇ ಬಲ್ಲ.

✡



ಅದು ಪಾರ್ಶ್ವವಾಯುವನ್ನು ತರುತ್ತದೆ

# ಮಾರಕ ಧಾನ್ಯ ಕೇಸರಿ ಬೇಳೆ

ಮೂಲ: **ಡಾ. ವಿ. ನಾಗರಾಜನ್** ಕನ್ನಡಕ್ಕೆ: **ಎಸ್. ವಿಶ್ವನಾಥ**

ಈ ಘಟನೆ ಭಾರತದ ಯಾವ ಭಾಗದಲ್ಲಿ ಬೇಕಾದರೂ ನಡೆಯಬಹುದು:

ಬೆಳಗಿನ ನಸುಕಿನ ಹೊತ್ತು. ಒಬ್ಬ ತರುಣ ಮುಂಜಾವಿಗೇ ಹೊಲಗದ್ದೆಯಲ್ಲಿ ಕೆಲಸಮಾಡಲು ಹೋಗುತ್ತಾನೆ: ಬದುಕಲು ಆತ ಉಳುಮೆ ಕೆಲಸ ಮಾಡಬೇಕು. ಆದರೆ ಇದಕ್ಕಿದ್ದ ಹಾಗೆ ಅವನ ಕಾಲಿನಲ್ಲಿ ಸಹಿಸಲಸಾಧ್ಯವಾದ ಮರಣಯಾತನೆಯು ನೋವುಂಟಾಗುತ್ತದೆ. ಶಕ್ತಿಗುಂದಿ ನೆಲಕ್ಕೆ ಬೀಳುತ್ತಾನೆ. ನೋವು ಅವನ ಕಾಲಿನ ಮೇಲ್ಭಾಗಕ್ಕೆ, ಹಿಂದಿನ ಕಾಲುಗಳಿಗೆ. ಕಾಲುಗಳ ಮೀನಖಂಡಗಳಲ್ಲಿ (ಕಾಲಿನ ಹಿಂಭಾಗ) ಹರಿದಾಡುತ್ತದೆ. ಮೀನ ಖಂಡಗಳು. ಸೆಳೆತದಿಂದ ಚೆಂಡಿನಾಕಾರಕ್ಕೋ ಅಥವಾ ಮುದ್ದೆಯಾಕಾರಕ್ಕೋ ಸಂಕೋಚಿಸಿಕೊಳ್ಳ ಪ್ರಾರಂಭಿಸುತ್ತವೆ: ಅವನ ಕಾಲ್ಬೆರಳುಗಳು ಮತ್ತು ಪಾದಗಳು ಕೆಳಕ್ಕೆ ಮಡಚಿಕೊಳ್ಳುತ್ತವೆ; ನೋವು ಹೋದ ಮೇಲೆ. ಕಾಲುಗಳು ಸೀಸದಂತೆ ಭಾರವಾಗಿರುವುದು ತೋರುತ್ತದೆ. ಹಳ್ಳಿಯ ಇತರರು ಅವನ ಸುತ್ತ ಮುತ್ತ ಸೇರಿ ಅವನನ್ನು ಅವನ ಮನೆಗೆ ಹೊತ್ತುಕೊಂಡು ಹೋಗುತ್ತಾರೆ. ಮತ್ತೆ ಆತ ನೆಟ್ಟಗೆ ನಡೆಯಲಾರನೆಂಬುದು ಅವರಿಗೆಲ್ಲರಿಗೂ ಗೊತ್ತುಂಟು. ನೆನೆದರೇ ನಡುಕ ಹುಟ್ಟಿಸುವ. ಭಾರತದ ಬಹಳಷ್ಟು ಹಳ್ಳಿಗಳಲ್ಲಿ ಸುಳಿವು ಕೊಡದೇ ಬೆನ್ನಟ್ಟುತ್ತಿರುವ ಕಾಯಿಲೆಯಾದ 'ಲ್ಯಾಥಿರಿಸಂ' ಇನ್ನೊಬ್ಬನನ್ನು ಬಲಿ ತೆಗೆದುಕೊಂಡಿತು!

'ಲ್ಯಾಥಿರಿಸಂ' ನರಮಂಡಲವನ್ನು ಬಾಧಿಸುತ್ತದೆ. ಅದು ಮನುಷ್ಯನನ್ನು ಕೊಲ್ಲುವುದಿಲ್ಲ: ಆದರೆ ಹೆಳವನನ್ನಾಗಿ ಮಾಡುತ್ತದೆ. ಈ ರೋಗವನ್ನು



'ಲ್ಯಾಥಿರಿಸಂ'ನ ನಾಲ್ಕು ಹಂತಗಳು

ವಾಸಿಮಾಡಲು ಸಾಧ್ಯವಿಲ್ಲ. ೧೧ ಮತ್ತು ೩೫ರ ನಡುವಿನಂತರದ ವಯಸ್ಸಿನವರನ್ನು ಅದು ಬಾಧಿಸುತ್ತಿರುತ್ತದೆ. ಮಧ್ಯ ಪ್ರದೇಶದ ಜಿಲ್ಲೆಯೊಂದರ ಜನಸಂಖ್ಯೆ ೬ ಲಕ್ಷ. ಆ ಪೈಕಿ ೨೫ ಸಾವಿರ ಜನರು ಈ ರೋಗದಿಂದ ನರಳುತ್ತಿದ್ದಾರೆ. ಅತಿ ಸಾಮಾನ್ಯ ಆಹಾರದ ಬೆಳೆಯೊಂದರಿಂದಲೇ ಈ ರೋಗಉಂಟಾಗುತ್ತಿದೆಯೆಂಬುದೇ ವಿಧಿಯ ಆಟ!

ಸಸ್ಯಶಾಸ್ತ್ರಜ್ಞರು ಈ ಆಹಾರ ಬೇಳೆಯನ್ನು 'ಲ್ಯಾಥಿರಸ್ ಸಾಟಿವಸ್' ಎಂದು ಕರೆಯುತ್ತಾರೆ. ಆದರೆ ಈ ಬೇಳೆಗೆ ಹೆಚ್ಚು ಬಳಕೆಯಲ್ಲಿರುವ ಹೆಸರೆಂದರೆ 'ಕೇಸರಿ ಬೇಳೆ.' ಕೆಲ ನರಗಳಿಗೆ ವಿಶಿಷ್ಟ ಆಕರ್ಷಣೆ ಹೊಂದಿರುವ ವಿಷವಸ್ತುವು ಈ ಕೇಸರಿ ಬೇಳೆಯಲ್ಲಿದೆ. ಜಠರ–ಕರುಳಿನ ಹಾದಿಯಲ್ಲಿ ಆಹಾರ ಹಾಯ್ದು ಹೋಗುವಾಗ ಈ ವಿಷ–ವಸ್ತುವನ್ನು ದೇಹ ಹೀರಿಕೊಳ್ಳುತ್ತದೆ. ಈ ನರಗಳನ್ನು ಈ ವಿಷವಸ್ತು ಬಂಧಿಸಿದಾಗ ಪಾರ್ಶ್ವವಾಯು ಸಂಭವಿಸುತ್ತದೆ. (ನರಗಳು ಕ್ಷಯಿಸಿ–ಹೋಗಿಯೋ ಅಥವಾ ಅವು ತಮ್ಮ ಸಂವೇದನ ಗ್ರಹಣ ಕಾರ್ಯಗಳನ್ನು ಸರಿಯಾಗಿ ನಡೆಸಲಾಗದೆಯೋ ಹೋದಲ್ಲಿ ಪ್ರಾಪ್ತವಾಗುವ ನರಗಳ ವ್ಯಾಧಿಗೆ ಪಾರ್ಶ್ವವಾಯುವೆನ್ನುತ್ತೇವೆ.)

ಈ ಗಿಡಕ್ಕೆ ಬೇರೆ ಬೇರೆ ಸ್ಥಳಗಳಲ್ಲಿ ಬೇರೆ ಬೇರೆ ಹೆಸರುಗಳಿವೆ: ಮಾತ್ರಾ, ತಿಯೋರಾ, ಬಾತುರಾ, ಘರಾಸ್, ಲಾಂಗ್, ಲಾಖ್, ಲಾತ್ರಿ ದಾಲ್. ಒಂದು ರೀತಿಯ ಬೆಳೆಯಾದ ಇದು ಜಮೀನಿನ ಸರಹದ್ದಿನಲ್ಲಿ ಅಡ್ಡಾದಿಡ್ಡಿಯಾಗಿ ಸೊಂಪಾಗಿ ಬೆಳೆಯುತ್ತದೆ. ಮಧ್ಯ ಪ್ರದೇಶ, ಉತ್ತರ ಬಿಹಾರ್ ಮತ್ತು ಒಡಿಸ್ಸಾದ ಕೆಲ ಭಾಗಗಳಲ್ಲಿ ಇದನ್ನು ಬೆಳೆಯುತ್ತಾರೆ. ಆಂಧ್ರ ಪ್ರದೇಶ, ಮಹಾರಾಷ್ಟ್ರ ಮತ್ತು ಪಶ್ಚಿಮ ಬಂಗಾಳದಲ್ಲಿ ಇದರ ಬೆಳೆ ಕಡಿಮೆ. ಹಳ್ಳಿಗರು ಈ ಕಾಳಿನ ಹಿಟ್ಟಿನಿಂದ ರೊಟ್ಟಿಮಾಡಿ ತಿನ್ನುತ್ತಾರೆ. 'ಲ್ಯಾಂಥಿರಿಸಂ' ರೋಗ ಹೆಚ್ಚಿರುವ ಸ್ಥಳಗಳಲ್ಲಿ ದಿನದ ಆಹಾರದ ಮೂರನೇ ಎರಡು ಭಾಗದಷ್ಟು ಆಹಾರ ಈ ಕೇಸರಿ ಕಾಳಿನ ಹಿಟ್ಟಿನಿಂದ ತಯಾರಿಸಿದ ರೊಟ್ಟಿಯೇ ಆಗಿರುತ್ತದೆ.

ಭಾರತದ ಹಳ್ಳಿಗರಲ್ಲಿ ಈ ಮಾರಕಧಾನ್ಯ ಹೆಚ್ಚು ಜನಪ್ರಿಯವಾಗಲು ಕಾರಣವೇನು? ಲ್ಯಾಥಿರಸ್ ಗಟ್ಟಿಮುಟ್ಟಾದ ಅರ್ಥಾತ್ ಸಹಿಷ್ಣುವಾದ ಗಿಡ. ಬರಗಾಲವಾಗಲಿ ಅಥವಾ ಕೀಟಗಳಾಗಲಿ ಅದಕ್ಕೆ ಬಾಧೆಯುಂಟುಮಾಡಲಾರವು. ಅದರ ಬೆಳಸು ತೆಗೆಯಲು ಅರ್ಥಾತ್ ಆರಂಭಮಾಡಲು ಮಾಡಬೇಕಾದ ಪ್ರಯತ್ನ ಇನ್ನಿತರ ಬೆಳಸುಗಳಿಗೆ ಹೋಲಿಸಿದರೆ ಅತ್ಯಲ್ಪ. ಅದರ ಈ ಸಹಿಷ್ಣುತೆಯ ಗುಣವೇ ಅದನ್ನು ಬರಗಾಲದ ಮಾದರಿ ಬೆಳೆಯನ್ನಾಗಿಸಿದೆ. ಮಳೆ ಬೀಳದೆ ಇದ್ದಾಗ, ಉಳಿದ ಬೆಳೆಗಳೆಲ್ಲಾ ಹಾಳಾದಾಗ, ಲ್ಯಾಥಿರಸ್‌ನ ಆರಂಭಕ್ಕೆ ಎಲ್ಲರೂ ತೊಡುಗುತ್ತಾರೆ. ನಂಬಲರ್ಹವಲ್ಲದ ಮುಂಗಾರು ಮಳೆಯನ್ನೇ ಅವಲಂಬಿಸಿಕೊಂಡು, ಅದನ್ನೇ ನಂಬಿಕೊಂಡು ವ್ಯವಸಾಯ ಮಾಡುತ್ತಿರುವ ದೇಶದಲ್ಲಿ ಕೇಸರಿ

ಬೇಳೆಗಳಂಥವು ಗತ್ಯಂತರವಿಲ್ಲದ ಕೃಷಿ ಉತ್ಪನ್ನಗಳಾಗಿವೆ.

ಈ ಕೇಸರಿ ಕಾಳನ್ನು ಕ್ಷಾಮ ಹಾಗೂ ಬರಗಾಲಕ್ಕೆ ಎಚ್ಚರಿಕೆ ಕ್ರಮವಾಗಿ ಎರಡನೆಯ ಬೆಳೆಯಾಗಿ ಬೆಳೆಯಲಾಗುತ್ತಿರುತ್ತದೆ– ಪ್ರತಿಯೊಂದು ಬರಗಾಲವಾದ ಮೇಲೂ ಈ ಲ್ಯಾಥಿರಿಸಂ ರೋಗ ಸಾಂಕ್ರಾಮಿಕವಾಗಿ ಹರಡುತ್ತಿರುವುದು ಕಾಣಬರುತ್ತದೆ.

ಶೇಕಡಾ ೭೫ರಷ್ಟು ಲ್ಯಾಥಿರಿಸಂ ರೋಗ ಪೀಡಿತರು ಜಮೀನಿಲ್ಲದ ಕೂಲಿಕಾರರು ಎಂಬುದು ಗಮನಿಸಬೇಕಾದ ಅಂಶ. ಬಹಳಷ್ಟು ಹಳ್ಳಿಗಳಲ್ಲಿ ಕೂಲಿಯನ್ನು ಆಹಾರಸಾಮಗ್ರಿಯ ರೂಪದಲ್ಲೇ ಕೊಡುತ್ತಿರುತ್ತಾರೆ. ಹಾಗಾಗಿ ಕೇಸರಿ ಬೇಳೆಯಂಥ ಅತಿ ಕಡಿಮೆ ಬೆಲೆಯ ಆಹಾರ ಸಾಮಗ್ರಿ ಆಗ ಕಣ್ಣಿಗೆ ಸ್ಪಷ್ಟವಾಗಿ ಗೋಚರಿಸುತ್ತದೆ. ಜನರಿಗೂ ಅಷ್ಟೆ; ಈ ಕೇಸರಿ ಬೇಳೆಯ ಮೇಲೆ ತುಂಬಾ ಇಷ್ಟ. ಏಕೆಂದರೆ ಇದು ಗೋದಿ ಕಡಲೆಬೇಳೆಗಿಂತ ಹೆಚ್ಚು ಸಿಹಿಯಾಗಿದ್ದು ರುಚಿಯಾಗಿದ್ದು ತೂಕದ್ದಾಗಿರುತ್ತದೆ.

ಲ್ಯಾಥಿರಿಸಂ ರೋಗದ ಕಾರಣವಾದ 'ಲ್ಯಾಥಿರಸ್' ಇತ್ತೀಚಿನ ಶೋಧವಲ್ಲ. ಭಾರತ ದೇಶಕ್ಕೆ ಮಾತ್ರ ಈ 'ಲ್ಯಾಥಿರಿಸಂ' ರೋಗ ಸೀಮಿತವಾಗೂ ಇಲ್ಲ. ಪುರಾತನ ಗ್ರೀಸಿನ ವೈದ್ಯ ಹಿಪೊಕ್ರೆಟಸ್ ಸಾಂಕ್ರಾಮಿಕ ರೋಗಗಳ ಬಗ್ಗೆ ಈ ರೀತಿ ಬರೆದಿದ್ದಾನೆ:

"ಐನಾಸ್‌ನಲ್ಲಿ ಕಾಳುಗಳನ್ನು ಸತತವಾಗಿ ತಿಂದ ಗಂಡಸರ ಮತ್ತು ಹೆಂಗಸರ ಕಾಲುಗಳು ಸತ್ವಹೀನವಾದವು; ಆ ಸ್ಥಿತಿ ಹಾಗೆಯೇ ಉಳಿಯುತ್ತಿತ್ತು." ಜರ್ಮನಿಯಲ್ಲಿ ೧೬೭೧ ರಲ್ಲಿ ಡ್ಯೂಕ್ ಆಫ್ ವುರ್ಟನ್‌ಬರ್ಗ್ ಬ್ರೆಡ್ ತಯಾರಿಕೆಯಲ್ಲಿ 'ಲ್ಯಾಥಿರಸ್' ಹಿಟ್ಟು ಬಳಸುವುದನ್ನು ನಿಷೇಧಿಸಿದ್ದ.

ಭಾರತದ ಪುರಾತನ ಆಯುರ್ವೇದ ಗ್ರಂಥವಾದ 'ಭಾವಪ್ರಕಾಶ' ದಲ್ಲಿ ಈ ರೋಗದ ಉಲ್ಲೇಖವಿದೆ. 'ತ್ರಿಪುಟ' ಹೆಳವುತನ ತರಿಸುತ್ತದೆ; ಈ ರೋಗಕ್ಕೆ 'ಕಾಲಯಕಂಜ' ಎಂದು ಹೆಸರು. ಆದರೆ ಮೊದಲ ಬರಹದ ಸುಸ್ಪಷ್ಟ ವರ್ಣನೆಯನ್ನು ಜನರಲ್ ಸ್ಲೀಮನ್ ತಮ್ಮ ಪುಸ್ತಕವಾದ 'ರ್‍ಯಾಂಬಲ್ಸ್ ಮತ್ತು ರೀಕಲೆಕ್ಷನ್ಸ್ ಆಫ್ ಆ್ಯನ್ ಇಂಡಿಯನ್ ಅಫೀಷಿಯಲ್' (೧೮೮೪)ನಲ್ಲಿ ಕೊಟ್ಟಿದ್ದಾನೆ. 'ಲ್ಯಾಥಿರಸ್' ನಿಂದುಂಟಾಗುವ ಪಾರ್ಶ್ವವಾಯುವನ್ನು ಸ್ಲೀಮನ್ ಶಾಶ್ವತವಾದುದೆಂದು ವರ್ಣಿಸಿದ್ದಾನೆ; ಈ ರೋಗ ತಗುಲಿದಾತ ಮತ್ತೆ ಈ ರೋಗದಿಂದ ಮುಕ್ತನಾಗುವುದು ಸಾಧ್ಯವಾಗಿಲ್ಲ ಎಂದಾತ ಹೇಳಿದ್ದಾನೆ.

ಸೂಚನೆ ನೀಡದೆ ಈ ರೋಗ ಬರುವುದೂ ಇಲ್ಲ. ಮೊದಲ ಚಿಹ್ನೆ: ಕಾಲಿನದ ಮೀನುಖಂಡಗಳು ಮುದ್ದೆಯಾಗಿ ಸಂಕೋಚಗೊಳ್ಳುವುದು. ಈ ಮುದ್ದೆಗಳಿಗೆ 'ಲೋಡಾಕಾಸ್' ಎಂಬುದು ಸ್ಥಳನಾಮ. ಅನಂತರ ಸಹಿಸಲಸಾಧ್ಯವಾದ ನೋವು. ಮಾಂಸಖಂಡಗಳು ಭಾರವಾಗಿ ತೋರಿ ಸೆಟೆದುಕೊಳ್ಳುತ್ತವೆ; ಹಾಗಾಗಿ ರೋಗಿ ನಡೆಯಲಾರ. ಕೊನೆಗೆ ರೋಗಿಯಲ್ಲಿ ಪೂರ್ಣ ಪಾರ್ಶ್ವವಾಯು ನೆಲೆ ನಿಲ್ಲುತ್ತದೆ.

ಲ್ಯಾಥಿರಿಸಂನ ಮೊದಲ ಹಂತ 'ದೊಣ್ಣೆಯಿಲ್ಲದ' ಹಂತ. ಈ ಹಂತಕ್ಕೆ ಈ ಹೆಸರೇಕೆಂದರೆ ಈ ಹಂತದಲ್ಲಿನ ರೋಗಿಗೆ ಆಧಾರವಾಗಿ ದೊಣ್ಣೆ ಬೇಕಾಗುವುದಿಲ್ಲ. ಅವನ ಕಾಲಿನ ಮಾಂಸಖಂಡಗಳು ಸೆಟೆದುಕೊಳ್ಳುತ್ತವೆ. ಹಾಗಾಗಿ ರೋಗಿ ಹಿಮ್ಮಡಿಗಳನ್ನು ನೆಲಕ್ಕೆ ಪೂರ್ಣವಾಗಿ ಊರಲು ಅಸಾಧ್ಯವಾಗುತ್ತದೆ. ಆದರೂ ರೋಗಿ ತನ್ನ ಕಾಲ್ಬೆರಳುಗಳ ಆಧಾರದಲ್ಲಿ ನಡೆದಾಡಬಲ್ಲ; ಮೊಣಕಾಲುಗಳನ್ನು ಅಲ್ಪ ಸ್ವಲ್ಪ ಬಗ್ಗಿಸಬಲ್ಲ. ಕಾಲುಗಳ ಹರಡನ್ನು ಚಾಚಬಲ್ಲ. ಪರಿಣಾಮ: ಜಗ್ಗು ನಡೆ (ಸ್ನಾಯುಗಳ ಅನೈಚ್ಛಿಕವಾದ ಘಟ್ಟನೆಯ ಸೆಳವು). ಕತ್ತರಿಯಂಥ ನಡಿಗೆ.

ಎರಡನೆಯ ಹಂತವನ್ನು 'ಒಂದು ದೊಣ್ಣೆ' ಹಂತ ಎಂದು ಹೆಸರಿಸಲಾಗಿದೆ. ಸೆಳವು ಎಷ್ಟೊಂದು ತೀವ್ರವಾಗಿರುತ್ತದೆಂದರೆ ಒಂದು ದೊಣ್ಣೆಯನ್ನು ಆಧಾರವಾಗಿ ಬಳಸಿ ರೋಗಿ ನಡೆದಾಡಬಲ್ಲ.

ಮೂರನೆಯ ಹಂತದಲ್ಲಿ ಮಾಂಸಖಂಡಗಳು ಬಹಳ ಗಡುಸಾಗುತ್ತವೆ. ನಿಧಾನವಾದ, ತೂರಾಡುವ ನಡಿಗೆಗೂ ಎರಡು ದೊಣ್ಣೆಗಳು ಬೇಕಾಗುತ್ತಿರುತ್ತವೆ.

ನಾಲ್ಕನೆಯ ಹಂತಕ್ಕೆ 'ತೆವಳು' ಹಂತ ಎನ್ನಲಾಗಿದೆ. ಎರಡು ದೊಣ್ಣೆಗಳ ಹಂತವಾದ ನಂತರ

ಈ ಹಂತಕ್ಕೆ ರೋಗಿ ಕಾಲಿರಿಸುತ್ತಾನೆ. ಮೊಣಕಾಲುಗಳು ರೋಗಿಯ ತೂಕವನ್ನು ಹೊರಲಾರವು. ಹಾಗಾಗಿ ರೋಗಿ ತೆವಳಲಾರಂಭಿಸುತ್ತಾನೆ. ಈಗಾತ ತನ್ನ ದೇಹದ ತೂಕವನ್ನು ಕೈಗಳಿಗೆ ಬದಲಾಯಿಸಿಕೊಳ್ಳುತ್ತಾ ತೆವಳಲಾರಂಭಿಸುತ್ತಾನೆ.

ಪ್ರಾರಂಭಿಕ ಸೂಚನೆಗಳು ಕಂಡತಕ್ಷಣ ರೋಗಿ ಲ್ಯಾಥಿರಸ್‌ನ ಬಳಕೆಯನ್ನು ದೂರೀಕರಿಸಿದರೆ, ರೋಗದ ಬೆಳವಣಿಗೆಯನ್ನು ಪರಿಣಾಮಕಾರಿಯಾಗಿ ನಿಯಂತ್ರಿಸಬಹುದು. ಆದರೆ ರೋಗಕ್ಕಿಂತ ಹಸಿವು ಹೆಚ್ಚು ಶೀವ್ರವಾದದ್ದು ಎಂಬುದನ್ನು ನಾವು ಗಮನಿಸಬೇಕು. ಹಾಗಾಗಿ ಹೆಳವ ರೋಗಿ ಈ ಕೇಸರಿ ಬೇಳೆಯಿಂದ ತಯಾರಿಸಿದ ಆಹಾರವನ್ನು ಪೂರ್ಣ ಹೆಳವನಾಗುವವರೆಗೂ ತಿನ್ನುತ್ತಲೇ ಇರುತ್ತಾನೆ. ಸಂಸಾರಕ್ಕೆ ಭಾರವಾಗಿ ಪರಿಣಮಿಸಲಿಚ್ಛಿಸದ ಈ ರೋಗಿಗಳು ಹತ್ತಿರದ ಪಟ್ಟಣ ನಗರಗಳಿಗೆ ಭಿಕ್ಷೆ ಬೇಡಿ ಜೀವಿಸಲು ವಲಸೆಹೋಗುತ್ತಾರೆ

ಕೇಸರಿಬೇಳೆಯನ್ನು ಅಧಿಕವಾಗಿ ಸೇವಿಸಿ ಲ್ಯಾಥಿರಿಸಂ ರೋಗಕ್ಕೆ ತುತ್ತಾದುದು ಪ್ರಾಸಂಗಿಕವಾಗಿ ತಿಳಿದುಬಂತು. ಇತ್ತೀಚೆಗಷ್ಟೇ ಈ ರೋಗಕ್ಕೆ ಕಾರಣ ಕೇಸರಿಬೇಳೆ ಎಂಬುದು ಕೆಲ ಪೌಷ್ಟಿಕಾಂಶ ತಜ್ಞರು ಕೇಸರಿಬೇಳೆಯಲ್ಲಿ ವಿಷಪದಾರ್ಥವಿದೆ ಎಂಬುದನ್ನು ಕಂಡುಹಿಡಿದಾಗ ಸ್ಪಷ್ಟವಾಗಿ ತಿಳಿಯಿತು.

ಈ ವಿಷಪದಾರ್ಥವನ್ನು ಈ ಬೇಳೆಯಿಂದ ಬೇರ್ಪಡಿಸಿದುದೇ ಮೊದಲ ಮುಖ್ಯ ಹಂತ. ಅನಂತರ ಇತರ ಪ್ರಾಣಿಗಳೂ ಮುಖ್ಯವಾಗಿ ಕೋಳಿಮರಿಗಳು, ಬಾತುಕೋಳಿಮರಿಗಳು ಮತ್ತು ವಾನರಗಳು ಅದಕ್ಕೆ ಪ್ರತಿಕ್ರಿಯೆ ತೋರಿಸಿದುದನ್ನು ಕಂಡುಹಿಡಿಯುವಿಕೆ. ಲ್ಯಾಥಿರಸ್ ಕಾಳುಗಳಿಂದ ಬೇರ್ಪಡಿಸಿದ ವಿಷಪದಾರ್ಥವೊಂದರ ಚುಚ್ಚುಮದ್ದನ್ನು ಕೋಳಿಮರಿಗಳಿಗೆ ಇಂಜಕ್ಷನ್ ಕೊಟ್ಟಾಗ ಅವು ಹೆಚ್ಚಿನ ನರಮಂಡಲ ವಿಷದ ಪ್ರತಿಕ್ರಿಯೆಯನ್ನು ತೋರಿಸಿದುವು. ಇಂಜಕ್ಷನ್ ಕೊಟ್ಟ ಒಂದು ಗಂಟೆಯಲ್ಲೇ ಕೋಳಿಮರಿಗಳ ಕಾಲುಗಳಲ್ಲಿ ಪಾರ್ಶ್ವವಾಯುವುಂಟಾಯಿತು; ಅವುಗಳ ತಲೆ ಮತ್ತು ಕತ್ತುಗಳು ಹಿಂದಕ್ಕೆ ಸೆಟೆದುಕೊಂಡವು.

ಕೋಳಿ ಮರಿಗಳು ಈ ಸ್ಥಿತಿಯಲ್ಲಿ ಕೆಲ ಗಂಟೆಗಳವರೆಗಿದ್ದವು. ಆದರೆ ಹೆಚ್ಚಿನ ವಿಷಪದಾರ್ಥವನ್ನು ಅವುಗಳ ದೇಹಕ್ಕೆ ಹೊಗಿಸಿದಾಗ ಅವು ಸತ್ತವು. ಹೈದರಾಬಾದಿನ ಪೌಷ್ಟಿಕಾಂಶ ಸಂಶೋಧನಾಲಯದಲ್ಲಿ ಮಾಡಿದ ಸಂಶೋಧನೆಗಳ ಪ್ರಕಾರ ಕೋತಿಗಳಲ್ಲಿ ಜಡತ್ವ ಉಂಟುಮಾಡುವ ಇನ್ನೊಂದು ವಿಷಪದಾರ್ಥದ ಅಸ್ತಿತ್ವವನ್ನು ಈ ಕೇಸರಿಬೇಳೆಯಲ್ಲಿ ಪತ್ತೆ ಹಚ್ಚಲಾಗಿದೆ. ವಿಷಪದಾರ್ಥದ ಹೆಚ್ಚಿನಂಶ ಬೇಳೆಗಳಲ್ಲಿರುತ್ತದೆ; ಉಳಿದುದು ಕಾಳಿನ ಹೊಟ್ಟಿನಲ್ಲಿರುತ್ತದೆ.

ಲ್ಯಾಥಿರಿಸಂ ರೋಗವನ್ನು ವಾಸಿ ಮಾಡಲಾಗದಿದ್ದರೂ ಆ ರೋಗ ಬರದಂತೆ ನೋಡಿಕೊಳ್ಳಬಹುದು. ಸುಲಭವಾದ ಸ್ಪಷ್ಟವಾಗಿ ಗೋಚರಿಸುವ ವಿಧಾನವೆಂದರೆ ಈ ಕೇಸರಿಬೇಳೆಯನ್ನು ಬೆಳೆಯದಂತೆ ಬಹಿಷ್ಕರಿಸುವುದು. ಆದರೆ ಈ ಬಹಿಷ್ಕಾರದಿಂದಾಗಿ ಕೆಲ ತೊಡಕುಗಳು ಉತ್ಪತ್ತಿಯಾಗುತ್ತವೆ; ಜನ ಬದುಕಲು ಈ ಬೆಳೆಗೆ ಬದಲಾಗಿ ಬೇರೊಂದು ಬೆಳೆಯನ್ನು ಬೆಳೆಯಲು ಬರುವಂತಿರಬೇಕು; ಕೇಸರಿ ಬೇಳೆಯನ್ನು ಬೆಳೆಯುವಂಥ ನೆಲ, ವಾಯುಗುಣ, ಮಳೆ ನೀರಿನ ಅವಶ್ಯಕತೆ ಇತ್ಯಾದಿಗಳಲ್ಲಿಯೇ ಈ ಹೊಸ ಬೆಳೆ ಬೆಳೆಯುವಂತಿರಬೇಕು.

'ಲ್ಯಾಥಿರಸ್ ಸಾಟಿವಸ್'ನಿಂದ ವಿಷಪದಾರ್ಥಗಳನ್ನು ಪೂರ್ಣವಾಗಿ ತೆಗೆಯಬಹುದೆಂಬುದು



ಆಗ ಹುಟ್ಟಿದ ಬಾತುಮರಿಗೆ ಲ್ಯಾಥಿರಸ್ ಜವಾಣು ವಿಷವನ್ನು ಕೊಟ್ಟಾಗ ಕಾಣುವ ಪಾರ್ಶ್ವವಾಯುವಿನ ಲಕ್ಷಣಗಳು

ಸೋಜಿಗದ ಸಂಗತಿ ! ಆ ರೀತಿ ವಿಷಪದಾರ್ಥ ವನ್ನು ತೆಗೆದ ನಂತರ ಕೇಸರಿ ಬೇಳೆಯಲ್ಲಿ ಪಿಷ್ಟಿನ ಪೌಷ್ಟಿಕಾಂಶಗಳಿರುತ್ತವೆಂಬುದು ಇನ್ನೊಂದು ಸೋಜಿಗದ ಸಂಗತಿ! ಇದರಲ್ಲಿ ಶೇಕಡಾ ೨೮ ರಷ್ಟು ಪ್ರೋಟೀನ್ ಅಂಶವಿದೆ. ಜೊತೆಗೆ ಬೇರೆ ಬೇಳೆಗಳಿಗಿಂತ ಇದರ ಬೆಲೆ ಅತಿ ಕಡಿಮೆ.

ವಿವಿಧ ಸಂಶೋಧನಾಲಯಗಳಲ್ಲಿನ ಪೌಷ್ಟಿಕಾಂಶಗಳ ಸಂಶೋಧನಾ ಕಾರ್ಯಕರ್ತರುಗಳು ಕೇಸರಿ ಕಾಳಿನಲ್ಲಿರುವ ವಿಷಪದಾರ್ಥಗಳನ್ನು ಹೊರತೆಗೆಯುವ ಸೂಕ್ತ ವಿಧಾನಕ್ಕಾಗಿ ಪ್ರಯತ್ನಿಸುತ್ತಿದ್ದಾರೆ. ವಿಷಪದಾರ್ಥ ತೆಗೆದ ನಂತರ ಈ ಕೇಸರಿ ಬೇಳೆಯನ್ನು ಮನುಷ್ಯ ಆಹಾರವಾಗಿ ಸೇವಿಸಲು ತೊಂದರೆಯಾಗುವುದಿಲ್ಲ.

ವಿಷಪದಾರ್ಥಗಳು ನೀರಿನಲ್ಲಿ ಲೀನವಾಗಬಲ್ಲವು! ಹಾಗಾಗಿ ಈ ಬೇಳೆಯನ್ನು ವಿಷ ಪದಾರ್ಥಗಳಿಂದ ಮುಕ್ತಗೊಳಿಸಲು ಸುಲಭ ಸಾಧ್ಯವಾಗುತ್ತದೆ. ಈ ಬೇಳೆಗಳಿಂದ ಈ ವಿಷ ಪದಾರ್ಥವನ್ನು ಸೋರಿಸುವ ಪರಿಣಾಮಕಾರಿಯಾದ ವಿಧಾನವನ್ನೀಗ ಕಂಡುಹಿಡಿಯಲಾಗಿದೆ.

ಜೊತೆಗೆ ಈ ವಿಷ ಪದಾರ್ಥ ತೆಗೆಯುವ ವಿಧಾನ ಅತಿ ಸರಳವಾದುದು; ಮೊದಲಿಗೆ ಕಾಳಿನ ಹೊಟ್ಟು ತೆಗೆಯಬೇಕು. ಕಾಳಿನ ಹೊಟ್ಟನ್ನು ಆಹಾರವಾಗಿ ಬಳಸಬಾರದು. ಬೇರೊಂದು ಪಾತ್ರೆಯಲ್ಲಿ ನೀರನ್ನು ಮರಳಿಸಬೇಕು. ಬೆಂಕಿಯಿಂದ ಆ ಪಾತ್ರೆಯನ್ನು ಕೆಳಕ್ಕಿಳಿಸಬೇಕು. ನಂತರ ಒಂದು ಗಂಟೆ ಹೊತ್ತು ಕೇಸರಿ ಬೇಳೆಯನ್ನು ಆ ಮರಳುವ ನೀರಿನಲ್ಲಿ ನೆನೆಸಬೇಕು. (ನೆನೆಸುವ ಕಾಲದಲ್ಲಿ ಬೇಳೆ ಬೇಯದಂತೆ ಜಾಗರೂಕತೆ ವಹಿಸಬೇಕು). ಬೇಳೆ ನೆನೆಸಿದ ನೀರನ್ನು ಬಸಿದು ಹೊರಕ್ಕೆ ಚೆಲ್ಲಬೇಕು; ಈ ರೀತಿ ಪರಿಷ್ಕರಿಸಿದ ಬೇಳೆಯನ್ನು ಬಿಸಿಲಿನಲ್ಲಿ ಒಣಹಾಕಬೇಕು. ಈಗ ಬಹುತೇಕ ವಿಷಪದಾರ್ಥ ಬೇಳೆಯಿಂದ ಬೇರ್ಪಟ್ಟಿರುತ್ತದೆ. ಜೊತೆಗೆ ಬಹಳಷ್ಟು ಪ್ರೋಟೀನ್ ಅಂಶ ಬೇಳೆಯಲ್ಲೇ ಉಳಿದಿರುತ್ತದೆ.

ಈ ಪರಿಷ್ಕರಣದಲ್ಲಿ ಶೇಕಡಾ ೫೦ ರಿಂದ ೬೦ ರಷ್ಟು ನೀರಿನಲ್ಲಿ ಲೀನವಾಗುವ ಜೀವಸತ್ತ್ವಗಳು ಹಾನಿಪೊಂದಿದ್ದರೂ ಈ ಹಾನಿಯನ್ನು ಪ್ರೋಟೀನ್ ಅಂಶ ಕೆಲಮಟ್ಟಿಗೆ ಸರಿದೂಗಿಸತ್ತದೇನೋ. ಕಾಳಿನಲ್ಲೀಗ ಮಾರಕ ರೋಗಕ್ಕೆ ಕಾರಣವಾದ ವಿಷಪದಾರ್ಥವಿರುವುದಿಲ್ಲವಷ್ಟೆ. ✡

(ಕೃಪೆ: ಸೈನ್ಸ್ ಟುಡೇ)



## ದರ್ಶನ

ಕಾಣದ ಕಾಲ ಕಾಲ್ಮೇಲೆ ನಿಂತು,
ವರ್ತಮಾನದೊಳಿದ್ದೂ......
ಭವಿಷ್ಯದಲ್ಲಿ ವಾಸಿಸಿ,
ಮತ್ತೆಲ್ಲವನ್ನೂ-
ಶೂನ್ಯಕ್ಕೆ ಸೆರಿಸುವ
ಸಮಗ್ರತೆಯ
ಸತ್ಯ ಭೂತವ ಕಂಡೆ!

— ಶ್ರೀಜಸ್ವಾ

# ಜೇಮ್ಸ್ ಕ್ಲಾರ್ಕ್ ಮ್ಯಾಕ್ಸವೆಲ್



ಡಾ. ಜಿ. ಆರ್. ರಂಗಸ್ವಾಮಿ

ಸರಿಯಾಗಿ ನೂರಾ ಒಂದು ವರ್ಷಗಳ ಹಿಂದೆ, ೧೮೭೯ರಲ್ಲಿ ಕೀರ್ತಿಶೇಷರಾದ ಜೇಮ್ಸ್‌ಕ್ಲಾರ್ಕ್ ಮಾಕ್ಸವೆಲ್ಲರನ್ನು ಆಧುನಿಕ ಭೌತವಿಜ್ಞಾನದ ಭೀಮ ಅನ್ನುವುದುಂಟು. ೧೬೪೨ರಲ್ಲಿ ವಿಜ್ಞಾನದ ಇತಿಹಾಸದಲ್ಲಿ ಒಂದು ಹೊಸ ಶಾಖೆಯು ಆರಂಭವಾಯಿತೆನ್ನಬಹುದು. ಏಕೆಂದರೆ ಆ ವರ್ಷ ಗೆಲಿಲಿಯೋನ ಮರಣದಿಂದ ವಿಜ್ಞಾನರಂಗದಲ್ಲಿ ತೆರವಾದ ಸ್ಥಾನವನ್ನು ತುಂಬಲು ಐಜಾಕ್ ನ್ಯೂಟನ್ನರು ಜನ್ಮತಾಳಿದರು. ಅಂತೆಯೇ ೧೮೭೯ರ ನವೆಂಬರ್ ೫ರಂದು ಜೇಮ್ಸ್‌ಮ್ಯಾಕ್ಸವೆಲ್ಲರ ಮರಣದಿಂದುಂಟಾದ ಸ್ಥಾನವನ್ನು ತುಂಬಲೋ ಎಂಬಂತೆ ೧೮೭೯ರ ಮಾರ್ಚ್ ೧೪ರಂದು ಆಲ್ಬರ್ಟ್ ಐನ್‌ಸ್ಟೈನ್ನರು ಜನಿಸಿದರು. ಕೇವಲ ೪೮ ವರ್ಷಗಳ ತಮ್ಮ ಜೀವನದಲ್ಲಿ ವಿದ್ಯುತ್ ಆಯಸ್ಕಾಂತ ವರ್ಣಪಟ (Electromagnetic Spectrum), ವರ್ಣದೃಷ್ಟಿ, (Colour Vision) ವರ್ಣಛಾಯಾ-ಚಿತ್ರ, (Colour Photography) ಶನಿಗ್ರಹದ ಉಂಗುರಗಳು, ಅನಿಲಗಳ ಚಲನ ನಿಯಮ, ರೇಡಿಯೋಮೆಟ್ರಿ ಮತ್ತು ಸೈಬರ್‌ನೆಟಿಕ್ಸ್‌ಗಳ ಬಗ್ಗೆ ಮೂಲಭೂತ ಸಂಶೋಧನೆಯನ್ನು ಕೈಕೊಂಡ ಈ ಮಹಾ ಮೇಧಾವಿಯ ಸಾಧನೆ ನಿಜಕ್ಕೂ ಅತ್ಯದ್ಭುತ.

ಮ್ಯಾಕ್ಸವೆಲ್ ಜನಿಸಿದ್ದು ಸ್ಕಾಟ್ಲೆಂಡಿನ ಎಡಿನ್‌ಬರೊ ನಗರದಲ್ಲಿ. ತಂದೆ ಜಾನ್ ಕ್ಲಾರ್ಕ್ ಮಾಕ್ಸವೆಲ್. ಇವರ ಪೂರ್ವಜರು ಸುಮಾರು ೧೬೩೦ರಲ್ಲಿ ಫ್ರಾನ್ಸಿನ ರಾಜಧಾನಿಯಾದ ಪ್ಯಾರಿಸ್‌ನಗರದಲ್ಲಿ ವಾಸಿಸುತ್ತಿದ್ದು ಅಗಣಿತ ಆಸ್ತಿ ಗಳಿಸಿದ್ದರು. ನಂತರ ಆ ಐಶ್ವರ್ಯದೊಂದಿಗೆ ಸ್ಕಾಟ್‌ಲೆಂಡಿಗೆ ಮರಳಿದರು. ಜೇಮ್ಸ್ನರ ಮುತ್ತಾತ ಜಾರ್ಜ್ ಕ್ಲಾರ್ಕ್ ಮಿಡ್ಲೆಬಿ ಎಸ್ಟೇಟಿನ ಒಡತಿಯಾದ ಅಗ್ನೇಸಿ ಮ್ಯಾಕ್ಸವೆಲ್ ಎಂಬಾಕೆಯನ್ನು ಲಗ್ನವಾಗಿ ತಮ್ಮ ಹೆಸರಿಗೆ ಮ್ಯಾಕ್ಸವೆಲ್ ಎಂಬ ಪದವನ್ನು ಸೇರಿಸಿಕೊಂಡರು. ಆದರೆ ಆಸ್ತಿಯ ಒಡೆತನಕ್ಕೆ ಜಾನ್ ಬರುವ ವೇಳೆಗೆ ಆಸ್ತಿಯ ಬಹುಭಾಗ ಪರಭಾರೆಯಾಗಿ ವಾಸಕ್ಕೆ ಒಂದು ಮನೆಯೂ ಇರಲಿಲ್ಲ. ಹೆಸರಾಂತ ವಕೀಲರ ರಾಜನೀತಿಜ್ಞರು, ಭೂಗರ್ಭಶಾಸ್ತ್ರಜ್ಞರು ಗಣಿತಶಾಸ್ತ್ರಜ್ಞರು ಮತ್ತು ಕವಿಗಳು ಜನಿಸಿದ್ದ ವಂಶದಲ್ಲೆ

ಇವರೂ ಜನಿಸಿದ್ದು ಒಂದು ರೀತಿಯಲ್ಲಿ ಯೋಗಾಯೋಗವೆಂದೇ ಹೇಳಬೇಕು. ಇವರ ತಂದೆ ಜಾನ್ ವೃತ್ತಿಯಲ್ಲಿ ವಕೀಲರಾದರೂ, ತಂತ್ರಶಾಸ್ತ್ರದಲ್ಲಿ ಅಭಿರುಚಿಯಿದ್ದು, ಗೃಹನಿರ್ಮಾಣ ಮುಂತಾದ ಎಂಜನಿಯರಿಂಗ್ ಕಾರ್ಯಗಳಲ್ಲಿ ವಿಶೇಷ ಅನುಭವವನ್ನು ಗಳಿಸಿದ್ದು. ಜೇಮ್ಸ್ ಮ್ಯಾಕ್ಸವೆಲ್ಲರಲ್ಲಿ ವೈಜ್ಞಾನಿಕ ಮನೋಭಾವ ಬೆಳೆಯಲು ಕಾರಣವಾಯಿತು. ಎಳೆಯ ವಯಸ್ಸಿನಲ್ಲಿ ಉಂಟಾದ ಮಾತೃವಿಯೋಗ ಜೇಮ್ಸರ ಮೇಲೆ ಅಧಿಕ ಪರಿಣಾಮ ಉಂಟುಮಾಡಿತು. ಆದರೂ ವಿದ್ಯೆಯಲ್ಲಿ ಆಸಕ್ತಿ, ವಿನೋದ ಪ್ರವೃತ್ತಿ, ಮನೆಯಲ್ಲಿನ ಸೌಹಾರ್ದಯುತ ವಾತಾವರಣ ಮತ್ತು ತಂದೆಯ ಸವಿನುಡಿಗಳು ಮಾತೃ ವಿಯೋಗದಿಂದುಂಟಾದ ನೋವನ್ನು ಸಹಿಸಲು ಸಹಾಯವಾದವು.

ಇವರು ತಮ್ಮ ಹತ್ತನೆಯ ವಯಸ್ಸಿನಲ್ಲಿ ವಿದ್ಯಾಭ್ಯಾಸಕ್ಕಾಗಿ ಎಡಿನ್‌ಬರೊನಲ್ಲಿನ ಸಂಸ್ಥೆಯೊಂದಕ್ಕೆ ಸೇರಿದರು. ತಮ್ಮ ತಂದೆಯೇ ಆಯ್ದ ಉಡುಪನ್ನು ಧರಿಸುತ್ತಿದ್ದರು. ಆ ಉಡುಪಿನ ಬಗ್ಗೆ ಸಹಪಾಠಿಗಳು ಹಾಸ್ಯಮಾಡಿದಾಗ ಜೇಮ್ಸರು ತಮ್ಮದೇ ರೀತಿಯಲ್ಲಿ ವ್ಯಂಗ್ಯ ತುಂಬಿದ ಮಾರುತ್ತರ ಕೊಡುತ್ತಿದ್ದರಾದ್ದರಿಂದ ಇವರಿಗೆ 'ಡಾಫ್ಟಿ' ಎಂಬ ಅಡ್ಡ ಹೆಸರು ಬಂದಿತ್ತು. ಮ್ಯಾಕ್ಸವೆಲ್ಲರ ಕಾಲದಲ್ಲಿ ವಿಜ್ಞಾನ ವಿಭಾಗಗಳ ಬೋಧನೆಗೆ ಅಷ್ಟಾಗಿ ಮಹತ್ವವಿರಲಿಲ್ಲ. ಗಣಿತಶಾಸ್ತ್ರದ ಬೋಧನೆಯೇ ಪ್ರಧಾನವಾಗಿರುತ್ತಿತ್ತು. ಅಲ್ಲಿ ಆಗ ಜೇಮ್ಸ್ ಗೋಯ್ಲರ್ ಗಣಿತಶಾಸ್ತ್ರದ ಉಪಾಧ್ಯಾಯರು. ಬಾಲಕ ಜೇಮ್ಸನಲ್ಲಿ ಜಾಮಿತಿಯಲ್ಲಿ ಅಭಿರುಚಿಯನ್ನು ಮೂಡಿಸಿದರು. ಒಂದು ದಿನ ಇವರ ತಂದೆ ಮಗನನ್ನು ಎಡಿನ್‌ಬರೊನಲ್ಲಿನ ರಾಯಲ್ ಆರ್ಟ್ಸ್ ಸಂಸ್ಥೆಯ ಕಾರ್ಯಕ್ರಮವೊಂದಕ್ಕೆ ಕರೆದುಕೊಂಡುಹೋಗಿದ್ದರು. ಅಂದು ಅಲ್ಲಿ ಡಿ.ಆರ್.ಹೆಯವರು ಅಂಡಾಕಾರದ ಆಲಂಕಾರಿಕ ಸಸ್ಯರಾಶಿಯ ಬಗ್ಗೆ ಭಾಷಣ ಮಾಡಿದಾಗ ಜೇಮ್ಸರು ಅಂಡಾಕಾರದ ರಚನೆಯಲ್ಲಿ ಉತ್ಸಾಹ ತೋರಿಸಿ ಅದರ ರಚನೆಗೆ ಒಂದು ವಿಧಾನವನ್ನು ಅಳವಡಿಸಿದರು. ಆ ವಿಧಾನವನ್ನು ಆತನ ತಂದೆ ಅಲ್ಲಿನ ವಿಶ್ವವಿದ್ಯಾನಿಲಯದ ತತ್ವಶಾಸ್ತ್ರದ ಪ್ರಾಧ್ಯಾಪಕರಾಗಿದ್ದ ಜೆ.ಡಿ ಫೋರ್ಬ್ಸ್‌ರವರಿಗೆ ತಿಳಿಸಿದಾಗ ಅವರು ಆ ವಿಚಾರದಲ್ಲಿದ್ದ ಹಿಂದಿನ ಸಂಶೋಧನಾ ಪ್ರಬಂಧಗಳನ್ನು ಪರಿಶೀಲಿಸಿ ಮಹಾ ವಿದ್ವಾಂಸರುಗಳಾದ ಡೆಸ್ಕಾರ್ಟ್ಸ್, ನ್ಯೂಟನ್ ಮತ್ತು ಹೈಗಿನ್ಸ್‌ರವರು ನಿಯೋಜಿಸಿದಂತೆಯೇ ಈ ಬಾಲಕ ಮಾಡಿರುವುದನ್ನು ಕಂಡು ಚಕಿತರಾದರು. ಅವರು ಆ ವಿಧಾನವನ್ನು ರಾಯಲ್ ಸಂಸ್ಥೆಯ ಪತ್ರಿಕೆಯಲ್ಲಿ ಪ್ರಕಟಿಸಿದರಾದ್ದರಿಂದ, ಜೇಮ್ಸ್ ಕೇವಲ ೧೫ ವರ್ಷದವರಿದ್ದಾಗ ಗಣಿತಶಾಸ್ತ್ರ ಕುರಿತಾದ ಅವರ ಪ್ರಥಮ ಸಂಶೋಧನ ಪ್ರಬಂಧ ಪ್ರಕಟವಾಯಿತು. ಇವರು ತಮ್ಮ ೧೪ನೇ ವಯಸ್ಸಿನಲ್ಲಿಯೇ ಗಣಿತಶಾಸ್ತ್ರದಲ್ಲಿನ ಪಾಂಡಿತ್ಯಕ್ಕೆ ಪಾರಿತೋಷಕ ಪಡೆದರು. ೧೮೪೭ರಲ್ಲಿ ತಮ್ಮ ೧೬ನೇ ವಯಸ್ಸಿನಲ್ಲಿ ಇವರು ಎಡಿನ್‌ಬರೋ ವಿಶ್ವವಿದ್ಯಾನಿಲಯದಲ್ಲಿನ ಗಣಿತವಿಭಾಗದಲ್ಲಿ ವಿದ್ಯಾರ್ಥಿಯಾಗಿ ಸೇರಿದರು. ಆಗ ಅಲ್ಲಿ ಫಿಲಿಪ್ ಕೆಲ್ಲಾಂಡ್ ಗಣಿತಶಾಸ್ತ್ರದ, ಜೆ.ಡಿ. ಫೋರ್ಬ್ಸ್ ತತ್ವಶಾಸ್ತ್ರದ ಮತ್ತು ವಿಲಿಯಂ ಹ್ಯಾಮಿಲ್ಟನ್ ತರ್ಕಶಾಸ್ತ್ರದ ಪ್ರಾಧ್ಯಾಪಕರುಗಳು. ಎಡಿನ್‌ಬರೊನಲ್ಲಿ ಇವರ ದೊಡ್ಡಮ್ಮನಾದ ಶ್ರೀಮತಿ ವೆಡ್ಡರ್‌ಬರ್ನ್‌ಳ ವಿಶಾಲ ಗೃಹ ಬಾಲಕನ ಭೌತವಿಜ್ಞಾನ ಪ್ರಯೋಗಶಾಲೆ, ಇಲ್ಲಿ ಈತ ಬೆಳಕಿನ ಕಿರಣಗಳ ವಕ್ರೀಭವನ, ಧ್ರುವೀಕರಣಗಳ ಬಗೆಗೂ ಆಯಸ್ಕಾಂತಗಳ ಬಗೆಗೂ ಪ್ರಯೋಗಗಳನ್ನು ನಡೆಸುತ್ತಿದ್ದರು. ಕಾಲ್ಕ್‌ಸ್ಪಾರಿನಿಂದ ವಿಲಿಯಂ ನಿಕಾಲ್ ತಯಾರಿಸಿದ ಪಟ್ಟಕ (Prism) ಬಳಸಿ, ಬೆಳಕಿನ ಸಾಮಾನ್ಯ (Ordinary) ಮತ್ತು ಅಸಾಮಾನ್ಯ (Extraordinary) ಕಿರಣಗಳನ್ನು ಬೇರ್ಪಡಿಸುವ ಪ್ರಯೋಗ ನಡೆಸಿದರು. ಈ ಮಧ್ಯೆ ಜೆಮ್ಸರು ಡಿ. ಆರ್. ಹೆಯವರ ಸ್ನೇಹ ಬೆಳೆಸಿದರು. ಅವರು ವಿವಿಧ ವರ್ಣಕಾರಕ ರಾಸಾಯನಿಕಗಳನ್ನು ಮಿಶ್ರಮಾಡಿ ಬೇರೊಂದು ವರ್ಣ ನಿರ್ಮಿಸುವ ಹವ್ಯಾಸವುಳ್ಳವರು. ಜೇಮ್ಸರು ಅವರ ಕಾರ್ಯವನ್ನು ಸತತ ಅವಲೋಕಿಸಿ, ತಾವೂ ವರ್ಣದ ಬಗ್ಗೆ ಪ್ರಯೋಗ ನಡೆಸುವುದೆಂದು ನಿರ್ಧರಿಸಿದರಲ್ಲದೆ ಫೋರ್ಬ್ಸ್ ಎಂಬ ವಿಜ್ಞಾನಿಯೊಡನೆ ಪ್ರಯೋಗ ನಡೆಸಿ

ಹೊಸ ರೀತಿಯ ವರ್ಣಪಟವೊಂದನ್ನು ಸಜ್ಜುಗೊಳಿಸಿದರು. ಇವರು ವಿದ್ಯಾರ್ಥಿಯಾಗಿದ್ದಾಗಲೇ "ಸ್ಥಿತಿಸ್ಥಾಪಕ ಘನವಸ್ತುಗಳ ಸಮತೋಲನ" (Equilibrium of Elastic Solids) ಎಂಬ ಮಹತ್ವಪೂರ್ಣ ಮೂಲ ಪ್ರಬಂಧವನ್ನು ಪ್ರಕಟಿಸಿದರು. ಮೂರು ವರ್ಷಗಳ ಪರ್ಯಂತ ಅಲ್ಲಿ ವ್ಯಾಸಂಗ ಮಾಡಿದರೂ ಪದವಿ ಪಡೆಯಲಾಗಲಿಲ್ಲ. ಫೋರ್ಬ್ಸ್‌ರ ಸಲಹೆಯ ಮೇರೆಗೆ ಜಾನ್ ತಮ್ಮ ಮಗನನ್ನು ೧೮೫೦ರಲ್ಲಿ ಕೇಂಬ್ರಿಜ್ ವಿಶ್ವವಿದ್ಯಾನಿಲಯಕ್ಕೆ ಸೇರಿಸಿದರು. ಆಗ ಆತನಿಗೆ ೧೯ ವರ್ಷ ವಯಸ್ಸು.

ಬಾಲ್ಯದಿಂದಲೇ ಜಾಣರಾದ ಜೇಮ್ಸ್‌ರಿಗೆ ಕೇಂಬ್ರಿಜ್‌ನ ಬೌದ್ಧಿಕವಾತಾವರಣ, ಬುದ್ಧಿಜೀವಿಗಳ ಸಂಗಮ ತುಂಬಾ ಹಿಡಿಸಿತು. ಅಲ್ಲಿ ಗಣಿತಶಾಸ್ತ್ರದಲ್ಲಿ ಹೆಸರಾಂತ ವಿಲಿಯಂ ಹಾಪ್‌ಕಿನ್ಸರ ಶಿಷ್ಯನಾಗಿ, ಅವರ ಮೆಚ್ಚುಗೆ ಪಡೆದರು. ಅಲ್ಲಿಗೆ ಬಂದ ಕೆಲವೇ ದಿನಗಳಲ್ಲಿ ಇವರು ವಿಖ್ಯಾತ ವಿಜ್ಞಾನಿಗಳ ಮತ್ತು ಮಾನವಿಕ ಶಾಸ್ತ್ರಗಳಲ್ಲಿ ಪರಿಣಿತರಾದವರ ಸ್ನೇಹ ಬೆಳೆಸಿರಲ್ಲದೆ ಇಲ್ಲಿ ಅವರು ಪರಿಣತಮತಿಗಳಿಗೆ ಮಾತ್ರ ಮೀಸಲಾದ ಅಪೋಸ್ಟೆಲ್ ಸಂಸ್ಥೆಯ ಸದಸ್ಯರಾದರು. ಈ ಸಂಸ್ಥೆಯ ಆಶ್ರಯದಲ್ಲಿ ಜೇಮ್ಸ್‌ರು ಲೇಖನಗಳನ್ನು ಪ್ರಕಟಿಸಿ, ತಮ್ಮ ಗಣಿತ ಮತ್ತು ಭೌತಶಾಸ್ತ್ರದ ಪಾಂಡಿತ್ಯವನ್ನು ಪರಿಚಯಮಾಡಿಕೊಟ್ಟರು. ಒಂದು ದಿನ ತರಗತಿಯಲ್ಲಿ ಪ್ರಾಧ್ಯಾಪಕರು ಮೂರು ಆಯಾಮಗಳಿಗೆ (Three Dimensional) ಸಂಬಂಧಿಸಿದ ಸಮಸ್ಯೆಯೊಂದನ್ನು ಬಹು ಪ್ರಯಾಸದಿಂದ ಬೋಧಿಸುತ್ತಿದ್ದರು, ವಿಷಯ ಆಯಸ್ಕಾಂತ ಬಲಪೂರಿತ ರೇಖೆಗಳಿಗೂ ಸ್ಥಳ ಪಲ್ಲಟಗೊಂಡ ವಿದ್ಯುತ್ ರೇಖೆಗಳಿಗೂ ಮಧ್ಯದ ಸಮಕೋನ ಸಂಬಂಧ. ಜೇಮ್ಸ್‌ರು ತಮ್ಮ ಜ್ಯಾಮಿತಿಯ ಪರಿಣತಿಯಿಂದ ಕಪ್ಪು ಹಲಗೆಯ ಮೇಲೆ ಕೇವಲ ಮೂರು ಗೆರೆಗಳಿಂದ ಸುಲಭದಲ್ಲಿ ಪರಿಹಾರವನ್ನು ಸೂಚಿಸಿ ಅಚ್ಚರಿಯನ್ನುಂಟು ಮಾಡಿದರು. ವಿದ್ಯುತ್ ಶಕ್ತಿಯ ಬಗ್ಗೆ ಸಂಶೋಧನೆಗಳನ್ನು ನಡೆಸುತ್ತಿದ್ದ ವಿಲಿಯಂ ಥಾಮ್‌ಸನ್ (ನಂತರ ಇವರು ಲಾರ್ಡ್ ಕೆಲ್ವಿನ್ ಎಂಬ ಹೆಸರಿನಿಂದ ಪ್ರಸಿದ್ಧರಾದರು.) ಸ್ನೇಹ ಬೆಳೆಸಿದರು. ಮೈಕೇಲ್ ಫ್ಯಾರೆಡೆ ಆಯಸ್ಕಾಂತ ಕ್ಷೇತ್ರದಿಂದ ಹೊರಡುವ ಬಲಪೂರಿತ ರೇಖೆಗಳು ಉದ್ದುದ್ದವಾಗಿ ಬಲವನ್ನೂ ಅಡ್ಡಡ್ಡವಾಗಿ ಒತ್ತಡವನ್ನೂ ಉಂಟುಮಾಡುತ್ತವೆ ಎಂಬ ವಾದವನ್ನು ಮುಂದಿಟ್ಟಾಗ ಗಣಿತಶಾಸ್ತ್ರ ರೀತ್ಯ ಒಂದು ಯೋಗ್ಯ ಸಮೀಕರಣವನ್ನು ಜೇಮ್ಸ್ ರೂಪಿಸಿದರು. ಇವರು ಆಗಲೇ ಆಯಸ್ಕಾಂತದ ಬಲ, ಬೆಳಕಿನ ಅಲೆಗಳಂತೆ ಕಂಪನಗಳ ಮೂಲಕ ಪ್ರಸರಣಗೊಳ್ಳಬಲ್ಲವೆಂದು ಶಂಕಿಸಿದ್ದರು. ೧೮೫೪ರ ನವೆಂಬರಿನಲ್ಲಿ ಜೇಮ್ಸ್‌ರು ಕೇಂಬ್ರಿಜ್ ವಿಶ್ವವಿದ್ಯಾನಿಲಯದಿಂದ ಗಣಿತಶಾಸ್ತ್ರದಲ್ಲಿ ಪದವಿ ಪಡೆದು ರ್ಯಾಂಗಲರ್ ಆದರು.

ಪದವಿ ಸ್ವೀಕರಿಸಿದ ನಂತರ ಎಡಿನ್‌ಬರೊಕ್ಕೆ ಮರಳಿ ವರ್ಣ, ಬೆಳಕು ಮತ್ತು ವಿದ್ಯುತ್ ಶಕ್ತಿಗಳ ಬಗ್ಗೆ ಸಂಶೋಧನೆಯನ್ನು ಮುಂದುವರಿಸಿದರು. ೧೮೫೫–೫೬ರ ಸಮಯದಲ್ಲಿ ವಿಲಿಯಂ ಥಾಮ್‌ಸನ್‌ನೊಡಗೂಡಿ ಬಲಪೂರಿತ ರೇಖಾನುಳಿದ ಬಗ್ಗೆ ಶಾಖ ಪ್ರಸರಣವನ್ನು ಆಧರಿಸಿದ ವಿವರಣೆಯೊಂದನ್ನು ನೀಡಿದರು. ಅಬರ್ಡೀನಿನಲ್ಲಿದ್ದ ಮಾರ್ಶಲ್ ಕಾಲೇಜಿನ ತತ್ವಶಾಸ್ತ್ರ ಪ್ರಾಧ್ಯಾಪಕರು ೧೮೫೬ರಲ್ಲಿ ಮರಣ ಹೊಂದಿದ್ದರಿಂದ ರೋಗಗ್ರಸ್ತ ತಂದೆಯ ಹತ್ತಿರವಿರುವ ಅವಕಾಶ ಒದಗುವುದೆಂಬ ಆಶಯದಿಂದ ಜೇಮ್ಸ್‌ರು ಆ ಹುದ್ದೆಯನ್ನು ವಹಿಸಿಕೊಂಡರು. ೧೮೫೮ರ ಜೂನ್ ತಿಂಗಳಲ್ಲಿ ಕಾಲೇಜಿನ ಪ್ರಿನ್ಸಿಪಾಲರಾದ ಮೇರಿ ದೇವಾರರ ಪುತ್ರಿ ಕ್ಯಾಥರಿನ್ನಳನ್ನು ಲಗ್ನವಾದರು. ಆ ಹುದ್ದೆಯಲ್ಲಿ ಇವರಿದ್ದ ನಾಲ್ಕು ವರ್ಷಗಳ ಮೊದಲನೆಯ ವರ್ಷದಲ್ಲಿ ಶನಿ ಗ್ರಹದ ಉಂಗುರಗಳ ಬಗ್ಗೆ ಲೇಖನವನ್ನು ಬರೆದು ಆಡಮ್ಸ್ ಬಹುಮಾನ ಸ್ಪರ್ಧೆಯಲ್ಲಿ ಜಯಗಳಿಸಿದರು. ಅವರ ವಿದ್ಯಾರ್ಥಿ ಮತ್ತು ಪ್ರಖ್ಯಾತ ಖಗೋಳಶಾಸ್ತ್ರಜ್ಞ ಡೇವಿಡ್ ಗಿಲ್ ಪ್ರಕಾರ ಜೇಮ್ಸ್‌ರು ಉತ್ತಮ ಉಪಾಧ್ಯಾಯರಲ್ಲವಾದರೂ ಪಾಂಡಿತ್ಯಕ್ಕೆ ಶಿಖರವಿದ್ದಂತೆ. ೧೮೬೦ರಲ್ಲಿ ಲಂಡನ್ನಿನ ಕಿಂಗ್ಸ್ ಕಾಲೇಜು ಮತ್ತು ಮಾರ್ಷಲ್ ಕಾಲೇಜುಗಳ ಮಿಲನದಿಂದ ಇವರು ಮಾರಿಷಲ್

ಕಾಲೇಜಿನ ಹುದ್ದೆಯನ್ನು ಕಳೆದುಕೊಂಡು ಕಿಂಗ್ಸ್ ಕಾಲೇಜಿನ ಪ್ರಾಧ್ಯಾಪಕ ವೃತ್ತಿಯನ್ನು ಸ್ವೀಕರಿಸಿ ಕೆನ್ಸಿಂಗಟನ್‌ನ್ನಲ್ಲಿನ ಪ್ಯಾಲೇಸ್ ಗಾರ್ಡನ್ ಎಂಬ ವಿಶಾಲ ಗೃಹದಲ್ಲಿ ವಾಸಿಸತೊಡಗಿದರು. ಇಲ್ಲಿ ವರ್ಣಮಾಪಕ ಮತ್ತು ಅನಿಲಗಳ ಸಚ್ಛಿದ್ರತೆಯ ಬಗ್ಗೆ ಅತಿ ವಿವರವಾಗಿ ಅಭ್ಯಾಸ ಮಾಡಿದರು. ಥಾಮಸ್ ಯಂಗ್‌ರ "ಚಕ್ಷುಪಟದಲ್ಲಿ ಮೂರು ತರಹದ ವರ್ಣಗ್ರಾಹಕಗಳಿವೆ" ಎಂಬ ವಾದದ ಬಗ್ಗೆ ಗಹನ ಸಂಶೋಧನೆ ನಡೆಸಿ, ಕೆಂಪು, ಹಸಿರು ಮತ್ತು ನೀಲಿ ವರ್ಣಗಳ ಮಿಶ್ರಣದಿಂದ ಉಳಿದೆಲ್ಲಾ ವರ್ಣಗಳ ಭಾವವನ್ನು ಉಂಟುಮಾಡಬಹುದೆಂದು ತೋರಿಸಿದರು. ೧೮೬೧ರ ಮೇ ೧೭ ರಂದು ರಾಯಲ್ ಸಂಸ್ಥೆಯ ಆಶ್ರಯದಲ್ಲಿ ಮಾಡಿದ ಭಾಷಣದಲ್ಲಿ ತಮ್ಮ ತ್ರಿವರ್ಣಯುಕ್ತ ಛಾಯಾಚಿತ್ರಗಳನ್ನು ತೋರಿಸಿದರು. ಇವರ ವರ್ಣ ಛಾಯಾಚಿತ್ರದ ಮೂಲ ಫಿಲ್ಮುಗಳು ಇಂದಿಗೂ ಕೇಂಬ್ರಿಜ್‌ನಲ್ಲಿನ ಕ್ಯಾವೆಂಡಿಷ್ ಸಂಸ್ಥೆಯಲ್ಲಿವೆ. ಶನಿಗ್ರಹದ ಉಂಗುರಗಳ ಚಲನೆಯ ಬಗ್ಗೆ ಯೋಚಿಸುತ್ತಾ ೧೮೬೦ರ ವೇಳೆಗೆ ಜೇಮ್ಸರು ಅನಿಲಗಳ ಸಚ್ಛಿದ್ರತೆ ಬಗ್ಗೆ ಹೊಸದೊಂದು ವಾದ ಮಂಡಿಸಿ, ಅನಿಲದ ಸಚ್ಛಿದ್ರತೆ ಅದರ ಸಾಂದ್ರತೆಯನ್ನು ಅವಲಂಬಿಸಿರುವುದಿಲ್ಲ ಎಂದು ತೋರಿಸಿದರು. ವಿವಿಧ ಒತ್ತಡ ಮತ್ತು ಉಷ್ಣತೆಯಲ್ಲಿನ ಅನಿಲಗಳ ಸಚ್ಛಿದ್ರತೆಯ ಅಳತೆ, ಭೌತವಿಜ್ಞಾನಕ್ಕೆ ಮ್ಯಾಕ್ಸವೆಲ್ಲರ ಅಮೂಲ್ಯ ಕೊಡುಗೆ ಎಂದೂ, ಅವರ ಅನಿಲಗಳ ಚಲನವಾದ ಅವರ ಅತ್ಯುತ್ತಮ ವಿಜ್ಞಾನ ಪ್ರಬಂಧವೆಂದೂ ಪರಿಗಣಿಸಲಾಗಿದೆ. ಇವರು ಲಂಡನ್ನಿನಲ್ಲಿದ್ದಾಗ ಫ್ಯಾರಡೆಯವರೊಡನೆ ನೇರ ಸಂಬಂಧ ಪಡೆವ ಅವಕಾಶ ದೊರೆತಿತ್ತು.



"ಒಂದು ಕಡೆ ಭಾರ... ಇನ್ನೊಂದು ಕಡೆಯಲ್ಲಿ ಯತ್ನ... ಮಧ್ಯದಲ್ಲಿ ಆಸಿಕೆ. ಇದು ಯಾವ ವರ್ಗದ ಸನ್ನೆಯಾಗುತ್ತೆ ಸಾರ್ ?"

ಆಯಸ್ಕಾಂತದ ಅಥವ ವಿದ್ಯುತ್ ಹರಿವ ತಂತಿಯ ಸುತ್ತಣ ಪ್ರದೇಶ ಶಕ್ತಿಯ ಉಗ್ರಾಣ, ಈ ಶಕ್ತಿಯನ್ನು ಸದುಪಯೋಗಪಡಿಸಿಕೊಳ್ಳಲು ಯಂತ್ರವೊಂದನ್ನು ಕಂಡುಹಿಡಿಯಬೇಕೆಂದು ಜೇಮ್ಸ್ ಯೋಚಿಸಿದರು. ೧೮೬೧ರ ಅಕ್ಟೋಬರ್ ೧೯ರ ವೇಳೆಗೆ ಅಡ್ಡ ಕಂಪನ(Transeverse vibrations)ಗಳ ಪ್ರಸರಣ ವೇಗ ಸೆಕೆಂಡಿಗೆ ೧೯೩೦೮೮ ಮೈಲಿಗಳೆಂದು ತೋರಿಸಿ, ಬೆಳಕಿನ ಪ್ರಸರಣಕ್ಕೆ ಅಗತ್ಯವಾದ ಈಥರ್ ಮತ್ತು ವಿದ್ಯುತ್ ಆಯಸ್ಕಾಂತ ಸುತ್ತಣ ಪ್ರದೇಶಗಳ ಏಕರೂಪತೆಯನ್ನು ಸಾಧಿಸಿ, ಬೆಳಕು ಸಹ ವಿದ್ಯುತ್ ಆಯಸ್ಕಾಂತ ವಿಕಿರಣಗಳು ಎಂದು ತೋರಿಸಿದರು. ೧೮೬೧ರಲ್ಲಿ ರಾಯಲ್ ಸಂಸ್ಥೆ ಇವರನ್ನು ಗೌರವಿಸಿತು. ೧೮೬೧ರಲ್ಲಿ ತಂತಿಸಂದೇಶ ಮತ್ತಿತರ ವಿದ್ಯುತ್ ಶಕ್ತಿ ಆಧಾರಿತ ಉಪಕರಣಗಳ ಬಳಕೆಯಲ್ಲಿ ವಿಶ್ವಾದ್ಯಂತ ಏಕರೀತಿಯ ಮೂಲ ಮಾನದ ಅಗತ್ಯವನ್ನು ಅರಿತು, ವಿದ್ಯುತ್ ನಿರೋಧಕದ ಮೂಲಮಾನವನ್ನು ಸೂಚಿಸಲು ಬ್ರಿಟಿಷ್ ಸಂಸ್ಥೆಯೊಂದು ಸಮಿತಿ ರಚಿಸಿತು. ಮ್ಯಾಕ್ಸವೆಲ್ ಆ ಸಮಿತಿಯ ನೇತೃತ್ವವನ್ನು ವಹಿಸಿದರು. ಅತಿ ಹೆಸರಾಂತ ಥಾಮ್‌ಸನ್, ಚಾರ್ಲ್ಸ್ ವೀಟ್‌ಸ್ಟೋನ್, ಸಿ. ಡಬ್ಲ್ಯು, ಸೈಮನ್, ಬಾರ್‌ಪೋರ್ ಸ್ಟುವರ್ಟ್ ಮತ್ತು ಫ್ಲೆಮಿಂಗ್ ಜಂಕಿನ್ ಸಮಿತಿಯ ಸದಸ್ಯರು. ಕಾರ್ಯ ಕಿಂಗ್ಸ್ ಕಾಲೇಜಿನಲ್ಲಿ ೧೮೬೪ರಲ್ಲಿ ನಡೆದು ವರದಿ ಒಪ್ಪಿಸಲಾಯಿತು. ತಂತಿ ತಿರುವಿನ ೧೦ ಗ್ರಾಂ ತೂಕದ ಪ್ರತಿರೋಧಕವನ್ನು ಒಂದು ಮೂಲಮಾನವೆಂದು ಗೊತ್ತು ಮಾಡಿ, ಸಿ. ಜಿ. ಎಸ್. ಪದ್ಧತಿಯಲ್ಲಿ ಪ್ರತಿರೋಧಕದ ಮೂಲಮಾನ 'ಬಿ.ಎ. ಓಮ್ಸ್,' ಎಂದು ಸೂಚಿಸಲಾಯಿತು. ಸರ್ವವ್ಯಾಪಿ, ಕಡಿಮೆ, ಆದರೆ ನಿಶ್ಚಿತ ಸಾಂದ್ರತೆಯ ಈಥರ್ ಬೆಳಕು ಮತ್ತು ಶಾಖ ಪ್ರಸರಣಗಳ ಮಾಧ್ಯಮ ಮಾತ್ರವಲ್ಲದೆ, ಬೇರೆ ತರಹದ ಚಲನ ಶಕ್ತಿಯನ್ನು ಪಡೆದಿರುವುದೆಂದೂ ಜ್ಞಾನೇಂದ್ರಿಯಗಳಲ್ಲಿ ಉಂಟಾಗುವ ಸಂಕೇತಗಳಿಂದ ಈ ಚಲನ ಶಕ್ತಿ ಖಚಿತ ಪಡುವುದೆಂದೂ ರೇಡಿಯೊ ಅಲೆಗಳ ಇರುವಿಕೆಯ ಬಗ್ಗೆ ೧೮೬೪ರಲ್ಲಿ ಭವಿಷ್ಯ ನುಡಿದರು.

೧೮೬೫ರಲ್ಲಿ ಅನಾರೋಗ್ಯದ ನಿಮಿತ್ತ ಕಿಂಗ್ಸ್ ಕಾಲೇಜಿನ ಹುದ್ದೆಯಿಂದ ನಿವೃತ್ತರಾಗಿ ಗ್ಲೆನ್ ತೀರದ ಹಳ್ಳಿಗೆ ಮರಳಿ,ವಿದ್ಯುತ್ ಆಯಸ್ಕಾಂತತೆಯ ಬಗ್ಗೆ ಅಭ್ಯಾಸ ನಡೆಸಿದರು.

೧೮೭೧ರಲ್ಲಿ ಪುನಃ ಕೇಂಬ್ರಿಜ್‌ಗೆ ಮರಳಿ ಕ್ಯಾವೆಂಡಿಷ್ ಪ್ರಯೋಗಶಾಲೆಯ ನೇತೃತ್ವ ವಹಿಸಿದರು. ಇಂದಿಗೂ ಕೇಂಬ್ರಿಜ್‌ನಲ್ಲಿರುವ ಈ ಸಂಸ್ಥೆ ಮಾಕ್ಸವೆಲ್ಲರ ಎಂಜಿನಿಯರಿಂಗ್ ಪ್ರೌಢಿಮೆಗೆ ಸಾಕ್ಷಿಯಾಗಿದೆ. ೧೮೬೫ರಲ್ಲಿ ಪ್ರತಿಪಾದಿಸಿದ ವಿದ್ಯುತ್ ಶಕ್ತಿ ಮತ್ತು ಆಯಸ್ಕಾಂತಗಳ ಸಂಬಂಧವನ್ನು 'ವಿದ್ಯುತ್ ಶಕ್ತಿ ಮತ್ತು ಆಯಸ್ಕಾಂತತೆ" ಎಂಬ ಶೀರ್ಷಿಕೆಯಲ್ಲಿ ೧೮೭೩ರಲ್ಲಿ ಪ್ರಕಟಿಸಿದರು. ಇದರಲ್ಲಿ ಆಯಸ್ಕಾಂತತೆಕಾರಕ ತಂತಿಯಲ್ಲಿ ವಹನಗೊಳ್ಳುವ ವಿದ್ಯುತ್ ಪ್ರವಾಹ (I), ನಿಜ ವಿದ್ಯುತ್ ಪ್ರವಾಹ (J) ಯಿಂದ ಭಿನ್ನ ಎಂದು ಸಾಧಿಸಿ, ಸ್ಥಾನ ಪಲ್ಲಟಗೊಂಡ ವಿದ್ಯುತ್ (D) ಸೂಚಿಸಿ, ಒಟ್ಟು ನಿಜ ವಿದ್ಯುತ್ ಪ್ರವಾಹ $J=I+\frac{dD}{dT}$ ಎಂದು ಸಾಧಿಸಿದರು. ೧೮೮೬ರಲ್ಲಿ ಹೆಚ್.ಹರ್ಟ್ಸ್‌ರು ಈ ವಾದವನ್ನು ಪ್ರಯೋಗ ರೀತ್ಯಾ ತೋರಿಸಿದುದನ್ನು ಕಣ್ಣಾರೆ ಕಾಣುವ ದೈವ ಮಾಕ್ಸವೆಲ್ಲರಿಗಿರಲಿಲ್ಲ. ಪ್ರವಹನ ವಿದ್ಯುತ್ (Coduction current), ವಿದ್ಯುತ್ ಪ್ರೇರಕ (Electric induction)ಗಳಲ್ಲಿನ ಬದಲಾವಣೆಗಳಿಗೂ ಆಯಸ್ಕಾಂತ ಪರಿಣಾಮಕ್ಕೂ ಇರುವ ಸಂಬಂಧ ಆಧರಿಸಿದ ಮಾಕ್ಸವೆಲ್ಲರ ವಿವಿಧ ಸಮೀಕರಣಗಳು ಇಂದಿಗೂ ಆಧುನಿಕ ಬಾಹ್ಯ ವಾತಾವರಣದ ಬಗ್ಗೆ ಇರುವ ಅನೇಕ ವಾದಗಳನ್ನು ವಿವರಿಸುತ್ತವೆ. ಸುಮಾರು 3°K ಉಷ್ಣಾಂಶದ ಕಪ್ಪು ವಸ್ತು ಮತ್ತು ವಿದ್ಯುತ್ ಆಯಸ್ಕಾಂತ ಕಾರಕ ರಶ್ಮಿಗಳು ಬಾಹ್ಯಪ್ರಪಂಚವನ್ನಾವರಿಸಿವೆ ಎಂದು ನಂಬಲಾಗಿದೆ. ಇವರ ವಿದ್ಯುತ್ ಆಯಸ್ಕಾಂತದ ಬಗೆಗಿನ ವಾದಗಳೇ ಈತನನ್ನು ನ್ಯೂಟನ್ ಮತ್ತು ಐನ್‌ಸ್ಟೈನ್‌ರ ಮಟ್ಟಕ್ಕೆ ಸರಿಗೊಳಿಸುತ್ತದೆ. ಇವರ ಶನಿಗ್ರಹದ ಉಂಗುರಗಳ ಬಗ್ಗೆಯ ವಾದವನ್ನು ಪಯೋನೀರ್ ೨ ಉಪಗ್ರಹ ನಿಸ್ಸಂದೇಹವಾಗಿ ಖಚಿತಪಡಿಸಿದೆ. ಜೇಮ್ಸ್ ವಾಟರ ಆವಿ ಯಂತ್ರದ ಬಗೆಗೆ ವಾದವನ್ನು ಮುಂದಿಡುತ್ತಾ ಅದರಲ್ಲಿನ ವಿವಿಧ

ಅಣುಗಳ ವೇಗಗಳ ಬಗ್ಗೆ ಸೂಚಿಸಿರುವ ಇವರ ವಿತರಣೆಯ ನಿಯಮ ಸೈಬರ್ನೆಟಿಕ್ಸ್ ಅಧ್ಯಾಯಕ್ಕೆ ಮುನ್ನುಡಿ. ತಮ್ಮ ಆಯುಷ್ಯದ ಕೊನೆಯ ಎರಡು ವರ್ಷಗಳಲ್ಲಿ ಪ್ರಕಟಿಸಿದ ಅತಿ ನಿಗೂಢ ರೇಡಿಯೋ ಮಾಪಕ ಪರಿಣಾಮ ಹಗುರ ಅನಿಲಗಳ ಚಲನೆ ಎಂಬ ಹೊಸ ವಿಜ್ಞಾನಕ್ಕೆ ತಳ-ಪದಿ. ಇವರು ಪ್ರತಿಪಾದಿಸಿದ ವರ್ಣದೃಷ್ಟಿ ನಿಯಮ ಮತ್ತು ವಿದ್ಯುತ್ ಆಯಸ್ಕಾಂತ ನಿಯಮಗಳು. ಇವರ ಮರಣಾನಂತರದ ಅನೇಕ ವರ್ಷಗಳಲ್ಲಿ ರೇಡಿಯೋ, ರೆಡಾರ್, ವರ್ಣಛಾಯಾಚಿತ್ರ ಮತ್ತು ವರ್ಣ ದೂರಚಿತ್ರ ನಿರ್ಮಾಣಕ್ಕೆ ಆಧಾರವಾದವು. ೧೮೭೯ರಲ್ಲಿ ಮ್ಯಾಕ್ಸವೆಲ್ಲರು ಮರಣ ಹೊಂದಿದಾಗ, ಅವರ ಬೆಳಕಿನ ರಶ್ಮಿ ಒತ್ತಡ ಮತ್ತು ರೇಡಿಯೋ ಅಲೆಗಳ ಬಗ್ಗೆ ವಿಜ್ಞಾನ ಪ್ರಪಂಚದಲ್ಲಿ ಜಾಗೃತಿ ಮೂಡಿರಲಿಲ್ಲ. ೧೮೮೬ರಲ್ಲಿ ಹೆರ್ಟ್ಸ್‌ರು ನಿರ್ವಾತ ಪ್ರದೇಶದಲ್ಲಿ ವಿದ್ಯುತ್ ಆಯಸ್ಕಾಂತದ ಅಲೆಗಳನ್ನು ನಿರ್ಮಿಸಿ, ಮ್ಯಾಕ್ಸ-ವೆಲ್ಲರ ಸ್ಥಳಪಲ್ಲಟ ವಿದ್ಯುತ್ ಪ್ರವಾಹದ ಇರುವಿಕೆಯನ್ನು ಸ್ಥಿರಪಡಿಸಿ ಬರ್ಲಿನ್ ಸಂಸ್ಥೆಯ ಪಾರಿತೋಷಕ ಪಡೆದರು. ೧೯೧೦ರಲ್ಲಿ ರಷ್ಯದ ವಿಜ್ಞಾನಿ ಪೀಟರ್ ಲೆಬೆಡೆವ್ ತಮ್ಮ ಅತ್ಯಾಧುನಿಕ ವೈಜ್ಞಾನಿಕ ಸಲಕರಣೆಗಳ ಸಹಾಯದಿಂದ ವಿದ್ಯುತ್ ಆಯಸ್ಕಾಂತಕಾರಕ ರಶ್ಮಿ ಒತ್ತಡ ಅಳೆದರು, ಅದರ ಪರಿಮಾಣ ಮ್ಯಾಕ್ಸವೆಲ್ಲರು ೧೮೬೧ರಲ್ಲಿ ಸೂಚಿಸಿದಷ್ಟೇ ಇದ್ದುದು ನಿಜಕ್ಕೂ ಆಶ್ಚರ್ಯಕರ. ಅತಿ ಬೆಳಕುಳ್ಳ ಹಗಲು ಹೊತ್ತಿನಲ್ಲಿ ಈ ರಶ್ಮಿ ಒತ್ತಡ (Radiation pressure) $5 \times 10^{-5}$ ಡೈನ್ಸ್/ಚ. ಸೆಂ. ಮ್ಯಾಕ್ಸವೆಲ್ಲರ ಈ ನಿರೂಪಣೆ ಐನ್‌ಸ್ಟೈನರ $E = mc^2$ ಸಮೀಕರಣಕ್ಕೆ ಆಧಾರ ಎಂದರೆ ನಂಬುವುದೂ ಕಷ್ಟ. ಐನ್‌ಸ್ಟೈನರೇ ತಮ್ಮ ಜೀವನ ಚರಿತ್ರೆಯಲ್ಲಿ, ಅವರು ವಿದ್ಯಾರ್ಥಿಯಾಗಿದ್ದಾಗ ಮ್ಯಾಕ್ಸವೆಲ್ಲರ ವಾದಗಳು ಅತಿ ಪ್ರಿಯ ಮತ್ತು ರೋಮಾಂಚಕ ಪಠ್ಯವಾಗಿದ್ದವಲ್ಲದೆ, ಅವರ ಸಾಪೇಕ್ಷವಾದವು ಮ್ಯಾಕ್ಸವೆಲ್ಲರ ವಾದಗಳಿಂದ ರೂಪುಗೊಂಡುದೆಂದು ಹೇಳಿದ್ದಾರೆ. ೧೯೩೧ರಲ್ಲಿ ಮ್ಯಾಕ್ಸವೆಲ್ಲರ ನೂರನೆಯ ಹುಟ್ಟು ಹಬ್ಬದ ಸಂದರ್ಭದಲ್ಲಿ ಮಾತನಾಡುತ್ತಾ ನ್ಯೂಟನ್ನರ ತರುವಾಯ ಭೌತ ವಿಜ್ಞಾನಕ್ಕೆ ಅತ್ಯಮೋಘ ಕೊಡುಗೆ ಸಲ್ಲಿಸಿದವರಲ್ಲಿ ಮ್ಯಾಕ್ಸವೆಲ್ಲರು ಅಗ್ರಗಣ್ಯರು ಎಂದು ಐನ್‌ಸ್ಟೈನ್ ಹೇಳಿದರು.

ಸಾಧಾರಣ ಎತ್ತರದ, ಒಲ ಮೈಕಟ್ಟಿನ, ನಗು ಮುಖದ, ಜೇಮ್ಸ್‌ರದು ಆಕರ್ಷಕ ವ್ಯಕ್ತಿತ್ವ. ಕಪ್ಪು ಕಣ್ಣಿನ ಕರೀ ಕೂದಲಿನ ಬಿಳಿ ಮುಖದಲ್ಲಿ ಎದ್ದು ಕಾಣುವ ಕರೀ ಗಡ್ಡದ ಈ ಮೇಧಾವಿ ಸಮಾಧಾನ ಪ್ರವೃತ್ತಿಗೆ ತವರುಮನೆ. ಈ ವಿಜ್ಞಾನಿ ೧೮೭೯ ರ ನವೆಂಬರ್ ೫ ರಂದು ಅರ್ಬುದ ರೋಗದಿಂದ ಈ ಲೋಕವನ್ನು ತ್ಯಜಿಸಿದರು. ಇವರ ಸಿದ್ಧಾಂತಗಳನ್ನು ಆಧರಿತ ನಿರ್ಮಿತವಾದ ವರ್ಣಛಾಯಾಚಿತ್ರ, ವರ್ಣದೂರದರ್ಶನ, ವೈರ್‌ಲೆಸ್ ಮಾನವಕೋಟಿಗೆ ವಿವಿಧ ರೀತಿಗಳಿಂದ ಪ್ರಯೋಜನವನ್ನು ಒದಗಿಸಿವೆ. ಈ ಮೂಲಕ ಜೇಮ್ಸ್ ಕ್ಲಾರ್ಕ್ ಮ್ಯಾಕ್ಸ-ವೆಲ್ಲರು ಪ್ರಪಂಚದ ಅಗಣಿತ ಜನಸ್ತೋಮದ ಮನೆ-ಮನಗಳಲ್ಲಿ ಚಿರಾಯುವಾಗಿದ್ದಾರೆ.

## ಗಣಿತ ಒಲಂಪಿಕ್ಸ್

ಹಂಗೇರಿಯ ಗಣಿತ ಹಾಗೂ ಭೌತಿಕ ಸಂಸ್ಥೆಯು ತನ್ನ ಸಂಸ್ಥಾಪಕ ಹಾಗೂ ಅಧ್ಯಕ್ಷ ಭೌತವಿಜ್ಞಾನಿ ಬೇರನ್ ಲೊರ್ಯಾಂಡ್ ಈಯೊಟ್‌ವೊಸ್‌ನ ಗೌರವಾರ್ಥ 'ಗಣಿತ ಒಲಂಪಿಕ್ಸ್'ನ್ನು ೧೮೯೪ರಲ್ಲಿ ಪ್ರಾರಂಭಿಸಿತು. ಹಲವು ರೂಪಗಳಲ್ಲಿ ವಿವಿಧ ದೇಶಗಳಲ್ಲಿ ಈ ಸ್ಪರ್ಧೆ ವಿಸ್ತರಿಸಿದೆ. ಮುಂಬೈಯ ಟಾಟಾ ಮೂಲಭೂತ ಸಂಶೋಧನಾ ಕೇಂದ್ರದಲ್ಲಿ ಇತ್ತೀಚೆ (೮-೧೨-೧೯೭೯) ಈ ಬಗೆಯ ಸ್ಪರ್ಧೆಯನ್ನು ಶಾಲಾ ವಿದ್ಯಾರ್ಥಿಗಳಿಗಾಗಿ ಏರ್ಪಡಿಸಲಾಗಿತ್ತು.

# ಮಾಡಿದ್ದುಂಡ ಮಹಾರಾಯರು

ಕುಂ. ವೀರಭದ್ರಪ್ಪ

ನಾಜಿ ಪಿ.ಟಿ೩೦ ವ್ಯಾನೊಂದು ರೋಜು-ವಿಲ್ಲಾ ಭವನದ ಮುಂದೆ ಪರ್‌ಡಕ್‌ ಶಬ್ದ ಮಾಡಿ ನಿಂತುಕೊಂಡಿತು. ನಾಜಿ ಅರೆಸೈನಿಕ ಸಂಘಟನೆಯಾದ ಎಸ್. ಎಸ್. ದ ಮೂವರು ಸಮವಸ್ತ್ರಧಾರಿಗಳು ಅದರೊಳಗಿಂದ ಧುಮುಕಿ ಆ ದೊಡ್ಡ ಕಟ್ಟಡದ ಕಡೆ ಧಾವಿಸಿದರು. ಆ ಮೂವರಲ್ಲಿ ಒಬ್ಬನ ಹೆಸರು ಸ್ಪೀಯರ್‌ಗಲ್, ಎರಡನೆಯ ವ್ಯಕ್ತಿ ಕ್ರೀಮರ್, ಮತ್ತು ಕ್ಲಾಪಿನ್ ಮೂರನೆಯವ.

ಕೆಲವು ದಿನಗಳ ಹಿಂದೆ ಹಿಟ್ಲರನನ್ನು ಮುಗಿಸಿಬಿಡಲು ಸಂಚೊಂದು ನಡೆದಿತ್ತು. ಎಸ್.ಎಸ್. ಮುಖ್ಯಸ್ಥ ಲೂಕಾಸ್ ಕೊಲೆಯ ಪ್ರಯತ್ನವನ್ನು ಮೊದಲೇ ಪತ್ತೆಹಚ್ಚಿ ಹಿಟ್ಲರನನ್ನು ಕಾಪಾಡುವ ಪ್ರಯತ್ನ ನಡೆಸಬೇಕಿತ್ತು. ಅದನ್ನು ತಿಳಿದುಕೊಳ್ಳದೇ ಹೋದದ್ದರಿಂದ ಹಿಟ್ಲರ್ ಕೋಪದಿಂದ ಧಗಧಗ ಉರಿದ. ತಮ್ಮ ಎಸ್. ಎಸ್. ವಿಭಾಗದ ಮುಖ್ಯಸ್ಥ ಲೂಕಾಸ್‌ನನ್ನು ಮುಗಿಸಿಬಿಡಲು ಅಪ್ಪಣೆ ಕೊಡಿಸಿದ್ದ.

ನಾಜಿ ಪ್ರಭುವಿನ ಆಜ್ಞೆ ಬಹು ಬೇಗನೆ ಸ್ಪೀಯರ್‌ಗಲ್ಲನ ಚುರುಕು ಕಿವಿಯನ್ನು ತಲುಪಿತು. ಈ ಆಜ್ಞೆ ಎಲ್ಲಿ ಲೂಕಾಸನಿಗೆ ಗೊತ್ತಾಗಿ ಆತ ಓಡಿ ಹೋಗಿಬಿಡುವನೋ ಎಂದು ದಿಗಿಲುಗೊಂಡು ಸ್ಪೀಯರ್‌ಗಲ್ ತನ್ನಿಬ್ಬರು ಸಹಚರರೊಡನೆ ಕೊಲೆ ಮಾಡಲು ಧಾವಿಸಿದ. ಲೂಕಾಸನ ಭವ್ಯ ನಿವಾಸದ ಮುಂದೆ ನಿಂತು ತನ್ನ ಹದ್ದಿನ ಕಣ್ಣನ್ನು ಸುತ್ತಲೂ ಹರಿಬಿಟ್ಟ. ಈ ಮುಖ್ಯ ಕೊಲೆಗೆ ಸಾಕ್ಷಿಯಾಗಿ ಉಪಯೋಗಿಸಿಕೊಳ್ಳಲು ತನ್ನ ಕೆಳಗೆ ಕೆಲಸ ಮಾಡುತ್ತಿದ್ದ ಇಬ್ಬರನ್ನು ಕರೆದುಕೊಂಡು ಬಂದಿದ್ದ.

ಹಿಟ್ಲರನ ಆಜ್ಞೆಯನ್ನು ಶಿರಸಾವಹಿಸಿ ಪಾಲಿಸಬೇಕೆಂಬ ಕುರುಡು ಸ್ವಾಮಿನಿಷ್ಠೆಯಿಂದ ಆತ ಅಲ್ಲಿಗೆ ಬಂದಿರಲಿಲ್ಲ. ಲೂಕಾಸ್ ಸತ್ತರೆ ತಾನೇ ಈ ಸಂಸ್ಥೆಗೆ ಸರ್ವಾಧಿಕಾರಿ. ಅಲ್ಲದೆ ತಾನೆ ಖುದ್ದು ನಿಂತು ಲೂಕಾಸನನ್ನು ಕೊಲ್ಲಿಸಿದ್ದಾಗಿ ಹಿಟ್ಲರನಿಗೆ ಗೊತ್ತಾದರೆ ಆತ ತನಗೆ ಆ ಪದವಿಗೆ ಬಡ್ತಿ ಕೊಡದೆ ಇರಲಾರ.

ಲೂಕಾಸನಂಥ ಸಮರ್ಥ ವ್ಯಕ್ತಿ ಬದುಕಿರುವವರೆಗೂ ತನಗೆ ಆ ಪದವಿ ಸಿಗುವುದಿಲ್ಲ–

ವೆಂಬುದು ಸ್ಪೀಯರ್‌ಗಲ್‌ಗೆ ಗೊತ್ತು. ಆರೋಗ್ಯ ಪೂರ್ಣ ದೃಢ ಕಾಯದ ಲೂಕಾಸ್ ಅಷ್ಟು ಬೇಗನೆ ಸ್ವಾಭಾವಿಕವಾಗಿ ಸಾಯುವ ಸಂಭವ ವಿರಲಿಲ್ಲ. ಆ ಪದವಿಯ ಮೇಲೆ ಕಣ್ಣಿಟ್ಟಿದ್ದ ಸ್ಪೀಯರ್‌ಗಲ್ ಒಳಗೊಳಗೇ ಲೂಕಾಸ್‌ನನ್ನು ದ್ವೇಷಿಸುತ್ತಿದ್ದ. ಆ ಪದವಿಯಿಂದ ಲೂಕಾಸ್‌ನನ್ನು ಕೆಳಗಿಳಿಸಲು ಆತ ನಡೆಸಿದ್ದ ಸಂಚುಗಳು ಹಲವು. ಆದರೂ ಆತ ಅಯಶಸ್ವಿಯಾಗಿ ಅತೃಪ್ತನಾಗಿದ್ದ.

ಪ್ರಭುವಿಗೆ ಆಪ್ತ ಹಾಗೂ ನಿಷ್ಠನಾಗಿದ್ದ ಲೂಕಾಸನ ಬಗ್ಗೆ ಹಿಟ್ಲರ್ ಬಳಿ ಒಂದು ಚಾಡಿ ಹೇಳಲೂ ಸಾಧ್ಯವಿರಲಿಲ್ಲ. ಎಸ್.ಎಸ್.ನ ಮುಖ್ಯಸ್ಥನಾಗಿರುವುದರಿಂದ ಲೂಕಾಸ್ ಭಾರಿ ಲಾಭ ಗಳಿಸುತ್ತಿರುವನೆಂದು ಸ್ಪೀಯರ್‌ಗಲ್‌ಗೆ ಹೊಟ್ಟೆಕಿಚ್ಚು ಬೇರೆ. ಬೇಡ ಅಂತ ಆತ ತನ್ನ ಪಾಡಿಗೆ ತಾನು ಸುಮ್ಮನಿದ್ದರೂ ಸಾವಿರ ಸಾವಿರ ಹಣ ಲೂಕಾಸ್‌ನ ಕಾಲ ಬಳಿ ಬೀಳುತ್ತಿತ್ತು.

ಬಹಳ ವರ್ಷಗಳಿಂದ ಲೂಕಾಸ್ ಕೈ ಕೆಳಗೆ ಸ್ಪೀಯರ್‌ಗಲ್ ಕೆಲಸ ಮಾಡುತ್ತಿದ್ದನಾದರೂ ಈಗ ತನ್ನ ಮೇಲಧಿಕಾರಿಯನ್ನು ಕೊಲ್ಲಲು ಆತ ಬಹು ಉತ್ಸುಕನಾಗಿದ್ದ. ದೇಶ-ದ್ರೋಹದ ನೆಪದಲ್ಲಿ ಎಷ್ಟೋ ಸಾವಿರ ಜನ-ರನ್ನು ಕೊಂದಿದ್ದ ಸ್ಪೀಯರ್‌ಗಲ್. ಸತ್ತವರ ಪೈಕಿ ಎಷ್ಟೋ ಮಂದಿ ಸ್ಪೀಯರ್‌ಗಲ್‌ಗನಿಗೆ ವೈಯಕ್ತಿಗತವಾಗಿ ಶತ್ರುಗಳಿದ್ದರೂ ಅವರೆಲ್ಲರೂ ನಿರಪರಾಧಿಗಳೆ. ಈಗಲೂ ಹಿಟ್ಲರನ ಆಜ್ಞೆ ಮೇರೆಗೆ ಎಷ್ಟೋ ಮಂದಿಯನ್ನು ಕೊಲ್ಲುತ್ತಿದ್ದಾನೆ ಕೂಡ. ಕೊಲೆಯ ಸಂಚಿನಲ್ಲಿ ಅನುಮಾನ ಬಂದವರನ್ನು ಬದುಕುಳಿಯಲು ಬಿಟ್ಟಿರಲಿಲ್ಲ.

ತನ್ನ ಸರ್ವೀಸ್ ರಿವಾಲ್ವರನ್ನು ಕೈಯಲ್ಲಿ ಹಿಡಿದುಕೊಂಡು ಸ್ಪೀಯರ್‌ಗಲ್ ರೋಜುವಿಲ್ಲಾ ಭವನದ ಬಾಗಿಲನ್ನು ಬಡಿದಾಗ ಲೂಕಾಸನ ಸೇವಕ ಬಾಗಿಲು ತೆರೆದ.

"ನಾನು ಈ ಕ್ಷಣ ಲೂಕಾಸನನ್ನು ಕಾಣ ಬೇಕು," ಸ್ಪೀಯರ್‌ಗಲ್ ಗದರಿಸುತ್ತಾ ಕೇಳಿದ.

"ಯಾಕೆ ?"

"ಕೆಲಸ ಇದೆ."

"ಫೋನಿನಲ್ಲಿ ಮಾತಾಡಬಹುದಲ್ಲ."

"ಇಲ್ಲ, ನೋಡಲೇಬೇಕು."

ಸೇವಕ ಏನೋ ಮಾತಾಡಬೇಕೆಂದಿದ್ದಾಗ ಸ್ಪೀಯರ್‌ಗಲ್‌ನ ಕೈಯಲ್ಲಿದ್ದ ಪಿಸ್ತೂಲು ಗುಂಡು ಕಾರಿದ್ದು. ಸೇವಕ ಚೀರುತ್ತ ನೆಲಕ್ಕುರುಳಿದ್ದೂ ಕ್ಷಣಮಾತ್ರದಲ್ಲಿ ನಡೆದು ಹೋಯಿತು. ಸ್ಪೀಯರ್‌ಗಲ್‌ನ ಸಹಚರ ಕ್ರೇಮರ್ ಕೂಡ ಗುಂಡು ಹಾರಿಸಿದ.

ಕ್ಲಾಹಿನ್ ಮುಂದಕ್ಕೆ ಕಳ್ಳ ಹೆಜ್ಜೆ ಹಾಕುತ್ತ ಓಡಿದ.

ಬೆಪೆತಿದ್ದ ಮುಖ ಹೊತ್ತು ಹೌಹಾರಿ ಲೂಕಾಸನ ಹೆಂಡತಿ ಕೊಲೆ ನಡೆದಿದ್ದನ್ನು ನೋಡಿ ಬೆಚ್ಚಿ ನಿಂತಳು.




"ಇದರ ಬಗ್ಗೆ ನೀವೇ ಯಾರಾದರೂ ಬಂದು ಹೇಳ್ರೀ, ನನಗೆ ಅನುಭವವಿಲ್ಲ".

"ನಿನ್ನ ಗಂಡನೆಲ್ಲಿ?" ಅದುವರೆವಿಗೂ ಎರಡು ಮೂರು ಬಾರಿ ಆಕೆಯನ್ನು ನೋಡಿ ಕ್ಲಾಹಿನ್ ಕೇಳಿದ.

"ಆತ... ಆ...ತ...ಇಲ್ಲಿಲ್ಲ... ಬರ್ಲಿನ್ನಿಗೆ ಹೋಗಿದ್ದಾನೆ," ತೊದಲುತ್ತಾ ನುಡಿದಳು. ಸುಳ್ಳು ಹೇಳುತ್ತಿರುವಳೆಂದು ಸ್ಪೀಯರ್‌ಗಲ್‌ಗೆ ಆಕೆಯ ಮುಖ ನೋಡುತ್ತಲೇ ಗೊತ್ತಾಯಿತು.

"ಎಲ್ಲಿ ಆತ?" ಗದರಿಸಿ ಕೇಳಿದ ಮತ್ತೊಮ್ಮೆ.

"ಇಲ್ಲ," ಮತ್ತೆ ಹೇಳಿದಳು.

ಕೆಳಗೂ ಮೇಲೂ ಆಕೆಯನ್ನೊಮ್ಮೆ ನೋಡಿ ಊಟದ ಕೋಣೆಯಲ್ಲಿ ನಿಂತು ಸುತ್ತ ದೃಷ್ಟಿಸಿದ.

ಒಳಗಡೆ ಯಾರ ಸುಳಿವೂ ಇಲ್ಲ.

"ಎಲ್ಲಿದ್ದಾನೆ. ಹೇಳ್ತೀಯೋ ಇಲ್ವೋ?" ಕ್ರೇಮರ್ ಆಕೆಯ ಕುತ್ತಿಗೆಗೆ ಪಿಸ್ತೂಲಿನ ತುದಿ ಅನಿಸಿ ಕೇಳಿದ. ಕೋಪದಿಂದ ಬುಸು ಗುಟ್ಟುತ್ತ ಆಕೆ ಹಿಂಸೆಗೆ ತತ್ತರಿಸಿ ಚೀರಿ ದಳಾದರೂ ತುಟಿ ಬಿಚ್ಚಲಿಲ್ಲ

"ಹೇಳು, ನಿನ್ನ ಗಂಡನೆಲ್ಲಿ?" ಆತ ಎಷ್ಟು ಗದರಿಸಿದರೂ ಆಕೆಯ ಬಾಯಿಂದ ಉತ್ತರ ಬರಲಿಲ್ಲ.

ಸ್ಪೀಯರ್‌ಗಲ್‌ನ ಮೈ ತುಂಬ ಭಯದಿಂದ ಕೋಪ ದಿಂದ ತತ್ತರಿಸಿತು. ಲೂಕಾಸ್ ತಪ್ಪಿಸಿಕೊಂಡು ಓಡಿಹೋದರೆ ತಾನು ಬದುಕುಳಿವುದಿಲ್ಲ. ಹೇಗಾ ದರೂ ಕೊಲ್ಲಲೇಬೇಕು. ಆತ ಈ ರೋಜು ವಿಲ್ಲಾದೊಳಗೆ ಅವಿತುಕೊಂಡಿರಬೇಕು. ಲೂಕಾಸ್ ತಪ್ಪಿಸಿಕೊಂಡು ಹೋದರೆ ಹಿಟ್ಲರನ ಬಳಿ ತಾನು ಅಪರಾಧಿ ಎಂದು ರುಜುವಾತು ಮಾಡಿ ತನ್ನನ್ನು ಕೊಂದೇಕೊಲ್ಲುವರು.

ಮತ್ತೊಂದು ಬಾರಿ ಬಾಧೆಯಿಂದ ಅರಚಿದಳು ಬಲಿಪಶುವಿನ ಹೆಂಡತಿ. ಕ್ರೇಮರ್ ಆಕೆಯ ಕುತ್ತಿಗೆಯ ಮೇಲೆ ಪಿಸ್ತೂಲಿನ ಮೊನೆಯನ್ನು ಒತ್ತಿದ್ದ. ಆಕೆಯ ಕೆಂದೊಗಲ ಮೇಲೆ ಕೆಂಪು ಇಣುಕಿತ್ತು.

ಸ್ಪೀಯರ್‌ಗಲ್ ಕರ್ಚೀಫು ಕಿತ್ತು ಬೆವತ್ತಿದ್ದ ಮುಖ ಒರೆಸಿಕೊಂಡು ಮತ್ತೊಂದು ಕೋಣೆಗೆ ಕಿಟಕಿಯ ಮೂಲಕ ಒಳ ನುಸುಳಿದ. ಅದು ಗ್ರಂಥಾಲಯ. ಪುಸ್ತಕಗಳ ಸೆಲ್ಫ್‌ಗಳು, ಪಿಯಾನೋ ಹೊರತು ಮತ್ತೇನೂ ಅಲ್ಲಿರಲಿಲ್ಲ.

ಮತ್ತೊಂದು ಸಾರಿ ಜೋರಾಗಿ ಅರಚಿದಳು ಆ ನಿಸ್ಸಹಾಯಕ ಹೆಣ್ಣು.

"ಏನದು?"

ಸ್ಪೀಯರ್‌ಗಲ್ ತನ್ನ ಗೃಧ್ರ ದೃಷ್ಟಿಯಿಂದ ತದೇಕವಾಗಿ ನೋಡಿದ. ಗೋಡೆಗಾತಿದ್ದ ಪುಸ್ತಕ ತುಂಬಿದ್ದ ಸೆಲ್ಫ್ ಒಂದು ಓಲಾಡುತ್ತಿದೆ. ಅದು ರಹಸ್ಯ ಕೋಣೆಯ ಬಾಗಿಲಿರಬಹುದೆಂದು ಗ್ರಹಿಸಿದ ಆತ ಅದರ ಹತ್ತಿರ ಓಡಿ ಸ್ವಲ್ಪ ಸರಿಸಿದ. ತೆರೆದುಕೊಂಡಿತು ಬಾಗಿಲು. ಲೂಕಾಸ್ ಅಲ್ಲಿ ಅವಿತಿರುವ ಸುಳಿವು ಸಿಕ್ಕಿತು. ಪಿಸ್ತೂಲಿನಲ್ಲಿ ತುಂಬಿದ್ದ ಗುಂಡುಗಳು ಖಾಲಿಯಾಗುವವರೆಗೆ ಹಾರಿಸಿಯೇ ಹಾರಿಸಿದ. ಕೆಲವು ಕ್ಷಣಗಳಲ್ಲಿ ಕ್ರೇಮರ್, ಕ್ಲಾಹಿನ್ ಆ ಕೋಣೆಯನ್ನು ಪ್ರವೇಶಿಸಿದರು.

ಸ್ಪೀಯರ್‌ಗಲ್‌ನ ಕೈಯಲ್ಲಿ ಇನ್ನೂ ಹೊಗೆಯಾಡುತ್ತಿದ್ದ ಪಿಸ್ತೂಲನ್ನೂ ಪುಸ್ತಕದ ಸೆಲ್ಫನ್ನೂ ಇಬ್ಬರು ನೋಡಿದರು. ನಡೆದಿರುವುದು ಅವರಿಗೆ ಅರ್ಥವಾಗಲಿಕ್ಕೆ ಬಹಳ ಹೊತ್ತು ಹಿಡಿಯಲಿಲ್ಲ.

*

ಲೂಕಾಸ್‌ನನ್ನು ಕೊಂದ ಒಂದೆರಡು ದಿನ ಗಳಲ್ಲಿಯೇ ಸ್ಪೀಯಗಲ್‌ನ ಬಹಳ ದಿನದ ಆಸೆ ಪೂರೈಸಿತು. ಆತನ ಧೈರ್ಯವನ್ನೂ ಸಮಯ ಸ್ಫೂರ್ತಿಯನ್ನೂ ಪ್ರಶಂಸಿಸಿದ ಹಿಟ್ಲರ್ ಸ್ಪೀಯರ್‌ಗಲ್‌ನನ್ನು ಎಸ್. ಎಸ್. ವಿಭಾಗದ ಮುಖ್ಯಸ್ಥನನ್ನಾಗಿ ನೇಮಿಸಿದ. ಯುದ್ಧದಲ್ಲಿ ಜರ್ಮನಿ ಜಯಭೇರಿ ಭಾರಿಸಿತು. ಪೋಲೆಂಡ್, ಫ್ರಾನ್ಸ್ ಇನ್ನೂ ಕೆಲವು ದೇಶಗಳು ಜರ್ಮನಿಯ ವಶವಾದವು. ಎಸ್.ಎಸ್. ಪಡೆ ಇನ್ನೂ ವಿಸ್ತಾರ ಗೊಂಡಿತು. ಸ್ಪೀಯರ್‌ಗಲ್ ಇನ್ನೂ ಕೆಲ ಹೊಸ ಜವಾಬ್ದಾರಿಗಳನ್ನು ಹೊತ್ತುಕೊಳ್ಳಬೇಕಾಯಿತು.

ತನ್ನ ಕಛೇರಿಯಲ್ಲಿಯೇ ಕುಳಿತಿದ್ದು ಸಾವಿರಾರು ಜನರ ಪ್ರಾಣ ತೆಗೆಯಬಲ್ಲವನಾಗಿದ್ದ ಹಾಗೇ ಜೀವ ಉಳಿಸಬಲ್ಲವನೂ ಆಗಿದ್ದ. ಲೂಕಾಸ್ ಊಟ ಮಾಡುತ್ತಿದ್ದ, ಡೈನಿಂಗ್ ಟೇಬಲ್ ಮೇಲೆ ಊಟ ಮಾಡುತ್ತಿದ್ದ, ಲೂಕಾಸ್ ಮಲಗುತ್ತಿದ್ದ ಮಂಚದ ಮೇಲೆಯೇ ಮಲಗುತ್ತಿದ್ದ ಸ್ಪೀಯರ್‌ಗಲ್. ಅನು–ಕ್ರಮವಾಗಿ ಆಸ್ಟ್ರಿಯಾ, ಜೆಕೋಸ್ಲೋವಾಕಿಯಾ ಮೊದಲಾದ ದೇಶಗಳು ಜರ್ಮನ್ನರ ಧಾಳಿಗೆ ತುತ್ತಾದವು. ಅಧಿಕಾರದಾಹದಿಂದ ಬುಸ್ಸೆ

ಗುಡುತ್ತ ಸ್ಪೀಯರ್‌ಗಲ್ ರೋಜುವಿಲ್ಲಾದಲ್ಲಿ ಕಾಲ ಕಳೆಯುತ್ತಿದ್ದ.

ಸುಮಾರು ಎಂಟು ವರ್ಷಗಳವರೆಗೆ ಸ್ಪೀಯಗಲ್ ಎಸ್.ಎಸ್. ವಿಭಾಗದ ಮುಖ್ಯಸ್ಥನಾಗಿದ್ದ. ಆದರೆ ೧೯೪೪ರಲ್ಲಿ ಆತ ಕನಸಿನಲ್ಲೂ ಊಹಿಸಿರದ ಒಂದು ದುರ್ಘಟನೆ ಜರುಗಿತು. ಹಿಟ್ಲರನನ್ನು ಕೊಲ್ಲುವ ಇನ್ನೊಂದು ಸಂಚು ನಡೆಯಿತಾದರೂ ಆ ಸರ್ವಾಧಿಕಾರಿ ಸಾವಿನಿಂದ ತಪ್ಪಿಸಿಕೊಂಡ.

ಹಿಟ್ಲರ್ ಕೊಲೆಯ ಪ್ರಯತ್ನಕ್ಕೆ ಪ್ರತೀಕಾರವಾಗಿ ಸುಮಾರು ಹತ್ತು ಸಾವಿರ ಮಂದಿ ಕೊಲ್ಲಲ್ಪಟ್ಟರು. ಸಾವಿರಾರು ಜನ ಮನೆ ಸೇರಿದರು. ಒಂದು ದಿನ ಹಠಾತ್ತನೆ ಕಿಟಕಿಯಿಂದ ಮನೆ ಮುಂದೆ ನಿಂತ ಎರಡು ಮಿಲಿಟರಿ ಟ್ರಕ್ಕುಗಳಿಂದ ಸೈನಿಕರು ಮಶಿನ್‌ಗನ್ನುಗಳ ಸಮೇತ ಇಳಿವದ್ದನ್ನು ನೋಡಿದ ಸ್ಪೀಯರ್‌ಗಲ್. ಕೈಯಲ್ಲಿದ್ದ ಸಿಗಾರ್ ಕೊಳವೆಯನ್ನು ಅಲ್ಲೆ ಬಿಸಾಕಿ ಓಡಿದ. ಗಾಬರಿಯಿಂದೋಡಿ ಲೂಕಾಸ್ ಅಂದು ಬಚ್ಚಿಟ್ಟುಕೊಂಡಿದ್ದ ಆ ರಹಸ್ಯ ಕೋಣೆಯಲ್ಲೆ ಅಡಗಿಕೊಂಡ. ಹಿಟ್ಲರ್ ಮಹಾಶಯ ತನಗೆ ಮರಣ ಶಿಕ್ಷೆ ವಿಧಿಸಿರುವನೆಂದು ಕ್ಷಣ ಮಾತ್ರದಲ್ಲೇ ಆತನಿಗರ್ಥವಾಯಿತು.

ಬಂದೂಕುಧಾರಿಗಳು ಒಳಗೆ ಬರುತ್ತಿರುವ ಬೂಟಿನ ಶಬ್ದದ ಜೊತೆಗೆ ಕೇಳಿಬಂದ ಕ್ಲಾಹಿನ್‌ನ ಧ್ವನಿಯನ್ನೂ ಕೇಳಿಸಿಕೊಂಡ. ಅಂದು ಲೂಕಾಸನನ್ನು ಕೊಲ್ಲುವಾಗ ಕ್ಲಾಹಿನ್‌ನನ್ನೂ ಜೊತೆಗೆ ಕರೆದುಕೊಂಡು ಬಂದಿದ್ದು ಜ್ಞಾಪಕಕ್ಕೆ ಬಂತು. ಈ ರಹಸ್ಯ ಕೋಣೆ ಬಗ್ಗೆ ಆತನಿಗೆ ಗೊತ್ತಿರುವುದು ನೆನಪಾಗಿ ಗಡಗಡ ನಡುಗಿದ.

ತಾನು ಕ್ಲಾಹಿನ್‌ನನ್ನು ಕೊಲ್ಲಿಸಬೇಕಾಗಿತ್ತು. ಹಾಗೆ ಮಾಡದೆ ಹೋದುದರಿಂದ ತಾನು ಈಗ ಸಾಯಬೇಕಾಗಿ ಬಂತೆಂದು ಅಂದುಕೊಂಡ.

ಲೈಬ್ರರಿ ಕೋಣೆಯಲ್ಲಿ ಕಾಲಿಟ್ಟ ಕ್ಲಾಹಿನ್, ಸ್ಪೀಯಗಲ್ ಸತ್ತುಬಿದ್ದ. ಎಸ್.ಎಸ್. ವಿಭಾಗದ ಮುಖ್ಯಸ್ಥನಾಗಿ ಕ್ಲಾಹಿನ್ ನೇಮಕಗೊಂಡ.

*

ಇನ್ನು ಒಂದು ವರ್ಷ ಕೂಡ ಸರಿಯಾಗಿ ಉರುಳಿರಲಿಲ್ಲ.

ಕ್ಲಾಹಿನ್ ಓಡುತ್ತಿರುವನು. ಹೊಟ್ಟೆಯೊಳಗೆ ಏನೊಂದೂ ಇಲ್ಲ. ಓಡಿ ಓಡಿ ಬಾಯಿ ಒಣಗಿ ಕರಕ್ಕಟ್ಟಿದೆ. ಯುದ್ಧ ಮುಗಿದಿದೆ. ಹಿಟ್ಲರ್ ಆತ್ಮಹತ್ಯೆ ಮಾಡಿಕೊಂಡ. ರಷ್ಯನ್ನರು ಬರ್ಲಿನ್ ನಗರದ ಸುತ್ತ ಮುತ್ತಿರುವವರು. ತಾನು ಎಸ್.ಎಸ್. ವಿಭಾಗದ ಮುಖ್ಯಸ್ಥ. ಬರ್ಲಿನ್ ನಗರ ಪ್ರವೇಶಿಸಿದ ಕೂಡಲೆ ರಷ್ಯನ್ನರು ತನ್ನನ್ನೆ ಮೊದಲು ಹಿಡಿಯುವುದು; ಸಿಕ್ಕರೆ ಯುದ್ಧಕ್ಕೆ ಸಂಬಂಧಿಸಿದ ರಹಸ್ಯಗಳನ್ನು ಹೇಳುವಂತೆ ಪೀಡಿಸಿ ಚಿತ್ರಹಿಂಸೆ ಕೊಟ್ಟು ಕೊಲ್ಲುತ್ತಾರೆಂಬುದರಲ್ಲಿ ಸಂಶಯವಿಲ್ಲ. ಸ್ಪೀಯರ್‌ಗಲ್ ಮರಣಾನಂತರ ಕ್ಲಾಹಿನ್ ಮರಣಾಂತಿಕ ಪರಿಸ್ಥಿತಿಗೊಳಗಾಗಿದ್ದಾನೆ. ಅದಕ್ಕಾಗಿಯೇ ಆತ ತಪ್ಪಿಸಿಕೊಳ್ಳುವ ಪ್ರಯತ್ನದಲ್ಲಿ ಓಡುತ್ತಿರುವುದು. ಜರ್ಮನಿಯು ಅಮೇರಿಕ-ರಶಿಯಾದವರಿಂದ ತುಂಬಿ.




"... ಆಗಲಿ, ಮಾಡೋಣಂತೆ, ದಿನಗೂಲಿ ಎಷ್ಟು ಕೊಡ್ತೀರೋ ಹೇಳಿಬಿಡಿ."

ಹೋಗಿದೆ. ತನ್ನಂಥ ಪ್ರಮುಖರನ್ನು ಹಿಡಿಯುವ ಪ್ರಯತ್ನದಲ್ಲಿ ಅವರಿದ್ದಾರೆ.

ಕ್ಲಾಪಿನ್ನನಿಗೆ ಗೊತ್ತು, ರೋಜಾವಿಲ್ಲಾದ ಲೈಬ್ರರಿಯೊಳಗಿರುವ ರಹಸ್ಯ ಕೋಣೆಯಲ್ಲಿ ಅವಿತುಕೊಂಡುಬಿಟ್ಟರೆ ಸಾಕು. ಐದಾರು ತಿಂಗಳು ಕಳೆಯುವ ಹೊತ್ತಿಗೆ ಈ ಬಿಸಿ ವಾತಾವರಣ ತಗ್ಗಬಹುದು. ಹೇಗೋ ಐದಾರು ತಿಂಗಳಿಗಾಗುವಷ್ಟು ಆಹಾರ ಪದಾರ್ಥಗಳು ಆ ಕೋಣೆಯಲ್ಲಿವೆ. ಅಲ್ಲದೆ ಸ್ನಾನ–ಶಕ್ಕಸು ಸೌಕರ್ಯ ಕೂಡ ಇದೆ. ಓದಲಿಕ್ಕೆ ಪುಸ್ತಕಗಳಿಗೇನೂ ಅಲ್ಲಿ ಕೊರತೆಯಿಲ್ಲ. ಆದ್ದರಿಂದ ನಿರ್ಭಯವಾಗಿ ನಿರಾಂತಕವಾಗಿ ಅರ್ಧ ವರ್ಷ ಅಲ್ಲಿ ಕಳೆಯಬಹುದು.

ಎರಡು ದಿನಗಳು ಕಳೆದವು ಆ ಕೋಣೆಯಲ್ಲಿ. ಆ ಮನೆಯೊಳಗೆ ನೂರಾರು ಬೂಟುಗಳ ಸದ್ದಿನಿಂದ ಗಾಬರಿಗೊಂಡ. ರಷ್ಯನ್ ಭಾಷೆ ಕಿವಿಗೆ ಬೀಳುತ್ತಲೇ ರಷ್ಯದ ಸೈನಿಕರಿರಬಹುದೆಂದು ಊಹಿಸಿದ. ತಾನು ಉಸಿರು ಬಿಗಿ ಹಿಡಿದು ಇದ್ದುಬಿಟ್ಟಬೇಕಾಯಿತು. ಸ್ವಲ್ಪ ಹೊತ್ತು ತನಗಾಗಿ ಹುಡುಕಿ ಮರಳಿ ಹೋಗುವರು. ಹೋಗುವಾಗ ಐದಾರು ಮಂದಿ ಸೈನಿಕರನ್ನು ಕಾವಲಿಟ್ಟು ಹೋಗಬಹುದು. ಅವರಂತೂ ಬಹಳ ದಿನ ಇಲ್ಲಿರಲು ಸಾಧ್ಯವಿಲ್ಲ. ಹೀಗೆ ಯೋಚಿಸುತ್ತ ನಿಶ್ಚಿಂತನಾಗಿ ಕುಳಿತುಕೊಂಡ.

ಹಠಾತ್ತನೆ ಆ ರಹಸ್ಯ ಕೋಣೆಯ ಬಾಗಿಲು ತೆರೆದುಕೊಂಡಿತು. ಸಮವಸ್ತ್ರ ಧರಿಸಿದ್ದ ರಷ್ಯನ್ ಯೋಧರು ಆ ಕೋಣೆಯೊಳಕ್ಕೆ ಕಾಲಿರಿಸಿದರು. ಆತನನ್ನು ಬಂದೂಕಿನಿಂದ ತಿವಿಯುತ್ತ ಹೊರಗೆ ಎಳೆದುಕೊಂಡು ಹೋದರು.

ರಷ್ಯನ್ ಅಧಿಕಾರಿಯ ಪಕ್ಕದಲ್ಲಿ ನಿಂತಿರುವಾತನ ಮುಖ ನೋಡಿ ಕ್ಲಾಪಿನ್‌ನ ಮುಖ ಬಿಳಿಚಿಕೊಂಡಿತು. ಆತ ತನ್ನ ಅಸಿಸ್ಟೆಂಟ್ ಕ್ರೇಮರ್!

"ಕ್ಲಾಪಿನ್ ಈತನೋ?" ಕೇಳಿದ ರಷ್ಯನ್ ಅಧಿಕಾರಿ.

"ಹೌದು..."

ಕ್ಲಾಪಿನ್‌ನ ಮೈದುಳು ದಿಮಿಗುಡತೊಡಗಿತು. ಸ್ಪೀಯರ್‌ಗಲ್ ಲೂಕಾಸನನ್ನು ಕೊಲ್ಲುವಾಗ ಕ್ರೇಮರ್ ಕೂಡ ಈ ರಹಸ್ಯ ಕೋಣೆಯ ಬಾಗಿಲನ್ನು ನೋಡಿದ್ದ. ತಾನಿಲ್ಲಿ ಅವಿತು ಕೊಳ್ಳುವುದನ್ನು ಊಹಿಸಿಬಿಟ್ಟಿದ್ದಾನೆ. ಈ ರಹಸ್ಯ ಕೋಣೆಯ ಬಗ್ಗೆ ಗೊತ್ತಿದ್ದ ಕ್ರೇಮರನನ್ನು ತಾನು ಕೊಲ್ಲಿಸಬೇಕಿತ್ತು. ತನ್ನ ಪ್ರಾಣ ಕಾಪಾಡಿಕೊಳ್ಳಲು ಆ ರಷ್ಯದವರನ್ನು ಸೇರಿಕೊಂಡು ಸಹಾಯ ಮಾಡುತ್ತಿದ್ದಾನೆ. ಅವನೊಬ್ಬ ಸುಳಿವು ಕೊಡದಿದ್ದರೆ ತಾನು ನೂರು ವರ್ಷ ಬದುಕುತ್ತಿದ್ದೆ. ಎಂದು ಯೋಚಿಸುತ್ತಿದ್ದ ಕ್ಲಾಪಿನ್‌ನನ್ನು ಎಳೆದುಕೊಂಡು ಸೈನಿಕರು ಹೊರಗೆ ಹೋಗುವಾಗ ಕ್ರೇಮರ್ ತೂಗಾಡುತ್ತಿದ್ದ ಬುಕ್‌ಶೆಲ್ಫ್‌ನ್ನು ಒಂದು ಸಾರಿ ನೋಡಿದ.

(ಸಾಧಾರ)

## ತಾಂತ್ರಿಕ ವಿಶ್ವವಿದ್ಯಾನಿಲಯ

ವಿಜ್ಞಾನ ಹಾಗೂ ತಂತ್ರಜ್ಞಾನದ ಬಗೆಗೆ ಆಂಧ್ರಪ್ರದೇಶವು ಭಾರತದಲ್ಲೇ ಮೊದಲ ಬಾರಿ ಪ್ರಾಯೋಗಿಕವಾಗಿ ವಿಶ್ವವಿದ್ಯಾನಿಲಯ(ಜವಾಹರಲಾಲ ನೆಹರೂ ತಾಂತ್ರಿಕ ವಿಶ್ವವಿದ್ಯಾಲಯ)ವೊಂದನ್ನು ಹೈದರಾಬಾದಿನಲ್ಲಿ ಪ್ರಾರಂಭಿಸಿತು (೨-೧೦-೧೯೭೨). ತಮಿಳ್ನಾಡು ಸಹ ಇಂಥಹದೇ ಪ್ರತ್ಯೇಕ ವಿಶ್ವವಿದ್ಯಾನಿಲಯವನ್ನು ರಚಿಸಿದೆ. ಅಖಿಲ ಭಾರತ ತಾಂತ್ರಿಕ ಶಿಕ್ಷಣ ಸಂಸ್ಥೆಯು ೧೯೭೦ ರಲ್ಲಿ ಏರ್ಪಡಿಸಿದ್ದ ರಾಷ್ಟ್ರೀಯ ವಿಚಾರ ಸಂಕಿರಣದಲ್ಲಿ ಪ್ರತಿಯೊಂದು ರಾಜ್ಯದಲ್ಲೂ ವಿಜ್ಞಾನ ಹಾಗೂ ತಾಂತ್ರಿಕತೆ ಬಗೆಗಿನ ವಿಶ್ವವಿದ್ಯಾನಿಲಯವನ್ನು ರಚಿಸಲು ಸಲಹೆ ನೀಡಿತ್ತು.




# ಉಸಿರಿನ ದುರ್ವಾಸನೆಯನ್ನು ನಿವಾರಿಸಿರಿ...
# ದಂತಕ್ಷಯವನ್ನು ಎದುರಿಸಿರಿ

ಪ್ರತಿ ಸಲ ಊಟವಾದ ಮೇಲೆ ಕೋಲ್ಗೇಟ್‌ನಿಂದ ಹಲ್ಲುಜ್ಜಿರಿ. ಅದು ಜಗತ್ತಿನಾದ್ಯಂತ ದಂತವೈದ್ಯರು ಶಿಫಾರಸು ಮಾಡುವ ರೀತಿಯಲ್ಲಿ ನಿಮ್ಮ ಹಲ್ಲುಗಳಿಗೆ ರಕ್ಷಣೆ ನೀಡುತ್ತದೆ.

ಹಲ್ಲುಗಳೆಡೆಯಲ್ಲಿ ಉಳಿಯುವ ಆಹಾರ ಕಣಗಳಲ್ಲಿ ರೋಗಾಣುಗಳು ಬೆಳೆಯುತ್ತವೆ. ಇವು ಉಸಿರಿನ ದುರ್ವಾಸನೆಗೆ ಕಾರಣವಾಗುತ್ತವೆ —ಆಮೇಲೆ ಇವು ನೋಯುವ ದಂತ ಕ್ಷಯವನ್ನು ಉಂಟುಮಾಡುತ್ತವೆ

ಆದುದರಿಂದ ಯಾವಾಗಲೂ ಆಹಾರವನ್ನು ಸೇವಿಸಿದ ನಂತರ ಕೂಡಲೇ ಕೋಲ್ಗೇಟ್ ರೀತಿಯಲ್ಲಿ ಹಲ್ಲುಜ್ಜಿರಿ. ನಿಮ್ಮ ಶ್ವಾಸವನ್ನು ಶುಚಿಗೊಳಿಸಲು, ಹಲ್ಲುಗಳನ್ನು ಬಿಳುಪಾಗಿಸಲು ಮತ್ತು ದಂತಕ್ಷಯವನ್ನು ಎದುರಿಸಲು ಅದು ಅತ್ಯಂತ ಪರಿಣಾಮಕಾರಿ ಎಂದು ಪ್ರಮಾಣಿತವಾಗಿದೆ

**ಕೋಲ್ಗೇಟ್‌ನ ವಿಶ್ವಸನೀಯ ಸೂತ್ರವು ಕೆಲಸ ಮಾಡುವ ರೀತಿ :**



ಉಸಿರಿನ ದುರ್ವಾಸನೆಯನ್ನು ಮತ್ತು ದಂತ ಕ್ಷಯವನ್ನು ಉಂಟುಮಾಡುವ ರೋಗಾಣುಗಳು ನಿಮ್ಮ ಹಲ್ಲುಗಳೆಡೆಯಲ್ಲಿ ಸಿಕ್ಕಿಕೊಂಡ ಆಹಾರ ಕಣಗಳಲ್ಲಿ ಬೆಳೆಯುತ್ತವೆ.



ಕೋಲ್ಗೇಟ್‌ನ ಅಪೂರ್ವವಾದ ಕಾರ್ಯಶೀಲ ನೊರೆ ಹಲ್ಲುಗಳೆಡೆಯನ್ನು ಆಳವಾಗಿ ಪ್ರವೇಶಿಸುತ್ತದೆ ಮತ್ತು ಅಪಾಯಕರವಾದ ಆಹಾರ ಕಣಗಳನ್ನೂ ರೋಗಾಣುಗಳನ್ನೂ ಹೋಗಲಾಡಿಸುತ್ತದೆ.



ಫಲಿತಾಂಶ : ಆಕರ್ಷಕವಾದ, ಬಿಳುಪಾದ ಹಲ್ಲುಗಳು, ಆತ್ಮವಿಶ್ವಾಸವನ್ನುಂಟುಮಾಡುವ ಶುಚಿಯಾದ ಉಸಿರು ಮತ್ತು ದಂತಕ್ಷಯದ ವಿರುದ್ಧ ರಕ್ಷಣೆ.

ಅಧಿಕ ಶುಚಿಯಾದ, ದುರ್ವಾಸನೆ ರಹಿತವಾದ ಉಸಿರಿಗಾಗಿ ಮತ್ತು ಅಧಿಕ ಬಿಳುಪಾದ ಹಲ್ಲುಗಳಿಗಾಗಿ ಹೆಚ್ಚು ಜನರು ಜಗತ್ತಿನಲ್ಲಿ ಬೇರೆ ಯಾವುದೇ ಟೂಥ್‌ಪೇಸ್ಟ್‌ಗಿಂತ ಅಧಿಕವಾಗಿ ಕೋಲ್ಗೇಟನ್ನು ಕೊಳ್ಳುತ್ತಾರೆ.




**ದಂತವೈದ್ಯರು ಮಾತ್ರ ನಿಮಗೆ**
**ಉತ್ತಮತರ ದಂತರಕ್ಷಣೆಯನ್ನು ನೀಡಬಲ್ಲರು**

ಹಲ್ಲುಗಳ ಸಂಪೂರ್ಣ ರಕ್ಷಣೆಗಾಗಿ ಕೋಲ್ಗೇಟ್ ಟ್ರೈಗಾರ್ಡ್ ಟೂತ್‌ಬ್ರಶ್‌ಗಳನ್ನು ಉಪಯೋಗಿಸಿ. ಅವು ಹಲ್ಲಿನ ಎನಾಮೆಲನ್ನು ಮತ್ತು ಒಸಡುಗಳನ್ನು ರಕ್ಷಿಸುತ್ತವೆ ಮತ್ತು ಹಲ್ಲುಗಳ ಮೇಲೆ ಕಾಪಾಡಬೇಕಾದ ಕರೆಯುತ್ತವೆ. ... ನಿಮ್ಮ ಕುಟುಂಬದ ಪ್ರತಿಯೊಬ್ಬರಿಗೂ ... ಮಾದರಿಗಳು

DC.G.64 KN

# ಇದುವೇ ಜೀವ ಇದು ಜೀವನ

ಒಮ್ಮೆ ಬೆಂಗಳೂರಿನ ಮುಖ್ಯವ್ಯಾಪಾರ ಕೇಂದ್ರದ ಒಂದು ಮಹಡಿಯ ಕೊಠಡಿಯಲ್ಲಿ ತಂಗಿದ್ದೆ. ಬೆಳಗಿನ ಜಾವ ಐದು ಗಂಟೆಯ ಹೊತ್ತಿಗೆ ಎಚ್ಚರವಾಗಿ ಕಿಟಕಿ ತೆರೆದು ಕಣ್ಣು ಹಾಯಿಸಿದಾಗ, ಎದುರು ಸಾಲಿನ ಅಂಗಡಿಯೊಂದರ ಜಗಲಿಯ ಮೇಲಾಗಲೇ ಪುಟ್ಟದೊಂದು ಕುಟುಂಬದ ನಿತ್ಯ ಜೀವನ ನಾಟಕದ ತಾಲೀಮು ಪ್ರಾರಂಭವಾಗಿತ್ತು.

ದೊಡ್ಡದೊಂದು ಮರದ ಪೆಟ್ಟಿಗೆಯ ಮರೆಗೆ ಸ್ಟೌ ಮೇಲೆ ಕಾಯಿಸಿದ ನೀರಿನಿಂದ ಫುಟಪಾತ್ ಮೇಲೇ ಗಂಡ ಮಿಂದ. ಉಪಹಾರದ ತಯಾರಿ ಮುಗಿಸಿ ಹೆಂಡತಿ ಸೊಳ್ಳೆ ಪರದೆಯ ಮರೆಯಲ್ಲಿ ಸ್ನಾನ ಮುಗಿಸಿದಳು. ಆತ ಮಲಗಿದ್ದ ಎರಡು ಪುಟ್ಟ ಮಕ್ಕಳನ್ನು ಎಬ್ಬಿಸಿ ಅವುಗಳ ಸ್ನಾನ ಮುಗಿಸಿ, ಅಚ್ಚುಕಟ್ಟಾಗಿ ಬಟ್ಟೆ ತೊಡಿಸಿ ತಾನೂ ಶುಭ್ರವಾದ ಉಡುಪು ಧರಿಸಿದ. ದೊಡ್ಡ ಪೆಟ್ಟಿಗೆ ಈಗ ದೇವರ ಮಂದಾಸನವಾಯಿತು. ಅದರ ಮೇಲೆ ಪುಟ್ಟ ವಿಗ್ರಹ, ಎರಡೂ ಬದಿಗೆ ಮೇಣಬತ್ತಿಗಳು ಬೆಳಗಿದವು. ಇಡಿ ಕುಟುಂಬ ದೇವರೆದುರು ಮಂಡಿಯೂರಿ ಕುಳಿತು ಮೃದು-ಮಧುರ ಸ್ವರದಲ್ಲಿ ಪ್ರಾರ್ಥಿಸಿತು. ಬಳಿಕ ಅದೇ ಮರದ ಪೆಟ್ಟಿಗೆ ಊಟದ ಮೇಜಾಗಿ ಮಾರ್ಪಟ್ಟಿತು. ಬಿಳಿಯದೊಂದು ವಸ್ತ್ರ ಹಾಸಿ ಅದರ ಮೇಲೆ ಕಾಫಿ-ತಿಂಡಿ ಕಪ್ ಸಾಸರ್ ಪ್ಲೇಟುಗಳಲ್ಲಿ ಸಿದ್ಧವಾದವು. ಎರಡೂ ಬದಿಗಿದ್ದ ಚಿಕ್ಕ ಪೆಟ್ಟಿಗೆಗಳ ಮೇಲೆ ದಂಪತಿಗಳು ತಲಾ ಒಂದು ಮಗುವನ್ನು ತೊಡೆಯ ಮೇಲೆ ಕೂರಿಸಿಕೊಂಡು ಹಕ್ಕಿ ಬಳಗದಂತೆ ಚಿಲಿಪಿಲಿ ಗುಟ್ಟುತ್ತ ಹೊಟ್ಟೆಗೊಂಡಷ್ಟು ತುಂಬಿಕೊಂಡರು.

ನಾಟಕದ ಮೊದಲಂಕ ಮುಗಿಯಿತು. ಗಂಡ ಹೆಂಡಿರಿಬ್ಬರೂ ಚಾಕಚಕ್ಯತೆಯಿಂದ ತಮ್ಮ ಯಾವತ್ತೂ ವಸ್ತುಗಳನ್ನು ಮೂರು ಪೆಟ್ಟಿಗೆಗಳಲ್ಲಿ ಅಡಗಿಸಿ ಅವಕ್ಕೆ ಬೀಗ ಹಾಕಿ ಅಂಗಡಿಯ ಜಗುಲಿಯ ಮೇಲಿದ್ದ ಒಂದು ಗೂಡಿನೊಳಗೆ ಸೇರಿಸಿಟ್ಟರು. ಅಂಗಡಿಯ ಜಗುಲಿಯನ್ನು ಗುಡಿಸಿ ಒದ್ದೆ ಬಟ್ಟೆಯಲ್ಲಿ ಒರೆಸಿ ಸ್ವಚ್ಛ ಮಾಡಿದರು. ಇದೀಗ ಅಂಗಡಿ, ಮಾಲೀಕರ ವ್ಯಾಪಾರಕ್ಕೆ ಸಿದ್ಧವಾಯಿತು. ಇಷ್ಟಾಗುವಾಗ ಸೂರ್ಯೋದಯವಾಯಿತು. ದಂಪತಿಗಳು ಮಕ್ಕಳು ಸಹಿತ ತಮ್ಮ ದಿನನಿತ್ಯದ ಹೋರೆಗೆ ಆ ಮಹಾನಗರದಲ್ಲಿ ಮಾಯವಾದರು. ಅವರು ಮರಳಿದ್ದು ರಾತ್ರಿ ಬಾಗಿಲಿಕ್ಕಿದ ಬಳಿಕ. ಅಡಿಗೆ ಊಟ ಮುಗಿಸಿ ತಮ್ಮ ನೀಲವರ್ಣದ 'ತಂಬು' ಸಜ್ಜು ಮಾಡಿಕೊಂಡು ನಿಶ್ಚಿಂತೆಯಿಂದ ನಿದ್ದೆ ಹೋದರು.

— ಸಿ ಎಸ್. ಶರ್ಮ

ಅಂದು ೧೯೭೯ನೇ ಇಸವಿಯ ಅಕ್ಟೋಬರ್ ೮ನೇ ದಿನ, ಜಯಪ್ರಕಾಶ ನಾರಾಯಣರು ಸ್ವರ್ಗಸ್ಥರಾದ ದಿನ. ನಾನು ಮಾಮೂಲಿನಂತೆ ನಮ್ಮ ಹಾಸ್ಟೆಲಿನ (ಲುಧಿಯಾನಾದ ಕೃಷಿ ವಿಶ್ವವಿದ್ಯಾಲಯ) ಭೋಜನಗೃಹದಲ್ಲಿ ಬೆಳಗಿನ ಉಪಹಾರವನ್ನು ಮುಗಿಸಿ ನನ್ನ ರೂಮಿಗೆ ಬಂದೆ. ರೇಡಿಯೊ ಹಚ್ಚಿದೊಡನೆ ಆಕಾಶವಾಣಿಯಲ್ಲಿ ಮೆಚ್ಚಿನ ಹಿಂದಿ ಚಿತ್ರಗೀತೆಗಳನ್ನು ಬಿತ್ತರಿಸುತ್ತಿದ್ದರು. ಆ ಹಾಡು ಮುಗಿದ ಕೂಡಲೇ ಪ್ರಕಟಣೆಗಾರರು "ಮುಂದಿನ ಗೀತೆ ಮೇರಾ ನಾಮ್ ಜೋಕರ್ ಚಿತ್ರದ್ದು; ಹಾಡಿರುವ ಕಲಾವಿದರು ಮುಕೇಶ..." ಇತ್ಯಾದಿ ಹೇಳಿದ ಮೇಲೆ ಆ ಹಾಡಿನ ಆರಂಭದಲ್ಲಿರುವ ದುಃಖ ಸೂಚಕವಾದ ಸಂಗೀತ ಸುಮಾರು ಬಂದ್ರ

ನಿಮಿಷಕಾಲ ಕೇಳಿಬಂತು. ಆದರೆ ಇನ್ನೇನು ಮುಕೇಶ 'ಜಾನೆ ಕಹಾಂ ಗಯೇವೊ ದಿನ್' ಎಂದು ಹೇಳುವ ಮೊದಲೇ ಆಕಾಶವಾಣಿಯವರು ಕಾರ್ಯಕ್ರಮವನ್ನು ಅಲ್ಲಿಗೇ ಮುಗಿಸಿ ಜಯಪ್ರಕಾಶ ನಾರಾಯಣರವರು ನಿಧನರಾದ ವಾರ್ತೆಯನ್ನು ಬಿತ್ತರಿಸಿದರು. ನಂತರ ಶೋಕ ಸಂಗೀತ ಆರಂಭವಾಯಿತು. ಜೆ. ಪಿ. ನಿಧನದ ವಾರ್ತೆ ಅನಿರೀಕ್ಷಿತವೇನಾಗಿರದಿದ್ದರೂ ಅರೆಕ್ಷಣ ನನಗೆ ಕಸಿವಿಸಿಯಾಯಿತು. ಮರುನಿಮಿಷವೇ ಮುಕೇಶ ಹಾಡಲಿದ್ದ ಹಾಡಿನ ಸಾಲುಗಳೆರಡೂ ಪುನಃ ಸುಳಿದುಹೋಗಿ ವಿಷಾದದ ನಗೆಯೂ ಬಂತು. ಬಹುಶಃ ಜೆ. ಪಿ. ಜನತಾ ಸರಕಾರದ ಯಶಸ್ಸಿನ ಬಗ್ಗೆ ಅಗಾಧ ಕನಸು ಕಾಣುತ್ತಿದ್ದ ಆ ದಿನಗಳು ಆಗಲೇ 'ಗಯೇವೋ ದಿನ್' ಆಗಿದ್ದುವು! ತಾವೆಲ್ಲಿ ಹೋಗುವದು-ಜಾನೇ ಕಹಾಂ- ಎಂಬುದನ್ನೂ ಅವರಾಗಲೇ ನಿರ್ಧರಿಸಿಬಿಟ್ಟಿದ್ದರು ಅಲ್ಲವೆ?

- ಕೆ. ಎಂ. ಉಮೇಶ

"ಅಂಕಲ್ ಬೆಲ್ ಹೊಡೀರಿ! ಬಸ್ ಸ್ಟಾಪ್ ಮಾಡ್ರಿ. ಈ ಕಂಡಕ್ಟ್ರು ರೊಕ್ಕ ತಗೋದಿಲ್ಲ ಅಂತಾರ. ಟಿಕೇಟ್ ಬೇಕು ನಂಗೆ."

ಎಂದು ತನ್ನ ಮುದ್ದಾದ ಮಾತಿನಲ್ಲಿ ನನ್ನತ್ತ ನೋಡುತ್ತ ಉಸಿರಿತ್ತು ಆ ಪುಟ್ಟ ಹುಡುಗಿ. ಪ್ರತಿದಿನ. ಧಾರವಾಡದ ವಿದ್ಯಾಗಿರಿಯಿಂದ ಬಾಸೆಲ್ ಮಿಶನ್ ಕಾನ್ವೆಂಟ್ ಸ್ಕೂಲಿಗೆ ಆ ಮಗುವಿನ ಪ್ರಯಾಣ.

ನೀಲಿ ಹಾಗೂ ಬಿಳಿ ಮಿಶ್ರಿತ ಯೂನಿಫಾರ್ಮ್, ಸ್ಕೂಲ್ ಬ್ಯಾಗ್, ಜೊತೆಗೆ ಟಿಫಿನ್ ಬಾಕ್ಸ್ ಹಾಗೂ ಧಾರವಾಡದ ಮಳೆಯಿಂದ ರಕ್ಷಿಸಲು ಪುಟ್ಟದಾದ ರೇನ್‌ಕೋಟ್ ಇವು ಆ ಮಗುವಿನ ಜೊತೆಗಿದ್ದ ಅವಳಿಗಿಂತ ಭಾರವಾದ ವಸ್ತುಗಳು. ಎರಡನೆಯ ತರಗತಿಯಲ್ಲಿ ಓದುವ ಸುಮಾರು ಏಳು ವರ್ಷದ ಹಸುಳೆ.

ಅಂದು ಕಂಡಕ್ಟರ್ ಗಡಿಬಿಡಿಯಲ್ಲಿ ಆ ಮಗೂಗೆ ಟಿಕೇಟು ಕೊಡದೆಯೇ, ನಗುತ್ತ "ಟಿಕೇಟು ನಾಳೆ ಕೊಡುವೆ, ಈಗ ಹಾಗೇನೇ ಇಳಿದು ಬಿಡಮ್ಮ; ನಿನ್ನ ರೊಕ್ಕಾ ನಿನ್ನ ಹತ್ರ ಇಟ್ಟುಕೊ, ನಡುವಿನ ಸೂಟಿನಾಗ ಚಾಕಲೇಟ್ ತಿನ್ನು" ಎಂದು ಆ ಮಗುವಿನ ಮುದ್ದಾದ ಮುಖದ ಮೇಲೆ ಪ್ರೀತಿಯಿಂದ ಕೈಯಾಡಿಸಿ ಹೇಳಿದ್ದ. ಆದರೆ, ಆ ಮಗು ಪ್ರತಿಯಾಗಿ,

"ಊಹುಂ! ಮಮ್ಮಿ ನಂಗೆ ದಿನಾ ಹತ್ತು ಪೈಸೆ ಕೊಡತಾಳೆ ಬಸ್ಸಿಗಾಗಿ. ನಂಗೆ ಟಿಕೇಟ್ ಬೇಕು. ನೀ ಕೊಡದೇ ಇದ್ರ, ನಾಳೆ ನಮ್ಮ ಮಮ್ಮೀನ ಕರಕೊಂಡ ಬಂದ ಬೈಯಿಸ್ತೀನಿ ನೋಡು ಮತ್ತೆ."

ಮಗುವಿನ ನಿರ್ಮಲ, ನಿಃಸ್ವಾರ್ಥ, ಕರ್ತವ್ಯಭಾವದ ಮನ ನೋಡಿ ನಮಗೆಲ್ಲ ಸಂತಸ ಹಾಗೂ ಅಭಿಮಾನ.

"ಕಂಡಕ್ಟ್ರೇ! ಟಿಕೇಟ್ ಕೊಟ್ಟ ಬಿಡ್ರಿ ಪಾಪ ಅವಳಿಗೆ. ಮತ್ತೆ ನಾಳೆ ನಿಮಗೆ ಅವಳ ಮಮ್ಮಿಯಿಂದ ಬೈಸಿಕೊಳ್ಳುವ ಪ್ರಸಂಗ ಬಂದೀತು" ಎಂದು 'ಅಂಕಲ್' ಎಂದು ಸಂಬೋಧಿಸಲ್ಪಟ್ಟ ನಾನು ವಿನಂತಿಸಿದೆ.

ಕಂಡಕ್ಟರ್, ನಸುನಗುತ್ತ, "ಭಪ್ಪರೆ ಹುಡುಗಿ, ಭೇಶ್ ಅದೀ ನೋಡ್" ಎಂದು ಅನ್ನುತ್ತ ಆ ಮಗುವಿನ ಕೈಯಲ್ಲಿ ಟಿಕೇಟ್ ಇತ್ತ. ಹತ್ತು ಪೈಸೆಯ ನಾಣ್ಯ ಕೊಟ್ಟು, ಮಗು ಕೆಳಗಿಳಿದು, ಪ್ರಾರ್ಥನೆಯ ಗಂಟೆ ಆಗುತ್ತಿದ್ದಂತೆ ಸ್ಕೂಲ್ ಗೇಟಿನಲ್ಲಿ ಓಡಿ ಹೋಯಿತು, ತನ್ನ ಭಾರವಾದ ಬ್ಯಾಗ್ ಹೊತ್ತುಕೊಂಡು.

- ಎಸ್. ಕೆ. ಜೋಶಿ

# ಮೂರು ಎಚ್ಚರಿಕೆಗಳು

ಮೂಲ: ಜಾರ್ಜ್ ನೋರ್                    ಕನ್ನಡಕ್ಕೆ: ಎಚ್. ಎಸ್. ಶ್ರೀಪಾದ ಭಟ್

ಮೇಲೆ ಅಚ್ಚ ನೀಲಿ ಬಣ್ಣದ ಶುಭ್ರ ಆಕಾಶ. ಕೆಳಗೆ ಬೆಳಗಿನ ದಟ್ಟ ಇಬ್ಬನಿಯ ಮುಸುಕು ಬೆಳಕಿನಲ್ಲಿ ಒಬ್ಬ ಯುವಕ ದುರ್ಗಮ ಬೆಟ್ಟಗಳ ಕಡೆಗೆ ಹೆಜ್ಜೆ ಹಾಕುತ್ತಿದ್ದ. ಅವನ ಹೃದಯ ಬಡಿತ ಮಿತಿ ತಪ್ಪಿತ್ತು. ಮೈ ನವಿರಾಗಿ ಜುಮ್ಮೆನ್ನುತ್ತಿತ್ತು. ಹಣೆಯಲ್ಲಿ ಬೆವರು ಸಾಲುಗಟ್ಟಿತ್ತು. ಒಂದಿಷ್ಟೂ ಬಿಡುವ ಸೋಂಕಿಲ್ಲದೆ, ಸಮತಟ್ಟಾದ ಪ್ರದೇಶದಲ್ಲಿ ನಾಲ್ಕು ಘಂಟೆಗಳು ನಡೆದು, ಅವನು ಒಂದು ಭಯಾನಕ ಕಾಡಿನ ಬುಡಕ್ಕೆ ಬಂದು ನಿಂತ; ಅಷ್ಟರಲ್ಲಿ ಒಮ್ಮೆಲೇ ಗಂಭೀರವಾದ ಧ್ವನಿಯೊಂದು ಒಂದು ಮಾರಿನ ಅಂತರದಲ್ಲಿ ಕೇಳಿಬಂತು.

“ಈ ಕಾಡಿನ ಒಳಗೆ ಹೋಗಬೇಡ ಯುವಕಾ! ಉದ್ಧಟತನದಿಂದ ವರ್ತಿಸಿದರೆ ಸಾಯುವಿ; ಎಚ್ಚರಿಕೆ!”

ಯುವಕ ಒಮ್ಮೆಲೇ ಆಶ್ಚರ್ಯಭರಿತನಾಗಿ ಬೆಚ್ಚಿ. ಸುತ್ತಲೂ ಒಮ್ಮೆ ಸೂಕ್ಷ್ಮವಾಗಿ ದಿಟ್ಟಿಸಿ ಯಾರೂ ನರಮನುಷ್ಯರಿಲ್ಲವೆಂದು ಖಾತ್ರಿ ಮಾಡಿಕೊಂಡ. ‘ಹಾಗಾದರೆ ಧ್ವನಿ ಯಾರದು?’ ಇಂಥ ಕಾಡುಗಳಲ್ಲಿ ಧರ್ಮದೇವತೆಗಳು ನೆಲಸಿರುತ್ತಾರೆಂದು ಅವನು ಕಿವಿಯಿಂದ ಕೇಳಿದ್ದ. ಹಾಗಾದರೆ ಆ ದೇವತೆಯೇ ಇರಬಹುದೇ? ಆದರೂ ಅವನ ಸಾಂದರ್ಭಿಕ ಧೈರ್ಯ, ನಿರ್ಭಿಡೆಗಳು ಆ ಕರೆಯಿಂದ ಬೆಚ್ಚಿಬೀಳದಂತೆ ಮಾಡಿತು. ಬದಲು ನಡಿಗೆಯ ವೇಗವನ್ನು ಸ್ಥಗಿತಗೊಳಿಸಿದನಷ್ಟೇ. ಜಾಗರೂಕನಾಗಿ ಗುರಿಯತ್ತ ಸಾಗುತ್ತಿರುವ ಅವನ ಭಂಗಿಯು, ಎಚ್ಚರಿಕೆ ನೀಡಿದ ಕಾಣದ ಶತ್ರುವನ್ನು ಧೈರ್ಯದಿಂದ ಎದುರಿಸುವಂತಿತ್ತು. ನಿರೀಕ್ಷೆಯಂತೆ ಅವನು ಯಾರನ್ನೂ ಎದುರಿಸಲಿಲ್ಲ. ಮುಂದೆ ಯಾವ ಸಂಶಯಾಸ್ಪದ ಧ್ವನಿಯನ್ನೂ ಕೇಳಲಿಲ್ಲ. ಬದಲಾಗಿ ಗಗನಚುಂಬಿತ ವೃಕ್ಷಗಳ ಉದ್ದುದ್ದ ನೆರಳುಗಳ ಸ್ವಾಗತ ದೊರೆಯಿತು. ಒಂದು ದೊಡ್ಡ ನೆರಳಿನಲ್ಲಿ ಸ್ವಲ್ಪ ಹೊತ್ತು ನಿಂತು ಸುತ್ತಲೂ ವೀಕ್ಷಿಸಿದ. ಅವನ ಹದ್ದಿನ ದೃಷ್ಟಿ ಒಂದು ವಿಶಾಲವಾದ ಹುಲ್ಲು ಮಾಳವನ್ನು ದಾಟಿ ಇದ್ದ ಬೆಟ್ಟಗಳ ಕಡೆಗೆ ಹೋಯಿತು. ಅವುಗಳಲ್ಲಿ ಬಟ್ಟಬೋಳಾದ ಒಂದು ಶಿಖರ ತನ್ನ ತಲೆಯನ್ನು ಮೇಲೆ ಚಾಚಿ ನಿಂತಿತ್ತು. ಇದನ್ನು ತಲುಪುವುದೇ ಅವನ ಗುರಿಯಾಗಿತ್ತು.



ತದೇಕಚಿತ್ತನಾಗಿ ವೀಕ್ಷಿಸುತ್ತಿದ್ದ ಯುವಕ ಮತ್ತೊಮ್ಮೆ ಧ್ವನಿ ಕೇಳಿ ಭಾವಸಮಾಧಿಯಿಂದ ಎಚ್ಚೆತ್ತ. ಈ ಸಾರಿ ಕೇಳಿಸಿದ ಧ್ವನಿ ಹಿಂದಿನಕ್ಕಿಂತ ಗಂಭೀರವಾಗಿ, ಭಯ ಹುಟ್ಟಿಸುವಂತಿತ್ತು.

"ಆ ಹುಲ್ಲುಮಾಳದ ಒಳಗೆ ಕಾಲಿಡಬೇಡ ಯುವಕಾ! ಉದ್ಧಟತನ ಮಾಡಿದರೆ ಮರಳಿ ನೀನು ಜನ್ಮಭೂಮಿ ತಲುಪುವುದಿಲ್ಲ, ಎಚ್ಚರಿಕೆ!"

ಈ ಧ್ವನಿಗೆ ಯುವಕ ಗಮನ ಕೊಟ್ಟಂತೆ ಕಂಡಿತು. ಆದರೆ ಧೈರ್ಯಗುಂದಲಿಲ್ಲ. ಮೊದಲು ಕಾಡಿನಲ್ಲಿ ಹೆಜ್ಜೆ ಇಡುವಾಗ ಇದೇ ಧ್ವನಿ ಎಚ್ಚರಿಸಿತ್ತು. ಈಗ ಹುಲ್ಲುಮಾಳದಲ್ಲಿ ಕಾಲಿಡುವಾಗ... ಕಾಣದ ಶತ್ರುವಿನ ವ್ಯರ್ಥ ಪ್ರಲಾಪವನ್ನು ಕೇಳಿ ಯುವಕನಿಗೆ ನಗೆ ಬಂತು. ಅವನ ಮಟ್ಟಿಗೆ ಇದು ಕಾಡು ಹರಟೆಯೇ. ಆದರೂ ಆ ಧ್ವನಿಯ ಹಿನ್ನೆಲೆಯನ್ನು ಅರಿಯಲು ಯತ್ನಿಸಿದ. ಯಾವುದೋ ನಿಗೂಢವಾದವನ್ನು ಬಚ್ಚಿಟ್ಟುಕೊಂಡಂತೆ ಕೇಳಿಸುವ ಆ ಧ್ವನಿ ದೇವತೆಯದೇ ಇರಬಹುದೇ?

ಸಂಜೆಯ ಆಗಸದಿಂದ ಇಳಿಯುತ್ತಿದ್ದ ದಟ್ಟ ಮಂಜು ಹನಿಗಳು ಅವನನ್ನು ಒಂದು ದೊಡ್ಡ ಕಲ್ಲು ಬಂಡೆಯ ಮರೆಯಲ್ಲಿ ನಿಲ್ಲುವಂತೆ ಮಾಡಿತು. ನುಣುಪಾದ ಕಲ್ಲಿನ ಮೇಲೆ ಒಂದು ಹೆಜ್ಜೆ ಇಡುವಷ್ಟರಲ್ಲಿಯೇ ಧ್ವನಿ ಮೂರನೆಯ ಬಾರಿ ಎಚ್ಚರಿಸಿತು. ಈ ಬಾರಿಯೂ ಒಂದು ಮಾರಿನ ಅಂತರದಲ್ಲಿ, ಗಂಭೀರವಾಗಿ, ಹಿಂದಿನಕ್ಕಿಂತ ಕಠೋರವಾಗಿ ಕೇಳಿಸಿತು.

"ನಿಲ್ಲು ! ಮುಂದೆ ಅಡಿ ಇಡಬೇಡ! ಇಲ್ಲದಿದ್ದರೆ ಖಂಡಿತ ಸಾಯುವಿ!"

ಈ ಬಾರಿ ಯುವಕ ಗಟ್ಟಿಯಾಗಿ ನಗತೊಡಗಿದ, ಧೈರ್ಯಗುಂದದೆ ನಡಿಗೆ ಮುಂದುವರಿಸುತ್ತಾ. ಗುರಿಯು ಸಮೀಪವಾಗುತ್ತಿದ್ದಂತೆ ಅವನ ಎದೆ ಬಲೂನಿನಂತೆ ಉಬ್ಬತೊಡಗಿತು. ಮರಣ ಸನ್ನಿಹಿತವಾದ ವೀರಯೋಧನ ದೇಹ ಮಿಂಚುವಂತೆ ಯುವಕ ನಖಶಿಖಾಂತ ಮಿಂಚುತ್ತಿದ್ದ.

"ನಾನು ಇಲ್ಲಿದ್ದೇನೆ; ಓ ಒಳ್ಳೆಯ ಇಲ್ಲವೇ ದುಷ್ಟ ದೇವತೆಯೇ. ಇದೂ ಒಂದು ಸತ್ವಪರೀಕ್ಷೆಯಾದರೆ ಖಂಡಿತ ನಾನು ಗೆಲ್ಲುವೆ. ನನ್ನ ಮನಸ್ಸಾಕ್ಷಿಯ ಮುಂದೆ ನಿನ್ನ ಮರಣದ ಆಟ ನಡೆಯಲಾರದು. ನಾನಿನ್ನೂ ಬದುಕಿದ್ದೇನೆ ಮತ್ತು ಬದು

ಕುತ್ತೇನೆ. ಜನ್ಮಭೂಮಿಯನ್ನೂ ತಲುಪುತ್ತೇನೆ. ನೀನು ಯಾರಾದರೂ ಆಗಿರು! ನಾನು ನಿನಗಿಂತ ಗಟ್ಟಿಗನಾಗಿದ್ದೇನೆ. ಮೂಲತಃ ಹೇಳುವುದಾದರೆ ನಾನು ನಿನ್ನನ್ನು ಲೆಕ್ಕಕ್ಕೆ ತೆಗೆದುಕೊಳ್ಳುವುದಿಲ್ಲ! ತಿಳಿಯಿತೆ?"

ವಿಜಯೋನ್ಮತ್ತನಂತೆ ಕೂಗಿದ ಯುವಕ.

ಬೆಟ್ಟಗಳ ಕಡೆಯಿಂದ ಗುಡಗಿನಂತೆ ಧ್ವನಿ ಕೇಳ ತೊಡಗಿತು.

"ಯುವಕಾ. ನೀನು ಪಾಪಿಯಾದೆ." ಧ್ವನಿಯ ಕ್ಲಿಷ್ಟ ಕರ್ಕಶತೆ–ಅಧಿಕಾರವಾಣಿ ನಡೆಯುತ್ತಿದ್ದ ಯುವಕನನ್ನು ಮತ್ತೂ ಕ್ರೂರನನ್ನಾಗಿಸಿತು. ಅಬ್ಬಾ, ಅವನ ಧೈರ್ಯವೇ! ಕಲ್ಲುಬಂಡೆಯ ತುದಿಯಲ್ಲಿ ಸೆಟೆದು ನಿಂತು ತುಟಿಗಳನ್ನು ವಕ್ರವಾಗಿ ತಿರುಗಿಸುತ್ತ, ವ್ಯಂಗ್ಯವಾಗಿ ಕಿರುಚಿದ:

"ನಿನ್ನ ಮಾತೇ ನನಗೆ ಅರ್ಥವಾಗುತ್ತಿಲ್ಲ."

"ನಿನ್ನ ಅಜಾಗರೂಕತೆಯ ಹೆಜ್ಜೆ ತಿಳಿಯಾದ ವಾತಾವರಣವನ್ನು ಬಿಸಿಮಾಡಿತು " ಹಿಂದಿನಂತೆಯೇ ಗುಡುಗಿನ ಧ್ವನಿ.

ಯುವಕ ಉತ್ತರಿಸಿದ, ಹೊಸ ಧಾಟಿಯಲ್ಲಿ: "ಹೀಗೋ! ನನ್ನೊಂದಿಗೆ ಸಂಭಾಷಿಸಿದ ದೇವತೆ ಒಳ್ಳೆಯ ಅಥವಾ ಕೆಟ್ಟದ್ದಂತೂ ಆಗಿರಬಹುದೆಂದು ಭಾವಿಸಿದ್ದೆ. ಆದರೆ ಈಗ ತಿಳಿಯಿತು. ನೀನೊಂದು ಹುಚ್ಚು ದೇವತೆಯೆಂದು. ಈ ರೀತಿಯ ನಶ್ವರ ಪ್ರಾಣಿ ನನ್ನ ದಾರಿಯಲ್ಲಿ ಕಾಣಿಸಬಹುದೆಂದು ನಾನು ಊಹಿಸಿರಲೂ ಇಲ್ಲ.'

ಹರಡಿರುವ ಮುಂದ ಬೆಳಕಿನಲ್ಲಿ ಮತ್ತೆ ಆ ಧ್ವನಿ ಮೊಳಗಿತು:

"ಹಾಗಾದರೆ ನೀನು…ನೀನು ಈ ದಿನ ಬೆಳಿಗ್ಗೆಯಷ್ಟೇ ಹೃದಯಕ್ರಿಯೆ ನಿಂತ (ಇದೇ ಜಾಗದಲ್ಲೆ) ಯುವಕನಂತಲ್ಲ! ಪ್ರಪಂಚದ ಛಂದೋಬದ್ಧ ಕ್ರಿಯೆಗಳ ಸೀಮೆಯನ್ನು ದಾಟಲಶಕ್ಯನಾದ ಆ ಯುವಕನಿಗಿಂತ ನೀನು ಭಿನ್ನವಾಗಿರುವೆ! ಇಹಪರಗಳ ಸುಖದುಃಖ, ನೋವು–ನಲಿವುಗಳ ಬಿಸಿಯೂ ಸೋಂಕದಷ್ಟು ಸತ್ತುಹೋಗಿದೆಯೇ ನಿನ್ನ ಆತ್ಮ?"

"ಹಾಗೆಂದು ಅರ್ಥೈಸಿಕೊಳ್ಳುವೆಯಾ?" ಯುವಕ ಉತ್ತರಿಸಿದ ಹಣೆಯನ್ನು ನೆರಿಗೆಗೊಳಿಸುತ್ತಾ. "ಎಣಿಸಲಾರದಷ್ಟು ಅನಂತ ಚಿಕ್ಕ ಚಿಕ್ಕ ಮುಗ್ಧ ಜೀವಿಗಳ ವಿನಾಶಕ್ಕೆ ನಾಂದಿ ಹಾಡಿದ–ಇಂದಿಗೂ ಹಾಡುತ್ತಿರುವ ಅನೀತಿಯುತ ದುಷ್ಟಪ್ರವೃತ್ತಿಯ ನಶ್ವರ ಪ್ರಾಣಿಗಳಿಗಿಂತ ನೂರು–ಸಾವಿರ ಪಾಲು ಕಳಂಕಿಯೇ ನಾನು, ಈ ಜೀವಿತದಲ್ಲಿ?"

"ಈ ವಿಚಾರವಾಗಿಯೇ ನಿನಗೆ ಎಚ್ಚರಿಕೆ ಕೊಟ್ಟಿರುವುದು; ಮೂಢಾ! ಅನಂತಕಾಲದ ಆಗುಹೋಗುಗಳ ಈ ಸ್ಥಿತಿಗತಿಯಲ್ಲಿ ಈ ಮೊದಲೇ ನಿನಗೆ ನಿಯಮಿಸಲ್ಪಟ್ಟಿರುವ ಎಚ್ಚರಿಕೆಯ ಉದ್ದೇಶ ನಿನಗೆ ತಿಳಿಯಲಿಲ್ಲವೇ?"

"ಅದು ನನಗೆ ಗೊತ್ತಿರಲಿ, ಗೊತ್ತಿಲ್ಲದಿರಲಿ; ಆದರೆ ನೀನು ನಮ್ರನಾಗಿ ಒಂದನ್ನು ಒಪ್ಪಿಕೊಳ್ಳಲೇಬೇಕು. ಅದು–ಈ ಕಾಡಿನ ಅಲೆದಾಟವಲ್ಲಿ ಅಸಂದಿಗ್ಧವಾಗಿ ಸಂಭವಿಸುವ ಎಷ್ಟೋ ಮರಣಗಳಲ್ಲಿ ಒಂದು ನನ್ನ ಅನುಭವಕ್ಕೆ ಬರುವುದನ್ನು ತಡೆಯುವುದು ನಿನ್ನ ಇಚ್ಛೆಯಾಗಿತ್ತಲ್ಲವೇ? ಅದಿರಲಿ; ನನ್ನ ಜನ್ಮ–ಭೂಮಿಗೆ ಅವಶೇಷಗಳನ್ನು ಹೇಗೆ ಒಯ್ಯಬೇಕೆಂಬುದು ಕಲ್ಪಿಸಿಕೊಂಡಿರುವೆ. ಆದ್ದರಿಂದ ಮುಂದುವರೆಯಲು ತುಂಬಾ ಉತ್ಸುಕನಾಗಿರುವೆ."

"ಅವಶೇಷಗಳು! ಉದ್ವೇಗಗೊಳ್ಳಬೇಡ! ಹೊಳೆಯುವ ಬಣ್ಣದ ಅದ್ಭುತ ಚಿಟ್ಟೆಯೊಂದನ್ನು ನೀನು ನೋಡುತ್ತೀಯೆ! ನಿನ್ನ ಬಲಕ್ಕೆ ಅದು ಉದಿಸಿದೆ ನೋಡು,"

"ಚಿಟ್ಟೆಗಳು! ನಾನು ನೋಡಿದ ಅನೇಕಾನೇಕ ಅತ್ಯದ್ಭುತ ಚಿಟ್ಟೆಗಳಲ್ಲಿ ನೀನು ಸೂಚಿಸುವುದು ಒಂದಾಗಿರಬಹುದು."

"ನೀನು ನೋಡಿದ ಎಲ್ಲ ಚಿಟ್ಟೆಗಳಿಗಿಂತ ಇದು ತೀರ ಭಿನ್ನವಾದುದು, ನಾನು ಹೇಳಿದ ಚಿಟ್ಟೆ ಪೂರ್ವಕ್ಕೆ ಹಾರಿದುದು–ಅಗಲವಾಗಿ ದೂರದೂರಕ್ಕೆ ಹಾರುತ್ತ ಅದು 'ರಾಜವನ'ದ ಬಂಗಾರದ ಬೇಲಿಯ ಮೇಲೆಯೂ ಹಾರುವುದು. ಆ ಚಿಟ್ಟೆಯಿಂದ ಒಂದು ಕಂಬಳಿ ಹುಳು ಹುಟ್ಟಿ ಸರಿಯಾಗಿ ಮುಂದಿನ ವರ್ಷ ಬಿಸಿಬೇಸಿಗೆಯ ಒಂದು ಮಧ್ಯಾಹ್ನ, ಯುವರಾಣಿಯ ಬಿಳೀ ಕುತ್ತಿಗೆಯ ಮೇಲೆ ಹರಿದಾಡಿ, ಸುಖನಿದ್ರೆಯಲ್ಲಿರುವ ಅವಳನ್ನು ಹಠಾತ್ತಾಗಿ ಎಬ್ಬಿಸುವುದರಿಂದ ಅವಳ ಹೃದಯ ತಲ್ಲಣಿಸಿ ತೂಗಾಡಿದಂತಾಗಿ. ಗರ್ಭಾಶಯದಲ್ಲಿರುವ ಪಿಂಡವು ಸೊರಗಿ ಸಾಯುತ್ತದೆ. ತರುವಾಯ ದೊರೆಯ ತಮ್ಮ ವಾರಸುದಾರ

ರಿಲ್ಲದ ಸಂಸ್ಥಾನವನ್ನು ವಶಪಡಿಸಿಕೊಂಡು, ಕ್ರೂರತನದಿಂದ ರಾಜ್ಯಭಾರ ಮಾಡಿ, ದುರಾಚಾರಿ ವ್ಯಭಿಚಾರಿಯಾಗುತ್ತಾನೆ. ಅವನ ದುರಾಡಳಿತದಿಂದ ಪ್ರಜೆಗಳು ಭಯಭ್ರಾಂತರಾಗಿ, ದಿಕ್ಕೆಡುತ್ತಾರೆ. ಕೊನೆಯಲ್ಲಿ ಸ್ವರಕ್ಷಣೆಗಾಗಿ ಅವನು ಇಡೀ ದೇಶವನ್ನೇ ಒಂದು ಮಹಾಯುದ್ಧದಲ್ಲಿ ಮುಳುಗಿಸುತ್ತಾನೆ. ಆಗ ನಿನ್ನ ಪ್ರೀತಿಯ ಜನ್ಮಭೂಮಿಗೆ ನಿನ್ನನ್ನು ಅವಶೇಷವಾಗಿ ಒಯ್ಯಲಾಗುತ್ತದೆ. ಇಡೀ ದೇಶದಲ್ಲಿ ನೀನೊಬ್ಬನೇ ಇವನ್ನೆಲ್ಲ ಪ್ರತಿಭಟಿಸಲು ಉಳಿಯುತ್ತೀಯೇ. ಆಗ ಉದ್ವೇಗದಿಂದ ಉಂಟಾದ ನಿನ್ನ ಉಸಿರಾಟದ ರಭಸದ ತೀವ್ರತೆಯಿಂದಾಗಿ ಆ ಬಣ್ಣದ ಚಿಟ್ಟೆಯು ಪೂರ್ವದಿಕ್ಕಿಗೆ ತಿರುಗಿ ಹುಲ್ಲುಮಾಳದ ಮೂಲಕವಾಗಿ ರಾಜವನದ ಹೊಂಬಣ್ಣದ ಬೇಲಿ ಸಿಗುವವರೆಗೆ ಹಾರುತ್ತದೆ..."

"ಹೇಗೆ? ಓ ಕಾಣದ ದೇವತೆಯೇ? ಇದನ್ನೆಲ್ಲ ಒಪ್ಪಲು ನಾನು ನಿರಾಕರಿಸುತ್ತೇನೆ. ನಿನ್ನ ಭವಿಷ್ಯವಾಣಿ ನಿಜವಾಗುತ್ತದೆಂದಿಟ್ಟುಕೊಳ್ಳೋಣ, ಒಂದರ ಹಿಂದೊಂದು ಘಟನೆಗಳು ಜರುಗುವ ಈ ಭೂಮಿಯ ಮೇಲೆ ಅತಿ ಕ್ಷುಲ್ಲಕ ವಸ್ತುಗಳಿಂದ ಅತಿ ಭಯಂಕರವಾದವುಗಳು ಘಟಿಸಲು ಕಾರಣವಾದರೆ, ಭಯಂಕರ ವಸ್ತುಗಳಿಂದಲೇ ಅತೀ ಕ್ಷುಲ್ಲಕವಾದವುಗಳೂ ಘಟಿಸುವುದೆಂಬ ಕಟು ಸತ್ಯವನ್ನು ಮರೆಯಬೇಡ! ಮುಂದಡಿಯಿಟ್ಟರೆ ಸಾವೆಂಬ ಅಪ್ರಿಯ ಸತ್ಯದ ಕಟು ಭವಿಷ್ಯವಾಣಿಯೇ ನನ್ನನ್ನು ಕಾಡುತ್ತಿರುವಾಗ ನಿನ್ನ ಭವಿಷ್ಯ ಪುರಾಣವನ್ನು ಆಲಿಸುವ ತಾಳ್ಮೆಯೆಲ್ಲಿಯದು ನನಗೆ?" ಯುವಕ ಭುಜ ಹಾರಿಸಿದ.

"ತಪ್ಪಿ ಹೆಜ್ಜೆ ಇಟ್ಟರೆ – ಮತ್ತೆ ಮನುಷ್ಯತ್ವವನ್ನು ಪಡೆಯಬಯಸುವುದಾದರೆ – ಪಶ್ಚಾತ್ತಾಪಗೊಂಡು ಹಿಂದಡಿಯಿಡಲೇ ಬೇಕು. ಇದನ್ನು ವಿಚಾರಮಾಡು!"

ತಟ್ಟನೆ ನಿಂತ ಯುವಕ. ಒಂದು ಕ್ಷಣ ನಿಂತ ಅವನ ಭಂಗಿ ಹಿಂದಡಿಯಿಡುವನೋ ಎನ್ನುವಂತಿತ್ತು. ಸುತ್ತಲೂ ಭೇದಿಸಲಾರದಂತೆ ಆವರಿಸಿದ ಕತ್ತಲಿನ ಭೀಕರತೆಗೆ ಒಮ್ಮೆ ಬೆದರುವಂತೆ ಕಂಡ. ಇದರಿಂದ ಪಾರಾಗಲು ಸೂರ್ಯ–ಪ್ರಕಾಶವೊಂದೇ ದಾರಿ. ನಾಳೆಗೆ ತನ್ನಿಂದಾಗ–ಬಹುದಾದುದೆಷ್ಟೋ ಇದೆ ಎನ್ನುವ ಸಮಯಪ್ರಜ್ಞೆ ಅವನನ್ನು ಮತ್ತೆ ಬಂಡೆಯ ತುದಿಗೆ ತಂದು, ಚಪ್ಪಟೆಯ ಜಾಗದಲ್ಲಿ ಉದ್ದನಾಗಿ ಮಲಗಿಸಿತು. ಇಂಥ ಸಂದರ್ಭಗಳಲ್ಲಿ ಅವನ ಶಕ್ತಿಯನ್ನು ಪುನಶ್ಚೇತನಗೊಳಿಸುವ ಸಾಮರ್ಥ್ಯ ನಿದ್ರಾದೇವಿಗೆ ಮಾತ್ರ ಶಕ್ಯವಿತ್ತು. ಅಚಲನಾಗಿ ಮಲಗಿದ ಅವನನ್ನು ಯೋಚನೆಗಳ ಜಾಡು ಕಣ್ಣು ಮುಚ್ಚದಂತೆ ಮಾಡಿತು. ಯೋಚಿಸಿದಂತೆಲ್ಲಾ ಏಕೋ ಅವನ ಹೃದಯ ಮತ್ತು ನಾಡಿಯ ಬಡಿತ ತೀವ್ರವಾಗಿ ನಖಶಿಖಾಂತ ಸಣ್ಣಗೆ ನಡುಗತೊಡಗಿದ. ತಲೆ ತಿರುಗಿಸುವಂಥ ಪ್ರಪಾತ ಅವನ ಕಣ್ಣೆದುರಿಗೇ ಇದೆ. ಈಗ ಸರಿಯಾದ ದಾರಿ ಅದೊಂದೇ. ಈ ವರೆಗೂ ಅದರದೇ ಅಚಲ ನಿರ್ಧಾರ ಹೊಂದಿದ್ದ ಅವನ ಆತ್ಮ ಈಗ ಕ್ಷಣಗಳುರುಳಿದಂತೆ ಅವನ ನಿರ್ಧಾರವನ್ನು ಸಡಿಲಗೊಳಿಸುತ್ತಿತ್ತು. ಅವನ ದೀರ್ಘ ಬದುಕಿನಲ್ಲಿ ಇದುವರೆಗೂ ಹೊಕ್ಕಿರದ ಒಂದು ಆಳವಾದ, ಅತೀವವಾದ ಪ್ರಾಣಸಂಕಟದ ಅನುಭವ ಇದಾಗಿ, ಮುಂದೊಂದು ಕ್ಷಣವೂ ಕಳೆಯುವುದು ಅವನಿಗೆ ದುಸ್ಸಾಧ್ಯವಾಯಿತು. ಈ ಅನಿ–ಶ್ಚಿತತೆಯ ತೊಳಲಾಟದ ಕಾಟಕ್ಕಿಂತ ಮುಂದಾಗಬಹುದಾದುದನ್ನು – ಅದು ಎಷ್ಟೇ ಭೀಕರವಾಗಿರಲಿ–ಎದುರಿಸಲು ಅವನ ಮನ ನಿರ್ಧರಿಸಿತು. ತಕ್ಷಣ ಎದ್ದ. ಭೀಕರ ಕತ್ತಲೆಯಲ್ಲಿ ಅಪಾಯದ ಹಾದಿಯನ್ನು ತುಳಿಯಲು ತಪ್ಪು ಹೆಜ್ಜೆಯನ್ನಿಡುತ್ತಾ ಸಾಗಿದ. ಭವಿಷ್ಯ ನಿರ್ಧಾರವಾಗುತ್ತಿದ್ದಂತೆ ಕಾರ್ಯಗತವಾಗಲೂ ಬೇಕಾಗಿತ್ತು. ಆದ್ದರಿಂದ ಕಾಲವ್ಯಯ ಮಾಡಲಿಲ್ಲ.

"ಓ ಕಾಣದ ದೇವತೆಯೇ, ಮೂರು ಬಾರಿ ಎಚ್ಚರಿಕೆ ನೀಡಿದ ನೀನು, ಅವನ್ನು ಒಪ್ಪಿಕೊಳ್ಳಲು ತಿರಸ್ಕರಿಸಿದ ನಾನು, ಇಬ್ಬರ ಮಧ್ಯೆ, ನಾನು ಬಾಗಬಲ್ಲಂಥ ನನಗಿಂತ ಬಲಶಾಲಿ ಈಗ ಯಾರಿದ್ದಾರೆ ಹೇಳು? ನನ್ನನ್ನು ನಾಶಮಾಡಿದ ನೀನು ಯಾರು?" ಕೋಪ – ದುಃಖ ಮಿಶ್ರಿತ ಧ್ವನಿಯಲ್ಲಿ ಅವನು ಕೂಗಿದ.

ಉತ್ತರವಾಗಿ ಮತ್ತೆ ಉಸಿರು ಕಟ್ಟಿಸುವಂಥ ಧ್ವನಿ ಕೈಮಾರಿನ ಅಂತರದಲ್ಲಿ ಗುಡುಗುಡಿಸಿತು.

"ಇದುವರೆಗೂ ಯಾವ ನಶ್ವರ ಪ್ರಾಣಿಗೂ ನಾನು ಗೋಚರಿಸಿಕೊಳ್ಳಲಿಲ್ಲ. ನನ್ನನ್ನು ಬಹಳ

ಹೆಸರುಗಳಿಂದ ಕರೆಯುತ್ತಾರೆ. ಶಾಸ್ತ್ರವೇತ್ತರು 'ಭವಿಷ್ಯ'ವೆಂದೂ ಮೂರ್ಖರು 'ಅದೃಷ್ಟ' ವೆಂದೂ ಧಾರ್ಮಿಕರು 'ದೇವರು' ಎಂದೂ ಕರೆಯುತ್ತಾರೆ. ಯಾರ್‍ಯಾರು ನನ್ನನ್ನು ಹೇಗೆ ಕರೆಯುತ್ತಾರೊ, ಹೇಗೆ ನಂಬುತ್ತಾರೊ ಅದರಂತೆ ನಾನು ಇರುತ್ತೇನೆ. ಪ್ರಾರಂಭದಿಂದ ಅನಂತ ಕಾಲದ ವರೆಗೂ – ಅವರವರ ಭಾವಕ್ಕೆ ಅವರವರ ಭಕುತಿಗೆ – ಎಂಬಂತೆ ಕಾಣಿಸಿಕೊಳ್ಳುತ್ತೇನೆ."

ಯುವಕ ಗರ್ಜಿಸಿದ ಸತ್ತ ಹೃದಯದಿಂದ ಧ್ವನಿ ಹೊರಟಿತಿತ್ತು.

"ಹಾಗಾದರೆ ಇದೋ ನನ್ನ ಪ್ರತಿಜ್ಞೆ – ಪ್ರಾರಂಭಗೊಂಡು ಅಂತ್ಯದವರೆಗೆ ಶಾಶ್ವತವಾಗಿ ಪ್ರಜ್ವಲಿಸುವ ನಿನ್ನ ಪ್ರಭಾವಲಯದೊಳಗೆ ನನ್ನ ಭವಿಷ್ಯವಡಗಿದೆ ಎಂದಾದರೆ ಇದೋ – ನಾನು ಈ ಕಾಡಿನೊಳಗೆ ಅಡಿಯನ್ನಿಟ್ಟು ನನ್ನ ಸಾವಿಗೆ ನಾನೇ ಕಾರಣನಾಗುತ್ತೇನೆ. ಈ ಹುಲ್ಲು ಮಾಳವನ್ನು ದಾಟಿ ಜನ್ಮಭೂಮಿಗೆ ಅವಶೇಷವನ್ನು ತರುತ್ತೇನೆ. ಈ ಬಂಡೆಯ ತುದಿಯಲ್ಲಿ ನನ್ನ ಸಾವನ್ನು ಹುಡುಕಿಕೊಳ್ಳುತ್ತೇನೆ. ಈ ಎಲ್ಲವೂ ನಿನ್ನ ಎಚ್ಚರಿಕೆಗಳನ್ನು ಧಿಕ್ಕರಿಸುತ್ತದೆ. ನಿನ್ನ ಸಕಾಲಿಕ ಎಚ್ಚರಿಕೆಗಳು ಸಹಾಯಕ್ಕೆ ಬದಲು ನನ್ನ ನಾಶಕ್ಕೆ ನಾಂದಿ ಹಾಡಿತೇಕೆ? ಮತ್ತು ಹೋ! ವ್ಯಂಗ್ಯಗಳ ಸರಮಾಲೆ! ಈ ನನ್ನ ಕೊನೆಯ ಕ್ಷಣದಲ್ಲಿ ನಿತ್ರಾಣದ ಪ್ರಶ್ನೆಗಳನ್ನು ಹಾಕಿ ನಾನೇಕೆ ಮಗುವಿನಂತೆ ಅಳಬಾರದು?"

ಭಯಂಕರವಾದ ಕಡಾಕಡಿಯ ಉತ್ತರವೊಂದು ಯುವಕನಿಗೆ ಕೊಡಲ್ಪಟ್ಟಿತು. ಅದು ಉಚ್ಚ ಘಂಟಾನಾದವಂತೆ, ವಿಕಟಾಟ್ಟಹಾಸದ ರೂಪದಲ್ಲಿ ದಿಗಂತದ ಎಲ್ಲೆ ಮೀರಿ ಪ್ರತಿಧ್ವನಿಸಿತು. ಅದರ ಅರ್ಥವನ್ನು ಹುಡುಕುವುದರಲ್ಲೇ ಯುವಕನ ಪಾದಗಳ ತಳಭಾಗ ಅದುರಿದಂತಾಗಿ, ಕುಸಿಯಿತು. ತಳವೇ ಇಲ್ಲದ ಪ್ರಪಾತಕ್ಕಿಂತಲೂ ಆಳದ ಕಂದಕದಲ್ಲಿ ಬಿದ್ದು, ಪ್ರಪಂಚದಲ್ಲಿ ಶಾಶ್ವತವಾಗಿ ಉಳಿಯುವ ಕತ್ತಲ ರಾಶಿಯಲ್ಲಿ ಕರಗಿಹೋದನಾತ. ✡

---

## ಬ್ಯಾಂಕಿನ ಅನುಕೂಲತೆ

ಅಯಂಟ್ರಿಯ (ಇಂಗ್ಲಂಡು) ರಾಷ್ಟ್ರೀಯ ಹೆದ್ದಾರಿಯ ಮೇಲೆ ಒಂದು ವಾರದ ವರೆಗೆ ಒಂದು ಭಾರೀ ಮಹೋತ್ಸವ ನಡೆಯುವದಿದ್ದಿತು. ಉತ್ಸವ ಆರಂಭವಾಗುವ ಹಿಂದಿನದಿನವೇ ಒಬ್ಬ ಗೃಹಸ್ಥನು ತನ್ನ ಮೋಟಾರ್ ತೆಗೆದುಕೊಂಡು ಲಿವರ್‌ಪೂಲ್‌ನ ಒಂದು ಬ್ಯಾಂಕಿಗೆ ಹೋಗಿ ಅಲ್ಲಿಯ ಅಧಿಕಾರಿಗಳಿಗೆ ಹೇಳಿದನು: "ನನಗೆ ಒಂದು ವಾರದ ಮಟ್ಟಿಗೆ ನೂರು ಪೌಂಡುಗಳ ಸಾಲ ಬೇಕಾಗಿದೆ. ಅದಕ್ಕಾಗಿ ನನ್ನ ಕಾರನ್ನು ಬ್ಯಾಂಕಿಗೆ ಅಡವಿಡಲು ಸಿದ್ಧನಿದ್ದೇನೆ." ಅವನ ಕೋರಿಕೆಯ ಮೇರೆಗೆ ಬ್ಯಾಂಕು ಸಾಲ ನೀಡಿತು. ಒಂದು ವಾರದ ನಂತರ ಆ ಗೃಹಸ್ಥನು ನೂರು ಪೌಂಡುಗಳನ್ನು ತೆಗೆದುಕೊಂಡು ಬಂದನು. ಬ್ಯಾಂಕಿನ ಅಧಿಕಾರಿಯು ೨ ಶಿಲಿಂಗ್ ೪ ಪೆನ್ಸ್ ಬಡ್ಡಿ ಕೊಡಬೇಕೆಂದಾಗ ಸಂತೋಷದಿಂದ ಅಸಲು ಹಾಗೂ ಬಡ್ಡಿಯನ್ನು ತುಂಬಿದನು. ಅವನು ಬ್ಯಾಂಕಿನಿಂದ ತನ್ನ ಅಡವಿಟ್ಟ ಕಾರನ್ನು ತೆಗೆದುಕೊಂಡು ಹೊರಡುವಷ್ಟರಲ್ಲಿ ಬ್ಯಾಂಕಿನ ಅಧಿಕಾರಿಯು ಅವನ ಬಳಿಗೆ ಬಂದು, "ಕ್ಷಮಿಸಿರಿ, ಸಾಹೇಬರೇ, ನಿಮ್ಮನ್ನೊಂದು ಮಾತು ಕೇಳಬೇಕಾಗಿದೆ. ನೀವು ಸಿರಿವಂತರೆಂದು ಕಾಣುವಿರಿ, ಅಂದಮೇಲೆ ನಿಮಗೆ ಕೇವಲ ನೂರು ಪೌಂಡಿನಷ್ಟು ಸಾಲ ತೆಗೆದುಕೊಳ್ಳುವಂಥ ಪ್ರಸಂಗವೇನು ಬಂದಿತು?" ಎಂದು ಕೇಳಿದ.

"ನಿಜ, ನಿಜ," ಆ ಗೃಹಸ್ಥ ನಗುತ್ತ ಹೇಳಿದ. "ನನಗೆ ಹಾಗೆ ಸಾಲದ ಅಗತ್ಯವಿರಲೇ ಇಲ್ಲ. ನಾನು ಅಯಂಟ್ರಿಯ ಮಹೋತ್ಸವಕ್ಕಾಗಿ ಬಂದಿದ್ದೆನು. ಕೇವಲ ೨ ಶಿಲಿಂಗ್ಸ್ ೪ ಪೆನ್ಸ್‌ಗಳಲ್ಲಿ ನನ್ನ ಕಾರು ಇಷ್ಟು ಸುರಕ್ಷಿತವಾಗಿ ಬೇರೆ ತಾನೆ ಎಲ್ಲಿ ಇರಬಹುದಾಗಿತ್ತು ನೀವೆ ಹೇಳಿರಿ ನೋಡುವಾ." –ಸಂಜೀವ ಲಕ್ಷ್ಮೇಶ್ವರ

ನಾವೀನ್ಯಕ್ಕೆ ಹೆಸರಾದ ಅಪರೂಪ ವ್ಯಕ್ತಿ

# ಡೆನ್ಮಾರ್ಕಿನ ಕಳ್ಳ ಪೀಟರ್‌ಸನ್

ಎ. ರುಕ್ಮಿಣಿ ಉಡುಪ

ಮಕ್ಕಳು ಮನೆಯಲ್ಲಿ ತುಂಬಾ ತುಂಟ ಮಾಡುತ್ತಿದ್ದರೆ ತಂದೆ ತಾಯಿಗಳು ಅವರನ್ನು ಬಲವಂತದಿಂದ ಕೋರ್ಟಿಗೆ ದಾಖಲು ಮಾಡಿ ತಪ್ಪಿಗೆ ಶಿಕ್ಷೆ ಕೊಡಿಸುವುದಿಲ್ಲ. ಈ ದಿನ ಆಚೆಯ ಮನೆಯ ಪೇರಲ ಹಣ್ಣು ಮಾಯವಾಯಿತು; ನಿನ್ನೆ ಹಸುವಿನ ಹಾಲನ್ನೆಲ್ಲಾ ಯಾರೋ ಕುಡಿದು ಬಿಟ್ಟರು. ನಾಳೆ ಯಾರ ಮನೆಯ ತಿಂಡಿಗೊ ಕಾದಿದೆ ಶನಿ – ಹೀಗೆ ಮಕ್ಕಳು ಮಾಡುವ ದೂರೆಲ್ಲ ತಾಯಿ ತಂದೆಗಳಿಗೆ ಹಿತವೇ. ಅದನ್ನವರು ಕ್ಷಮಿಸಿ ಬಿಡುತ್ತಾರೆ. ಹಾಗೆ ಡೆನ್ಮಾರ್ಕಿನಲ್ಲಿ ಹ್ಯಾನ್ಸ್ ಪೀಟರ್‌ಸನ್ ಎಂಬ ಕಳ್ಳನನ್ನು ಪೋಲೀಸರು ಹಿಡಿಯದಿರುವುದಕ್ಕೂ ಒಂದು ಕಾರಣವಿತ್ತು. ಜನ ಕೂಡ ಕಳ್ಳನ ಕಾಟವನ್ನು ಸಹಿಸುತ್ತಿದ್ದರೇ ವಿನಾ ಅವನನ್ನು ಹಿಡಿಯಲು ಪ್ರಯತ್ನಿಸಿರಲಿಲ್ಲ.

೧೯೩೯ಕ್ಕೆ ಮುಂಚೆ ಡೆನ್ಮಾರ್ಕ್ ನಂದ–ಗೋಕುಲದಂತಿತ್ತು. ಅಲ್ಲಿನವರಿಗೆ ಗೋವೇ ಧನ. ಸಮುದ್ರದ ಸೆರಗಿನಲ್ಲಿಯೇ ಇರುವ ಡೆನ್ಮಾರ್ಕ್ ಹಸಿರುರಾಶಿಯಿಂದ ತುಂಬಿ ತುಳುಕುತ್ತಿದೆ. ಎಲ್ಲಿ ನೋಡಿದರೂ ಹಳ್ಳಿಗಳು. ಹಳ್ಳಿಯಲ್ಲಿ ಹಸುಗಳ ಹಿಂಡು. ಹಾಲು, ಬೆಣ್ಣೆ, ಮೊಸರು, ಗಿಣ್ಣ ಎಲ್ಲಾ ಅಲ್ಲಿಂದ ಯುರೋಪಿನ ಇತರ ರಾಷ್ಟ್ರಗಳಿಗೆ ರಫ್ತಾಗುತ್ತಿತ್ತು. ದನವನ್ನು ಸಾಕಿ ಜನ ಬಾಳುತ್ತಿದ್ದರು. ಅವರ ಸುಖಜೀವನದ ಮಧ್ಯೆ ಪೀಟರ್‌ಸನ್‌ನಂಥ ಪುಂಡರು ಒಬ್ಬಿಬ್ಬರು ಇದ್ದರೆ ಅವರಿಗೆ ಅವನಿಂದ ಬಾಧಕವಾಗಿರಲಾರದು. ಅವನ ಕಳುವಿನ ಕೌಶಲವನ್ನು ನೋಡಿ, ಪೇಪರುಗಳಲ್ಲಿ ಓದಿ ಅವರು ಖುಷಿಪಡುತ್ತಿದ್ದರಂತೆ. ಆದರೆ ಡೆನ್ಮಾರ್ಕಿನ ಜನ ಕಳ್ಳತನಕ್ಕೆ ಪ್ರೋತ್ಸಾಹ ಕೊಡುತ್ತಿದ್ದರೆಂದಲ್ಲ. ಕಳ್ಳತನದಲ್ಲಿ – ಅಂದರೆ ಪೀಟರ್‌ಸನ್ ಮಾಡುತ್ತಿದ್ದ ಕಳವಿನಲ್ಲಿ – ಒಂದು ನಾವೀನ್ಯವಿತ್ತು. ಅದನ್ನು ಜನ ತಿಳಿದುಕೊಂಡಿದ್ದರಿಂದ ಅವರು ಅವನನ್ನು ತೊಂದರೆಗೊಳಪಡಿಸುತ್ತಿರಲಿಲ್ಲ.

ಹ್ಯಾನ್ಸ್ ಪೀಟರ್‌ಸನ್ ಮುಟ್ಠಾಳನಲ್ಲ. ಅವನು ವಿದ್ಯಾವಂತನೂ ಕಲಾವಂತನೂ ಆಗಿದ್ದನು. ಆದುದರಿಂದ ಅವನು ದರೋಡೆ ಮಾಡುವಾಗ ಅಪರೂಪದ ಪದಾರ್ಥಗಳನ್ನು ಮಾತ್ರ ಲಪಟಾಯಿಸುತ್ತಿದ್ದನು. ಶ್ರೀಮಂತ–ನೊಬ್ಬನ ಮನೆಯಲ್ಲಿ ಪುರಾತನ ಕಾಲದ ಸಿಂಹಾಸನವೊಂದಿತ್ತು ಎನ್ನಿ, ಅದನ್ನು ಪೀಟರ್–ಸನ್ ದರೋಡೆ ಮಾಡದೆ ಬಿಡುತ್ತಿರಲಿಲ್ಲ. ಹನ್ನೆರಡನೆಯ ಶತಮಾನದ ಜಮಖಾನೆ, ಡೆನ್ಮಾರ್ಕಿನ ದೊರೆಗಳು ಉಪಯೋಗಿಸುತ್ತಿದ್ದ ಕತ್ತಿ ಗುರಾಣಿಗಳು, ಬಿಳಿಯ ಕಾಮಧೇನು, ಹೀಗೆ ಅಪರೂಪದ ವಸ್ತುಗಳಿಗೆಲ್ಲ ಈ ಕಳ್ಳನ ಉಸ್ತುವಾರಿ ಇದ್ದೇ ಇರುತ್ತಿತ್ತು. ಅವನು ಯಾವುದೇ ಮನೆಯಿಂದ ಕಳವು ಮಾಡಿರಲಿ ಆ ವಿಷಯ ಅಂದರೆ ಕದ್ದ ಸಾಮಾನುಗಳು ಯಾವುವು ಮತ್ತು ಯಾರದು ಎನ್ನುವ ವಿವರಗಳನ್ನು ಪತ್ರಿಕೆಗಳಿಗೆ ಕಳುಹಿಸುತ್ತಿದ್ದನಂತೆ. ಇಂತಹ ವಿಚಿತ್ರ ಕಳ್ಳನನ್ನು ನಾವು ಎಲ್ಲೂ ನೋಡಿರಲಾರೆವು.

ಒಂದು ಸಾರಿ ಪೀಟರ್‌ಸನ್ ಒಂದು ಮನೆಗೆ ನುಗ್ಗಿದ. ಆ ಮನೆಯ ಅಸ್ತವ್ಯಸ್ತತೆಯನ್ನು ನೋಡಿ ಅವನಿಗೆ ತುಂಬಾ ಬೇಸರವಾಯಿತಂತೆ. ಸರಿ, ಅವನು ತಾನು ಬಂದ ಕೆಲಸ ಮರೆತು ಆ ಮನೆಯನ್ನು ಓರಣವಾಗಿಡಲು ಶುರು ಮಾಡಿಯೇ ಬಿಟ್ಟ. ಕುರ್ಚಿ ಮೇಜುಗಳನ್ನು

ಹೊರಗಿನ ಹಾಲಿನಲ್ಲಿ ಇಟ್ಟು ಮಲಗುವ ಮನೆಯನ್ನು ಗುಡಿಸಿ ಯಾವ ಯಾವ ಸಾಮಾನು ಎಲ್ಲೆಲ್ಲಿ ಇರಬೇಕೋ ಅಲ್ಲಲ್ಲಿ ಇಟ್ಟು ಹೊರಟು ಹೋದ. ಮರುದಿನ ಪತ್ರಿಕೆಯಲ್ಲಿ ಈ ವಿಷಯವೂ ಅಚ್ಚಾದಾಗ ಜನ ಅದನ್ನು ಓದಿ ಬಿದ್ದು ಬಿದ್ದು ನಕ್ಕರಂತೆ. ಮುದುಕ ರೈತನೊಬ್ಬ ಚುಟ್ಟ ಬಾಯಲ್ಲಿಟ್ಟು ಪೇಪರನ್ನು ಕೈಲಿ ಹಿಡಿದು ಮನೆ ಮನೆಗೆ ಹೋಗಿ ಎಲ್ಲರಿಗೂ ಓದಿ ಹೇಳಿದನಂತೆ. ಇಂಥಾ ವಿಚಿತ್ರ ಕಳ್ಳನನ್ನು ಪೋಲೀಸರು ಹೇಗೆ ಹಿಡಿದಾರು?

ಆದರೆ ಬಂಗಾರದ ಕತ್ತಿಯೆಂದು ಕುತ್ತಿಗೆ ಕೊಯ್ದುಕೊಳ್ಳುವುದಕ್ಕಾಗುತ್ತದೆಯೆ ? ಹೀಗಾ–ಯಿತು ಪೀಟರ್‌ಸನ್‌ನ ಸ್ಥಿತಿ. ಯಾವುದೋ ಒಂದು ಹೊತ್ತಿನಲ್ಲಿ ಅವನ ತಪ್ಪಿಗೆ ಕೆರಳಿದ ಪೋಲೀಸರು ಅವನನ್ನು ಪತ್ತೆ ಹಚ್ಚಿ, ಕೈಗೆ ಬೇಡಿ ಹಾಕಿ ಸೆರೆಮನೆಗೆ ತಳ್ಳಿಬಿಟ್ಟರು. ಪೀಟರ್ ನ್ಯಾಯಾಸ್ಥಾನದಲ್ಲಿ ಮುಚ್ಚುಮರೆ ಇಲ್ಲದೆ ತನ್ನ ತಪ್ಪುಗಳನ್ನು ಒಪ್ಪಿಕೊಂಡು, "ನಾನು ಒಬ್ಬ ಕಲಾವಿದ. ಕಲೆಯ ವಸ್ತುಗಳನ್ನು ಮಾತ್ರ ಕದಿಯುತ್ತಿದ್ದೆ. ಕದ್ದವಸ್ತುಗಳನ್ನು ಲಂಡನ್ನಿನಲ್ಲಿ ಶೇಖರಿಸಿ ಒಂದು ಅಂಗಡಿ ಇಟ್ಟು ಭಯಂಕರ ಲಾಭ ಗಿಟ್ಟಿಸುತ್ತಿದ್ದೆ," ಎಂದು ಹೇಳಿದಾಗ ನ್ಯಾಯಾ–ಧೀಶರು ದಿಙ್ಮೂಢರಾದರು. ಸೆರೆಮನೆಯಲ್ಲಿ ನಾಲ್ಕಾರು ದಿನಗಳನ್ನು ಕಳೆಯುತ್ತಲೇ ಪೀಟರ್, "ನಮ್ಮ ಸರಕಾರ ಬಹಳ ದುರ್ಬಲವಾಗಿದೆ. ದೇಶ ನಿಶ್ಶಕ್ತ ವಾಗಿದೆ. ಸ್ವಲ್ಪ ಬದಲಾವಣೆ ಮಾಡೋಣ" ಎಂದು ಹೇಳಿಕೊಂಡನಂತೆ. ಆದರೆ ಕಳ್ಳನ ಮಾತೆಂದು ಯಾರೂ ಅದರೆಡೆ ಅಷ್ಟಾಗಿ ಗಮನವೀಯಲಿಲ್ಲ ವಷ್ಟೇ ಅಲ್ಲ, ಸೆರೆಯಿಂದ ಪಾರಾಗಿ ಹೋಗಲು-ಅವನು ಹೂಡಿದ ಹಂಚಿಕೆಯಿರಬೇಕೆಂದೂ ಅನೇಕರು ಭಾವಿಸಿದರು.

ಕಳ್ಳನಾಡಿದ ಮಾತು ಮುಂದೆ ನಿಜವಾಗುತ್ತ ಬಂತು. ೧೯೩೯ರಲ್ಲಿ ಜರ್ಮನ್ ವಿಮಾನಗಳು ಡೆನ್ಮಾರ್ಕಿನ ಮೇಲೆ ಹಾರತೊಡಗಿದುವು. ಯುದ್ಧದ ಗಾಳಿಯಿಂದ ಇಡೀ ಡೆನ್ಮಾರ್ಕ್ ತಳಮಳ ಗೊಂಡಿತು. ಹಸನಾದ ಹಳ್ಳಿಗಳ ಮೇಲೆ ಯುದ್ಧ ವಿಮಾನಗಳು ಹಾರಾಡತೊಡಗಿದವು. ಹಾಲು ಸುರಿದ ನಾಡಿನಲ್ಲಿ ಬಾಂಬಿನ ಮಳೆ ಬಿದ್ದಿತು. ಎವೆ ತೆರೆದಿಕ್ಕುವಷ್ಟರಲ್ಲಿ ಡೆನ್ಮಾರ್ಕ್ ತನ್ನ ಸ್ವಾತಂತ್ರ್ಯವನ್ನು ಕಳೆದುಕೊಂಡು ನಾಜೀ ಪಿಶಾಚಿಯ ಕಪಿಮುಷ್ಟಿಯಲ್ಲಿ ಸಿಕ್ಕಿಬಿಟ್ಟಿತು. ನಾಡಿನಲ್ಲಿ ಅಸಂತೋಷವು ತಾಂಡವವಾಡು ತ್ತಿತ್ತು. ಪೀಟರ್‌ಸನ್‌ನ ಧಾಂದಲೆಯನ್ನು ಸಹಿಸಿದ ನಾಡು ನಾಜಿಗಳ ಕ್ರೂರ ಕೃತ್ಯವನ್ನು ಸಹಿಸಿತೇ ? ನಾಜಿ ನೆರಳು ಕ್ರಮವಾಗಿ ಪೋಲೆಂಡ್, ಫ್ರಾನ್ಸ್, ಯುಗೋಸ್ಲಾವಿಯಾಗಳನ್ನು ಕತ್ತಲುಗೊಳಿಸಿ ಡೆನ್ಮಾರ್ಕನ್ನು ಮುಚ್ಚಿಬಿಟ್ಟಿತು.

ದೇಶಕ್ಕೆ ದೇಶವೇ ವಿಷ ಕುಡಿದಂತೆ ತಳ ಮಳಗೊಂಡಾಗ ಪೀಟರ್‌ಸನ್ ಏನು ಮಾಡು ತ್ತಿದ್ದ? ಎಲ್ಲಿದ್ದ? ಅವನ ಕ್ರಾಂತಿಕಾರಕ ಧ್ಯೇಯ ವೆಲ್ಲಿ? ಕರೀನ್ ಮೆಕೇಲಿಸ್ ಎಂಬ ಪ್ರಸಿದ್ಧ ಸಾಹಿತಿಯೊಬ್ಬಳು ಪೀಟರ್‌ನ ಪರವಾಗಿ ರಾಜ ರಲ್ಲಿ ಮಾತನಾಡಿ ಅವನನ್ನು ಬಿಡಿಸಿಕೊಂಡಳಂತೆ. ಪೀಟರ್ ಕೆಲ ದಿನ ಆಕೆಯ ಮನೆಯಲ್ಲಿದ್ದು ಒಬ್ಬಳು ಹುಡುಗಿಯನ್ನು ಮದುವೆಯಾದನಂತೆ. ಅಲ್ಲಿಗೆ ಪೀಟರ್ ಒಬ್ಬ ಗೃಹಸ್ಥನಾದನೆಂದು ತಿಳಿದ ಜನ ೧೯೪೦ರಲ್ಲಿ ಪೀಟರ್ ಜರ್ಮನರ ಕಡೆ ಸೇರಿದನೆಂಬ ಸುದ್ದಿಯನ್ನು ಕೇಳಿ ಒಂದು ಕಾಲಕ್ಕೆ ಅವನ ಬಗೆಗಿದ್ದ ಅಲ್ಪ ಸ್ವಲ್ಪ ಸಹಾನು ಭೂತಿಯನ್ನು ಕಳೆದುಕೊಂಡಿತು. ಅಲ್ಲದೆ ಜರ್ಮ ನರು ಡೆನ್ಮಾರ್ಕಿನಲ್ಲಿ ಸ್ಥಾಪಿಸಿದ್ದ ಒಂದು ದೊಡ್ಡ ವಿಮಾನ ಕಾರಖಾನೆಯಲ್ಲಿ ಪೀಟರ್‌ಸನ್ ಕೆಲಸ ಕ್ಕಿದ್ದಾನೆಂದು ತಿಳಿದುಬಂದಾಗಲಂತೂ ಡೇನಿಶ್ ಜನತೆಯ ದೃಷ್ಟಿಯಲ್ಲಿ ಆತ ಮಹಾ ದೇಶ–ದ್ರೋಹಿಯೇ ಆದ.

ಜರ್ಮನರು ಡೆನ್ಮಾರ್ಕನ್ನು ಗೆದ್ದೆವೆಂದು ಬಾವುಟ ಹಾರಿಸಿರಬಹುದು. ಬೀದಿ ಬೀದಿಯಲ್ಲಿ ಟ್ಯಾಂಕ್ ಪಡೆಗಳನ್ನು 'ಪೆರೇಡ್' ಮಾಡಿಸಿರ ಬಹುದು. ಮುಗ್ಧ ಜನರನ್ನು ಕೊಲೆಮಾಡಿರ ಬಹುದು. ಆದರೆ ಅದು ಶಾಶ್ವತವಾಯಿತೆ? ಸ್ವಾತಂತ್ರ್ಯದ ಕೊಲೆಯಾಯಿತೆ? ದೇಶಪ್ರೇಮವೇ ತಮ್ಮ ಉಸಿರು, ಗುರಿ ಎಂದು ಭಾವಿಸಿದ ಯುವಕರು ಗುಪ್ತರಾಗಿ ಡೆನ್ಮಾರ್ಕಿನ ಸ್ವತಂತ್ರ ಸೇನೆಯನ್ನು ಕಟ್ಟಲಾರಂಭಿಸಿದರು. ಹಗಲೆಲ್ಲ ಶಾಂತರಾಗಿದ್ದು ರಾತ್ರಿ ಕ್ರಾಂತಿಯ ಸನ್ನಾಹದಲ್ಲಿದ್ದರು. ಕಾಣದ ಕಾಗದ, ಸಿಗದ

ಸಿಬ್ಬಂದಿ, ನಿರಂತರ ಕೆಲಸ – ಗುಪೆಗಳಲ್ಲಿ, ನೆಲ ಮಾಳಿಗೆಯಲ್ಲಿ, ಬಂದೂಕು ಮದ್ದುಗಳ ಶೇಖರಣೆ – ಹೀಗೆ ಡೆನ್ಮಾರ್ಕ್ ಮತ್ತೆ ಚೇತನಕ್ಕೆ ತಯಾರಾಗುತ್ತಿತ್ತು.

ಒಂದು ದಿನ ಸ್ವತಂತ್ರ ಸೇನೆಯ ನಾಯಕರು ಸಮಾಲೋಚನೆ ಮಾಡುತ್ತ ಕುಳಿತಾಗ ಅಲ್ಲಿಗೆ ಪೀಟರ್‌ಸನ್ ಬರುತ್ತಿದ್ದುದನ್ನು ಕಂಡು, 'ಇದರಲ್ಲಿ ಏನೋ ಮೋಸವಿದೆ' ಎಂದು ಬಂದೂಕು ಬಾರುಮಾಡಿ ಅವನ ಕಡೆ ತಿರುಗಿಸಿದರು. ಆತ ಹೆದರದೆ ಧೈರ್ಯವಾಗಿ, ನೇರವಾಗಿ, ನಿಧಾನವಾಗಿ ಅವರೆಡೆಗೆ ನಡೆದುಹೋದ.

"ದೇಶದ್ರೋಹಿ, ಇಲ್ಲಿಗೇಕೆ ಬಂದೆ? ಸುಟ್ಟು ಬೂದಿಮಾಡುತ್ತೇನೆ" ಎಂದೊಬ್ಬ ಹೇಳಿದರೆ, "ನಿನ್ನ ಕಲಾನೈಪುಣ್ಯ ನಮ್ಮನ್ನು ಮೋಸಗೊಳಿಸಲಾರದು. ಇಲ್ಲಿ ಬಂದವರಿಗೆ ಕೈಗೆ ಕೋಳ" ಎಂದ ಮತ್ತೊಬ್ಬ. ಆಗ ಪೀಟರ್ ನಿಧಾನವಾಗಿ "ಸ್ನೇಹಿತರೆ. ನನ್ನೊಡನೆ ಬನ್ನಿ. ಜರ್ಮನರ ವಿಮಾನ ಕಾರ್ಖಾನೆಯನ್ನು ಸುಟ್ಟುಬಿಡೋಣ" ಎಂದು ಹೇಳಿದ.

ಜರ್ಮನರ ಉಕ್ಕಿನ ಕೋಟೆಯನ್ನು ಒಳನುಗ್ಗಿ ಅವರ ಕಾರ್ಖಾನೆಯನ್ನು ನಾಶಮಾಡುವುದೆಂದರೆ ಆಟದ ಮಾತಲ್ಲ. ಅದಕ್ಕೆ ಬೇಕಾಗುವಷ್ಟು ಮದ್ದು, ಗುಂಡು, ಸೈನಿಕರು ಅವರಲ್ಲಿರಲಿಲ್ಲ. ಅಲ್ಲದೆ ಈ ವಿಷಯದಲ್ಲಿ ಪೀಟರ್‌ಸನ್‌ನ ಮಾತನ್ನು ಹೇಗೆ ನಂಬುವುದು? ತಮ್ಮೆಲ್ಲರನ್ನೂ ಒಯ್ದು ಸುಟ್ಟುಬಿಟ್ಟರೆ?

"ನನ್ನೊಡನೆ ಬನ್ನಿ" ಎಂದು ಮತ್ತೆ ಗಂಭೀರವಾಗಿ ಪೀಟರ್ ಜನರನ್ನು ಕರೆದ.

ಅವನ ಮಾತಿನ ಶೈಲಿ, ಗಾಂಭೀರ್ಯ, ನಿಲುವು ಇವುಗಳನ್ನು ಕಂಡು ಸ್ವತಂತ್ರ ಸೇನೆಯ ನಾಯಕ ನಕ್ಕು ಮುಂದೆ ಬಂದು ಪೀಟರ್‌ನ ಕೈಯಲ್ಲಿ ಕೈಯಿಟ್ಟ. ಸ್ನೇಹದ ಬಳ್ಳಿ ಹೆಣೆದುಕೊಂಡಿತು.

೧೯೪೦ರ ರಾತ್ರಿಯೊಂದರಲ್ಲಿ ಡೆನ್ಮಾರ್ಕಿನಲ್ಲಿ ಸ್ಥಾಪಿತವಾದ ಜರ್ಮನರ ಕಾರ್ಖಾನೆಯ ದಾರಿಯಲ್ಲಿ ಮೂರು ಜನ ಡೇನಿಶರು ನಡೆಯುತ್ತಿದ್ದರು. ದೂರದಿಂದ "ಯಾರದು ?" ಎಂದು ಸಿಪಾಯಿಯೊಬ್ಬ ಕೂಗಿದ. ಮೂವರಲ್ಲಿ ಮುಂದಾಗಿದ್ದ ಪೀಟರ್ 'ಹಿಟ್ಲರ್ ಸೆಲ್ಯೂಟ್' ಮಾಡಿ ಗುಪ್ತವಾಕ್ಯವನ್ನು ಉಸುರಿದ. ಸಿಪಾಯಿ ಮಾತಾಡದೆ ಅವರಿಗೆ ದಾರಿ ಕೊಟ್ಟ. ತೆಂಗಿನ ಮರದೆತ್ತರ ಇದ್ದ ಕೋಟೆಯ ಬಾಗಿಲು ತೆರೆಯಿತು. ಪೀಟರ್ ಮತ್ತು ಅವನೊಡನಿದ್ದ ಇಬ್ಬರು ಕಾರಖಾನೆಯನ್ನು ಹೊಕ್ಕರು. ಬಾಗಿಲು ಮುಚ್ಚಿಕೊಂಡಿತು.

ಇದಾದ ನಾಲ್ಕೈದು ನಿಮಿಷದಲ್ಲಿ "ಧಡಮ್" ಎಂದು ನೂರು ಗನ್ನುಗಳನ್ನು ಒಟ್ಟಿಗೇ ಹಾರಿಸಿದಂತೆ ಅದ್ಭುತವಾದೊಂದು ಶಬ್ದ ಕಾರ್ಖಾನೆಯಿಂದ ಕೇಳಿಬಂತು. ತಲೆಯೆತ್ತಿ ನಿಂತ ದೊಡ್ಡ ಕೊಳವೆಗಳು, ಹಾರಾಡುವ ವಿಮಾನಗಳು, ಕಾರ್ಖಾನೆಯ ಜನ, ಯಂತ್ರಗಳು ಎಲ್ಲವೂ ಅಪ್ಪಳಿಸಿ ಆಕಾಶದಲ್ಲಿ ಹಾರಿದುವು. ಡೆನ್ಮಾರ್ಕಿನಲ್ಲಿ ಹಿಂದೆಂದೂ ಜನ ಅಂಥ ಆಸ್ಫೋಟನದ ಸದ್ದನ್ನು ಕೇಳಿರಲಾರರು. ಸುಮಾರು ಎರಡು ಗಂಟೆಗಳ ಕಾಲ ಅದು ಪ್ರತಿಧ್ವನಿತವಾಗುತ್ತಿತ್ತು. ಕಾರಖಾನೆಯಿಂದ ಎದ್ದ ಹೊಗೆ, ಉರಿ ಎಂಟು ಮೈಲಿ ಸುತ್ತಿನ ಪ್ರದೇಶವನ್ನೆಲ್ಲ ಆವರಿಸಿ ಜನ ಬೆದರಿ ಓಡುವಂತೆ ಮಾಡಿತು. ಆ ಘೋಷದಲ್ಲಿ, ಆ ಉರಿಯಲ್ಲಿ, ಆ ಹೊಗೆಯಲ್ಲಿ ಅವೆಲ್ಲದರ ಕಲಸುಮೇಲೋಗರದಲ್ಲಿ ಪೀಟರ್‌ಸನ್‌ನ ದೇಹ ನುಚ್ಚುನೂರಾಗಿ ಪಂಚಭೂತಗಳಲ್ಲಿ ಸೇರಿಹೋಯಿತು. ಕಾರಖಾನೆಯೊಂದಿಗೆ ಅವನೂ ಅಳಿದು ಹಿಡಿ ಬೂದಿಯಾದ.

ಇಂದೂ ಸ್ವತಂತ್ರ ಡೆನ್ಮಾರ್ಕಿನ ಜನ ಪೀಟರ್‌ಸನ್‌ನ ಸಾಧನೆಯನ್ನು ಕುರಿತು ಲಾವಣಿ ಕಟ್ಟಿ ಹಾಡುತ್ತಿದ್ದಾರೆ. ✡

ಬಿಡುವು ದೊರೆತರೆ ಕಾಡುವುದು ಭಯ, ಚಿಂತೆ
ಬಿಡುವಿಲ್ಲದಿರುವವನೆ ಭಾಗ್ಯಶಾಲಿ.

# ನಿಮ್ಮ ಶಬ್ದಭಂಡಾರ ಬೆಳೆಯಲಿ

## ಶಬ್ದ ಭಂಡಾರವು ಹಣದ ಭಂಡಾರಕ್ಕಿಂತಲೂ ಅಮೂಲ್ಯವಾಗಿದೆ

**ಇಲ್ಲಿ ಪ್ರತಿ ತಿಂಗಳೂ ಕೆಲವು ಶಬ್ದಗಳನ್ನು ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿ. ಆಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.**

೧. **ಮಿಥುನ**
(ಅ) ಜೋಡಿ (ಆ) ಸುಳ್ಳು (ಇ) ಗುಟ್ಟು (ಈ) ಹುಚ್ಚು

೨. **ಮಿಂಡು**
(ಅ) ಸೇವೆ (ಆ) ಕಾಮಾತುರ (ಇ) ಹಟಮಾರಿತನ (ಈ) ಬಾರಿಸು

೩. **ನತದೃಷ್ಟ**
(ಅ) ಬಗ್ಗಿದ್ದು (ಆ) ಒಳ್ಳೆಯ (ಇ) ಭಾಗ್ಯವಿಲ್ಲದ (ಈ) ಅದೃಶ್ಯ

೪. **ನನೆಗುದಿ**
(ಅ) ನೆನೆನೆನೆದು ಅಳುವುದು (ಆ) ಮೆತ್ತಗಾಗುವಿಕೆ (ಇ) ಮೊಗ್ಗೆ ಬಿಡು (ಈ) ಜಡ್ಡು ಬೀಳುವುದು

೫. **ನೆನಕೆ**
(ಅ) ಒದ್ದೆಯಾಗುವಿಕೆ (ಆ) ನೆನಪು (ಇ) ಹಳೆಯ ಸಂಗತಿ (ಈ) ಭವಿಷ್ಯ

೬. **ಸುರಭಿತ**
(ಅ) ಅವಸರಪಡುವ (ಆ) ದೇವಲೋಕದ (ಇ) ತುಂಬಾ ಹೆದರಿದ (ಈ) ಕಂಪುಳ್ಳ

೭. **ಹಾಸಲು**
(ಅ) ಇಡುಗಂಟು (ಆ) ಹುಲ್ಲುಗಾವಲು (ಇ) ತೆರಬೇಕಾದ ಹಣ (ಈ) ಆಟದ ಬಯಲು

೮. **ಹೂಟ**
(ಅ) ಹಂಚಿಕೆ (ಆ) ನೇಗಿಲು (ಇ) ಹೊಟ್ಟೆಕಿಚ್ಚು (ಈ) ಹುಗಿದ್ದನ್ನು ಎಬ್ಬಿಸುವುದು

೯. **ಪುದುವಟ್ಟು**
(ಅ) ಅನ್ಯೋನ್ಯ ಪ್ರೀತಿ (ಆ) ಒಪ್ಪಂದ (ಇ) ಧರ್ಮಖರ್ಚಿಗೆ ತೆಗೆದಿಟ್ಟ ಹಣ (ಈ) ಮದುವೆ

೧೦. **ಹಿಮ್ಮತ್ತು**
(ಅ) ಉಪಾಯ (ಆ) ಕಾಲಿನ ಹಿಂಭಾಗ (ಇ) ಅಮಲಿಳಿಯುವುದು (ಈ) ಧೈರ್ಯ

೧೧. **ಸಂಯುತ**
(ಅ) ಹಿಡಿತದಲ್ಲಿರುವ (ಆ) ಒಗ್ಗಟ್ಟಿನ (ಇ) ಹೊರಟುಹೋದ (ಈ) ಗಾಳಿ ತುಂಬಿದ್ದು

೧೨. **ಸಶೇಷ**
(ಅ) ಹಾವಿನ ಬಿಲ (ಆ) ಪೂರ್ಣವಾಗದ್ದು (ಇ) ತಲೆಯ ಆಭರಣ (ಈ) ಒಳ್ಳೇ ಜನ

೧. **ಮಿಥುನ** (ಅ) ಜೋಡಿ. ವಿಶೇಷವಾಗಿ ಗಂಡುಹೆಣ್ಣಿನ ಜತೆ; ಅವಳಿ; ಲೈಂಗಿಕ ಕೂಟ. ಉದಾ:— ದೇವಾಲಯದ ಮಿಥುನ ಶಿಲ್ಪ. [ಸಂ. ಮಿಥ್ = ಕೂಡು–ಎಂಬುದರಿಂದ]

೨. **ಮಿಂಡು** (ಆ) ಕಾಮಾತುರ, ಭೋಗಾಭಿಲಾಷೆ; ಯೌವನ ಕಾಲ, ಹುಮ್ಮಸ್ಸು. ಉದಾ:— ಮಿಂಡಿನಿಂದ ಉನ್ಮತ್ತನಾಗಿದ್ದ. [ಕನ್ನಡ]

೩. **ನತದೃಷ್ಟ** (ಇ) ಭಾಗ್ಯವಿಲ್ಲದ, ದುರ್ದೈವಿ, ಅದೃಷ್ಟ ಕೆಟ್ಟವ. ಉದಾ:— ನತದೃಷ್ಟ ದಾಂಪತ್ಯ. [ಸಂ. ನತ= ಕುಗ್ಗಿದ + ಅದೃಷ್ಟ–ನತಾದೃಷ್ಟ]

೪. **ನನೆಗುದಿ** (ಇ) ಜಡ್ಡು ಬೀಳುವಿಕೆ, ದೀರ್ಘಕಾಲ ತೀರ್ಮಾನವಾಗದಿರುವುದು. ಉದಾ:— ಪ್ರಶ್ನೆ ನನೆಗುದಿಗೆ ಬಿತ್ತು. [ಕನ್ನಡ. ನನೆ = (ಧಾನ್ಯ)ನನೆಯುವುದು + ಕುದಿ = (ಅನಂತರ) ಕುದಿಸುವಿಕೆ = ಎಷ್ಟು ಕಾಲವಾದರೂ ಬೇಯದಿರುವುದು]

೫. **ನೆನಕೆ** (ಅ) ಸ್ಮರಣೆ, ನೆನಪು, ಜ್ಞಾಪಕ; ನೆನಪು ಕೊಡುವ ಸೂಚನೆ. ಉದಾ:— ಅವಳಿಗೆ ನನ್ನ ನೆನಕೆ ತಿಳಿಸು. [ದೇಶ್ಯ, ನೆನೆ = ಸ್ಮರಿಸು–ಎಂಬುದರಿಂದ]

೬. **ಸುರಭಿತ** (ಈ) ಕೆಂಪುಳ್ಳ, ಪರಿಮಳವುಳ್ಳ, ಒಳ್ಳೇ ವಾಸನೆಯುಳ್ಳ. ಉದಾ:— ಪುಷ್ಪ ಸುರಭಿತವಾದ ಗಾಳಿ. [ಸಂ. ಸುರಭಿ = ಸುಗಂಧ–ದಿಂದ]

೭. **ಹಾಸಲು** (ಇ) ತೆರತಕ್ಕ ಹಣ, ಅಥವಾ ಉದಾಯ ಇತ್ಯಾದಿ. ಉದಾ:— ಟಪಾಲು ಹಾಸಲು, ರೈಲ್ವೆ ಹಾಸಲು. [ಅರಬ್ಬಿ, ಹಾಸಿಲ್ = ಆದಾಯ.]

೮. **ಹೂಟ** (ಅ) ಹಂಚಿಕೆ, ಉಪಾಯ; ಕುತಂತ್ರ; ವ್ಯವಸ್ಥೆ, ಯೋಜನೆ. ಉದಾ:— ವ್ಯರ್ಥವಾದ ಹೂಟಗಳನ್ನು ಆಡಿದ. [ದೇಶ್ಯ, ಪೂಡು = ಹೂಡು = ಜೋಡಿಸು–ಎಂಬುದರಿಂದ]

೯. **ಪುದುವಟ್ಟು** (ಇ) ಧರ್ಮಕಾರ್ಯಕ್ಕೆ ತೆಗೆದಿಟ್ಟ ಗಂಟು, ಧರ್ಮಾದಾಯನಿಧಿ. ಉದಾ:– ಪುದುವಟ್ಟನ್ನೇ ನುಂಗಿಹಾಕಿದರು. [ದೇಶ್ಯ ಪುದಿ, ಪ್ರದು = ಕೂಡಿಸು + ವಟ್ಟು = ಒಟ್ಟು?]

೧೦. **ಹಿಮ್ಮತ್ತು** (ಈ) ಧೈರ್ಯ, ಸಾಹಸ, ಪರಾಕ್ರಮ. ಉದಾ:— ಹಿಮ್ಮತ್ತು ಇದ್ದರೆ ಇಲ್ಲಿ ಬಾ. [ಅರಬ್ಬಿ, ಹಿಮ್ಮತ್]

೧೧. **ಸಂಯುತ** (ಅ) ಹಿಡಿತದಲ್ಲಿರುವ, ಅಂಕೆಯಲ್ಲಿರುವ, ಕಟ್ಟುಪಾಡಿನಲ್ಲಿರುವ. ಉದಾ:— ಸಂಯುತವಾದ ಕೋಪ. [ಸಂ. ಸಂ = ಸುತ್ತಲೂ + ಯತ = ಅಂಕೆಯಲ್ಲಿರುವ]

೧೨. **ಸಶೇಷ** (ಆ) ಪೂರ್ಣವಾಗದ್ದು, ಅಪೂರ್ಣ, ಇನ್ನೂ ಬಾಕಿ ಇರುವಂಥಾದ್ದು. ಉದಾ— ಸಶೇಷ ಕಥೆ. [ಸಂ. ಸ = ಸಹಿತ + ಶೇಷ = ಬಾಕಿ]

## ನಿಮ್ಮ ಶಬ್ದಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಅರಿಸಿದ್ದು ಸರಿಯಾಗಿದೆಯೆಂದು ಎಣಿಸಿ, ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

| | | |
|---|---|---|
| ೬—೮ ಸರಿಯಿದ್ದರೆ | ... | ಸಾಧಾರಣ |
| ೯—೧೦ ,, | ... | ಉತ್ತಮ |
| ೧೧—೧೨ ,, | ... | ಅತ್ಯುತ್ತಮ |

ಬದುಕಬೇಕೆ,

ಹಾಗಾದರೆ ನೀವೂ ಹಿಡಿಯಿರಿ

# ಸಾಹೇಬರ ಮರ್ಜಿ

'ಸಾತಭಾಯಿ'

ಸಾಹೇಬರ ಮರ್ಜಿ' ಕಾಯುವದು ಸರಕಾರೀ ನೌಕರರ ಮುಖ್ಯ ಕರ್ತವ್ಯಗಳಲ್ಲೊಂದಾಗಿದೆ! ಕೆಲಸ-ವನ್ನು ಸರಿಯಾಗಿ ಮಾಡಲಿ-ಬಿಡಲಿ, ಮೇಲಿನ ಸಾಹೇಬರ ಮರ್ಜಿಯೊಂದಿದ್ದರೆ ಸಾಕಪ್ಪ! 'ನಾನು ಸತ್ಯವಂತನಾಗಿದ್ದೇನೆ— ನಿಷ್ಠಾವಂತನಾಗಿದ್ದೇನೆ— ಪ್ರಾಮಾಣಿಕನಾಗಿದ್ದೇನೆ-ಯಾರಿಗೂ ಹೆದರಬೇಕಾ-ಗಿಲ್ಲ' ಎಂಬುವವರಿಗೂ ಈ 'ಸಾಹೇಬರ ಮರ್ಜಿ' ಅತ್ಯಂತ ಅವಶ್ಯ! ಈ 'ಮರ್ಜಿ' ಕಾಯದ ನೌಕರ-ನಿಗೆ ಮೇಲಿಂದ ಮೇಲೆ 'ಮೆಮೋ'ಗಳು 'ಚಾರ್ಜುಶೀಟು,' ವರ್ಷಾಂತ್ಯ 'ಗುಪ್ತವರದಿ'ಯಲ್ಲಿ 'ಬಡತಿ'ಯ ಮೇಲೆ ಕೆಟ್ಟ ಪರಿಣಾಮವಾಗುವಂತೆ ಬರೆಯುವದು, ಬೇಡದ ಜಾಗೆಗೆ ಬದಲಿ, ಇಂತಹವೇ ಸಂದರ್ಭಗಳನ್ನು ಎದುರಿಸಬೇಕಾಗುತ್ತವೆ! ಈ ಸಾಹೇಬರ 'ಮರ್ಜಿ'ಯ ಮಾರ್ಗಗಳು, ವ್ಯಕ್ತಿ-ವ್ಯಕ್ತಿಯಿಂದ ಬದಲಾಗುತ್ತಿರುತ್ತವೆ. ಅಂತಹವು ಗಳಲ್ಲಿ ಕೆಲವು ಘಟನೆಗಳಿವು …

## ಫೋಟೋ ಫಜೀತಿ

ನಮ್ಮ ಮೇಲಿನ, ಅವರ ಮೇಲಿನ, ಅವರ ಮೇಲಿನ ಸಾಹೇಬರು ಬರುವವರಿದ್ದರು. ಮೇಲಿನ ಸಾಹೇಬರಿಂದ ಫೋನು ಬಂತು— ೨ ರೂಮು ಸರಕಾರೀ ಗೆಸ್ಟ್‌ಹೌಸ್‌ನಲ್ಲಿ ರಿಝರ್ವ್ ಮಾಡಿಸಿ, ರೆಂದು. ಆದರೆ ಅಂದು ಮಂತ್ರಿಗಳ 'ಕಾರ್ಯಕ್ರಮ'ವಿದ್ದುದರಿಂದ- ರೂಮು ಖಾಲಿಯಿರಲಿಲ್ಲ. ಇದನ್ನು ಮೇಲಿನ ಸಾಹೇಬರಿಗೆ ತಿಳಿಸಿದಾಗ-ಅತ್ತ ಕಡೆಯಿಂದ ಗುಂಡು ಸಿಡಿಯಿತು-"ಏನ್ರಿ, ನಿಮಗ ಎರಡು ರೂಮು ವ್ಯವಸ್ಥಾ ಮಾಡ್ಲಿಕ್ಕೆ ಬರೂದಿಲ್ಲಾ? ಎಷ್ಟು ಇನ್‌ಎಫಿಸಿಯೆಂಟ್ ಇದ್ದೀರಿ."

ನಾವು ಹೆದರಿದೆವು. ಕೊನೆಗೆ ಊರಿನ ಬೆಸ್ಟ್ ಲಾಜ್‌ನಲ್ಲಿ ೨ ಡಬಲ್ ರೂಮು ಹಿಡಿದೆವು-ದಿನದ ಬಾಡಿಗೆ ೨೫/– ರೂಪಾಯಿ ಒಂದು ರೂಮಿಗೆ!

ಮೇಲಿನ–ಮೇಲಿನ–ಮೇಲಿನ ಸಾಹೇಬರುಗಳು ಬಂದರು.

ನಮಗೊಬ್ಬ ಹೊಸದಾಗಿ ಸಹೋದ್ಯೋಗಿ ಗಂಟುಬಿದ್ದಿದ್ದ-ಹೊಸಬ ಇನ್ನೂ, ಹೀಗಾಗಿ ದೊಡ್ಡ ಸಾಹೇಬರ ಮೇಲೆ 'ಬೆಸ್ಟ್ ಇಂಪ್ರೆಶನ್' ಹೊಡೆಯ ಬೇಕೆಂದು ಇಚ್ಛಿಸಿ, ಒಬ್ಬ ಫೋಟೋಗ್ರಾಫರನ್ನು ಕರೆಸಿ—"ನೀನು ಬೇಕಾದಷ್ಟು ಸ್ನ್ಯಾಪ್‌ಗಳನ್ನು ಹೊಡಿ-ಒಟ್ಟಿನ ಮೇಲೆ ದೊಡ್ಡ ಸಾಹೇಬರು ಖುಷ್ ಆಗಿರಬೇಕು" ಎಂದು ಹೇಳಿದ. ಇದು ನಮಗೇ ಗೊತ್ತಿರಲಿಲ್ಲ! ಫೋಟೋಗ್ರಾಫರ್ ದೊಡ್ಡ ಸಾಹೇಬರು ಹೋದಲ್ಲೆಲ್ಲಾ 'ಸ್ನ್ಯಾಪ್'ತೆಗೆಯಲಾರಂಭಿಸಿದ. ಕನಿಷ್ಠ ೪೦-೫೦ ಫೋಟೋಗಳನ್ನಾದರೂ ತೆಗೆದಿರಬೇಕು. ದೊಡ್ಡ ಸಾಹೇಬರು ಸಂಜೆಗೇ ಹೋಗುತ್ತಾರೆಂದು ನಾವು ತಿಳಿದಿದ್ದೆವು. ಆದರೆ ದೊಡ್ಡ ಸಾಹೇಬರು "ನಾನು ಆ ಫೋಟೋ



ಗಳನ್ನು ನೋಡಿಯೇ ಹೋಗುತ್ತೇನೆ" ಅಂದು ಬಿಟ್ಟರು! ನೆಗೆಟಿವ್‌ಗಳನ್ನು ತೊಳೆಯಲು ಮತ್ತು 'ಡೆವಲಪ್' ಮಾಡಲು ಕನಿಷ್ಠ ೨ ದಿವಸ ಬೇಕೆಂದು ಫೋಟೋಗ್ರಾಫರ್ ನಮಗೆ ಹೇಳಿದಾಗ ಆ ಹೊಸಬ ಸಹೋದ್ಯೋಗಿಯನ್ನು ಶಪಿಸಿದೆವು! ದೊಡ್ಡ ಸಾಹೇಬರುತೂ—"ಏನು, ೨ದಿವ್ಸ ಬೇಕಾಗುತ್ತದಾ? ಅಚ್ಛಾ, ನಿಂತೇ ಹೋಗುತ್ತೇನೆ" ಎಂದರು!

ದೊಡ್ಡ ಸಾಹೇಬರ 'ಊಟದ ವೈಖರಿ' ಕೂಡ ದೊಡ್ಡದೇ ಆಗಿತ್ತು. ಮುಂಜಾನೆ ಡಬಲ್‌ಆಮ್ಲೆಟ್‌ನ ಜೊತೆಗೆ ಬ್ರೆಡ್ಡು, ಸ್ಪೇಶಲ್ ಕಾಫಿ. ಮಧ್ಯಾಹ್ನ ಮಾಂಸಾಹಾರದ ಊಟ, ಸಂಜೆಯಮುಂದೆ ಡ್ರಿಂಕ್ಸ್ ಜೊತೆಗೆ ಊಟ ! ದೊಡ್ಡ ಸಾಹೇಬರ ಜೊತೆಗೆ—ನಮ್ಮ ಮೇಲಿನ ಸಾಹೇಬರು, ಅವರ ಮೇಲಿನ ಸಾಹೇಬರು ಈ ರೀತಿ ಮೂವರ ಊಟ-ತಿಂಡಿ!

ಕೊನೆಗೆ ಸಾಹೇಬರು ಫೋಟೋಗಳನ್ನು ನೋಡಿಯೇ ಜಾಗ ಬಿಟ್ಟರು. ಫೋಟೋಗ್ರಾಫರನ ಬಿಲ್ಲು ೩೭೭-೦೦ ರೂಪಾಯಿ, ಊಟ ಮತ್ತು ತೀರ್ಥ-ತಿಂಡಿಯ ಖರ್ಚು-೩೦೦/- ರೂಪಾಯಿ. ರೂಮು ಬಾಡಿಗೆ, ೧೫೦-೦೦ ರೂಪಾಯಿ ಈ ರೀತಿ ಒಟ್ಟು ೮೨೭-೦೦ ರೂಪಾಯಿ ಭಾರ ನಮ್ಮ ಮೂರು ಮಂದಿ ಸಹೋದ್ಯೋಗಿಗಳ ಮೇಲೆಯೇ ಬಿತ್ತು.

ತಿಂಗಳ ಕೊನೆ ಬೇರೆ. ಈ ಸಾಲ ತೀರಿಸಲು ನಾವು ಪಟ್ಟ ಕಷ್ಟ ಹೇಳಬಾರದು. ಇಲ್ಲಿ ಅದನ್ನು ಹೇಳಿಲ್ಲ...!

## ಪಾತ್ರೆಯ ಮೋಹದ ಸಾಹೇಬರು....

ಇದು ಮತ್ತೊಬ್ಬ ದೊಡ್ಡ ಸಾಹೇಬರ ಕಥೆ...

ಅವರು ಬಂದಾಗ ಅವರ ಊಟ-ಗೀಟದ ಖರ್ಚು ಅಷ್ಟೇನು ಬರುತ್ತಿರಲಿಲ್ಲ, ನಮ್ಮ ಮೇಲೆ! ಆದರೆ ಸಂಜೆಯ ಮುಂದೆ ನಮ್ಮಲ್ಲಿ ಯಾರನ್ನಾದರೂ ಕರೆದುಕೊಂಡು 'ವಾಕಿಂಗ್' ಎಂದು ಬಜಾರದಲ್ಲಿ ಹೋಗುತ್ತಿದ್ದರು. ಪೇಟೆಯಲ್ಲಿ ಕಂಡ ಸ್ಟೇನ್‌ಲೆಸ್ ಸ್ಟೀಲ್ ಅಂಗಡಿಗೆ ನುಗ್ಗಿ,

"ರೀ... ಮಿಸ್ಟರ್... ಈ ಟಿಫಿನ್ ಕ್ಯಾರಿಯರ್ ತುಂಬಾ ಚೆನ್ನಾಗಿದೆಯಲ್ಲವೆ?—ನನ್ನ ಮಗನಿಗೆ ಬೇಕೆಂದು ಹೇಳಿದ್ದಾನೆ. ಈ ಲೋಟ ಈ ಡಬ್ಬಾ ನಮ್ಮ ಮಿಸೆಸ್ ತುಂಬಾ ಲೈಕು ಮಾಡುತ್ತಾಳೆ. ಈ ಹಾಲಿನ ಭಾಂಡಿ ನನ್ನ ಡಾಟರ್‌ಗೆ ತುಂಬಾ



ಸೇರುತ್ತದೆ..." ಎಂದು ಏಳೆಂಟು ಸಾಮಾನು ಗಳನ್ನು ಆರಿಸಿ ಅಂಗಡಿಕಾರನಿಗೆ ಪ್ಯಾಕು ಮಾಡಲು ಹೇಳಿ, ನಮ್ಮ ಕಡೆಗೆ ತಿರುಗಿ ಹೇಳಿದರು:

"ರೀ ಇವರೆ... ನೀವು ಬಿಲ್ಲು ಕೊಡಿ ಈಗ. ನಂತರ ಬಿಲ್ಲು ಕೊಟ್ಟು ಕಳಿಸಿ ನನಗೇನೆ, ನನ್ನ ಹೆಸರಿ ಗೇನೇ, I will send you money."

ಅವರ ಸ್ವಭಾವ ಗೊತ್ತಿದ್ದ ನಮಗೆ–ಅಂಗಡಿಗೆ ಹೋದಾಗ ಹಣ ಇಲ್ಲದೇ ಮರ್ಯಾದೆಗೇಡು ಆಗಬಾರದೆಂದು ಇನ್ನೂರೋ ಮುನ್ನೂರೋ ರೂಪಾಯಿ ಕಿಸೆಯಲ್ಲಿ ಇಟ್ಟುಕೊಂಡೇ ಹೋಗು ತ್ತಿದ್ದೆವು. ದೊಡ್ಡ ಸಾಹೇಬರಿಂದ ಹಣವೇನೂ ಬರುತ್ತಿರಲಿಲ್ಲ, ಆದರೆ ಇನ್ಸಪೆಕ್ಶನ್ ರಿಪೋರ್ಟ್ ಮಾತ್ರ ಚೆನ್ನಾಗಿ ಬರುತ್ತಿದ್ದವು! ಆದರೆ ಆ ವರದಿ ಗಳನ್ನು ಓದಲು ನಮಗೆ ಪುರುಸೊತ್ತೆಲ್ಲಿ? ಸಾಹೇ ಬರಿಗೆ ಖರ್ಚು ಮಾಡಿದ ಹಣದ ಅಡ್ಜಸ್ಟ್‌ಮೆಂಟ್ ನಲ್ಲಿಯೇ ತಲೆ ತುಂಬಿ ಹೋಗಿರುತ್ತಿತ್ತು.

## ಹಣ್ಣು–ಹಾಲು!

ಮತ್ತೊಬ್ಬ ದೊಡ್ಡ ಸಾಹೇಬರು ತುಂಬಾ ಸಾತ್ವಿಕರು. ಅವರು ವಿಸಿಟ್ಟಿಗೆಂದು ಬೇರೆ ಊರಿಗೆ ಹೋದಾಗ ಮಾಂಸ–ಮದ್ಯ ಯಾವುದೂ ಮುಟ್ಟು ತ್ತಿರಲಿಲ್ಲ. ಆದರೆ ಅವರಿಗೆ ಬೆಳಗು–ಮುಂಜಾನೆ ಒಂದು ಲೀಟರು ಹಾಲು, ಸಂಜೆ ಮುಂದೆ ಒಂದು ಡಜನ್ ರಸಪುರಿ ಬಾಳೇ ಹಣ್ಣು, ಅರ್ಧ ಡಜನ್ನು ಸೇಬು, ಪಾವುಸೇರು ದ್ರಾಕ್ಷೆ ಮಾತ್ರ ಬೇಕೇಬೇಕು! ಇವುಗಳಲ್ಲಿ ಕಿಂಚಿತ್ತಾದರೂ ಕಡಿಮೆಯಾದರೂ ದೊಡ್ಡ ಸಾಹೇಬರು .ಗರಂ ಆಗಿ ಇಡೀ ಆಫೀಸನ್ನೇ ನಡುಗಿಸಿಬಿಡುತ್ತಿದ್ದರು! ಇವರ ಶಾಕಾಹಾರದ ವೈಖರಿ ಗೊತ್ತಿರದ ನಮ್ಮಲ್ಲಿಯ ಒಬ್ಬ ಸಾಹೇಬರ ರಾತ್ರಿ ಊಟಕ್ಕೆ ಮಾಂಸಾ ಹಾರದ ವ್ಯವಸ್ಥೆ ಮಾಡಿ ಮರುದಿನ on the spot ಮೆಮೋ ಸ್ವೀಕರಿಸಿದ– ಬೇರೆ ಆಫೀಸಿ ನಲ್ಲಿಯ ಒಂದು ಸಣ್ಣ ತಪ್ಪಿಗೆ!



## ಸಂಸಾರೋಪಚಾರ

ಇನ್ನೊಬ್ಬ ದೊಡ್ಡ ಸಾಹೇಬರು ಸೆಕ್ಶನ್ ಇನ್ಸ್ ಪೆಕ್ಶನ್‌ಗೆ ಬರುವರೆಂದು ಗೊತ್ತಾದಾಗ, ಆ ಸೆಕ್ಶನ್‌ನ ಅಧಿಕಾರಿ ತತ್ತರಿಸಿದ! ಏಕೆಂದರೆ ಆ ದೊಡ್ಡ ಸಾಹೇಬರ ಇನ್ಸ್‌ಪೆಕ್ಶನ್ ಎಂದರೆ ಮುಂಬ ರುವ ಚಾರ್ಜ್‌ಶೀಟಿಗೆ ಹಾದಿ ಎಂದು ಎಲ್ಲರೂ ಥರ ಥರ ನಡುಗುತ್ತಿದ್ದರು! ತಪ್ಪು ಇರದಿದ್ದರೂ ಕೆದಕಿ–ಕೆದಕಿ ಹುಡುಕುವ ಸ್ವಭಾವ ಅವರದು!

ಬೆಳಗು ಮುಂಜಾನೆ ಬರುವಾಗ, ಆ ಸೆಕ್ಶನ್ ಅಧಿಕಾರಿ ಗಣಪತಿ ಮತ್ತು ದತ್ತಮಂದಿರಗಳಿಗೆ, ಭೆಟ್ಟಿಕೊಟ್ಟು ಬೇಡಿಕೊಂಡು ಬಂದ! ದತ್ತ–ಗಣಪತಿಯ ಕೃಪೆಯೋ ಏನೋ ದೊಡ್ಡ ಸಾಹೇ ಬರ ಜೊತೆಗೆ ಅವರ ಹೆಂಡತಿ, ಎರಡು ಮಕ್ಕಳು, ಸರಕಾರೀ ಗಾಡಿ ಇದೆಯೆಂದು ಬರಬೇಕೆ?

ಈ ಅಧಿಕಾರಿ ಆಳವಾಗಿ ವಿಚಾರಿಸಿ, ಸಾಹೇ ಬರ ಗೊಡವೇನೇ ಬಿಟ್ಟು, ಸಾಹೇಬರ ಪತ್ನಿ ಮತ್ತು ೨ ಮಕ್ಕಳು ಇವರ ಊಟ–ಉಪಚಾರದ ಬಗ್ಗೆ ಆಸಕ್ತಿ ವಹಿಸಿ, ಹಣ್ಣು ಹಾಪಲು ತುಪ್ಪದ ದೋಸೆ, ಬಟಾಟೆಯ ಚಿಪ್ಸು, ಅಂಟಿನ ಉಂಡಿ, ಬ್ರೂಕಾಫಿ, ಸಣ್ಣ ಹುಡುಗಿಗೆ ಚಾಕಲೇಟು, ಸಂಜೆ ಮುಂದೆ 'ಅಭಿಮಾನ' ಹಿಂದಿ ಪಿಕ್ಚರು ಇವೆಲ್ಲವು ಗಳ ವ್ಯವಸ್ಥೆ ಮಾಡಿದಾಗ–ದೊಡ್ಡ ಸಾಹೇಬರು ತುಂಬಾ ಖುಷ್ ಆದರು! ಇನ್ಸ್‌ಪೆಕ್ಶನ್ ಏನೂ ಮಾಡಲಿಲ್ಲ– ಆದರೂ ಉತ್ತಮ ರೀತಿಯಲ್ಲಿ ಸೆಕ್ಷನ್ ಇಟ್ಟಿರುವ ಅಧಿಕಾರಿ ಎಂದು ಶಹಬ್ಬಾಸ ಕೊಟ್ಟರು, ತಮ್ಮ ವರದಿಯಲ್ಲಿ!



## ವಿರೋಧಕ್ಕೆ ತಕ್ಕ ಶಾಸ್ತಿ!

ನಮಗೊಬ್ಬ ಸಹೋದ್ಯೋಗಿ ಹೊಸದಾಗಿ ಸೇರಿದ. ನಾವು ಸಂತೋಷಗೊಂಡೆವು– ಸಾಹೇಬರ ಸರಬರಾಜಿನ ಖರ್ಚಿನಲ್ಲಿ ಮತ್ತೊಬ್ಬ ಪಾಲು–ಗಾರ ಸಿಕ್ಕನೆಂದು. ಅಷ್ಟು ಖರ್ಚು ನಮಗೆ ಕಡಿಮೆಯಾಗಲಿಲ್ಲವೆ!

ಆದರೆ ಅವನೋ ಆದರ್ಶವಾದಿ ಯುವಕ. ಕೆಲಸ ಮಾಡುವ ಹುರುಪು. ಜಾಣ ಕೂಡ. ಅವನು ತನ್ನ ಕರ್ತವ್ಯವೆಷ್ಟೋ ಅಷ್ಟೇ ಮಾಡಿ ಸಾಹೇಬರು ಬಂದಾಗ ಅವರು ಕೇಳಿದ್ದಕ್ಕಷ್ಟೇ ಉತ್ತರಿಸಿ ಸರಬರಾಜಿನ ವಿಷಯದಲ್ಲಿ ಭಾಗವಹಿಸದೇ ಪಾರಾಗುತ್ತಿದ್ದ. ಎರಡು ಮೂರು ಸಲ ಹೀಗೆ ಮಾಡಿದ. ನಮ್ಮ ಸಾಹೇಬರು ಸೂಕ್ಷ್ಮವಾಗಿ ತಿಳಿದುಕೊಂಡರು. ಹೊಸಬನಿಗೆ ಮೂರು ದಿನಕ್ಕೊಮ್ಮೆ ಮೆಮೊ ಬರಲು ಆರಂಭಿಸಿದವು. 'ಒಲ್ಲದ ಗಂಡನಿಗೆ ಮೊಸರನ್ನದಲ್ಲಿ ಕಲ್ಲು' ಎಂಬಂತೆ ಪ್ರತಿಯೊಂದು ಪತ್ರದಲ್ಲಿಯೂ 'ಶಿಸ್ತುಭಂಗಕ್ಕಾಗಿ ಏಕೆ ಕ್ರಮ ಕೈಕೊಳ್ಳಬಾರದೆಂಬ' ಹೆದರಿಕೆಯ ಜತೆಗೆ ಉತ್ತರವನ್ನು ಮೂರು ದಿವಸದಲ್ಲಿ ಬರೆಯಬೇಕೆಂಬ ಗಟ್ಟಿ ಛಾಪೆ ಬೇರೆ! ಆದರೂ ಆ ಸಹೋದ್ಯೋಗಿ ಹೆದರಲಿಲ್ಲ. ಆ ವರ್ಷಾಂತ್ಯದ ಗುಪ್ತ ವರದಿಯಲ್ಲಿ bad remark ಬಂದಾಗ ಮಾತ್ರ ಅವನು ನಮ್ಮ ಹಾದಿಗೇನೇ ಬಂದನೆಂದು ಬೇರೆ ಹೇಳಬೇಕಾಗಿಲ್ಲ...!

## ಬೇಸ್ತು!

ಇಂಥ ಅನೇಕ ಸಾಹೇಬರುಗಳನ್ನು ನೋಡಿದ ನಾವು ಸಾಹೇಬರ ಮರ್ಜಿ ಕಾಯುವಲ್ಲಿ, ಪರಿಣಿತರಾಗಿದ್ದೇವೆಂದು ತಿಳಿದಿದ್ದೆವು. ಏಕೆಂದರೆ ನಮಗೆ ಮೆಮೋಗೀಮೋ ಏನೂ ಬರುತ್ತಿರಲಿಲ್ಲ. ಇಂಥದರಲ್ಲಿ ನಮಗೆ ಹೊಸದಾಗಿ ಒಬ್ಬ ಸಾಹೇಬರು ಬಂದರು. ಅವರು ಲೋಕಸೇವಾ ಆಯೋಗದಿಂದ ನೇರವಾಗಿ ನೇಮಕವಾದವರು!

ಅವರು ಬಂದ ಕೂಡಲೇ ಸ್ಪೇಶಲ್ ಚಹದ ವ್ಯವಸ್ಥೆ ಮಾಡಿದೆವು. ಆದರೆ ಅವರು ಚಹಾ ಕಾಫಿ ಏನೂ ತೆಗೆದುಕೊಳ್ಳುವದಿಲ್ಲವೆಂದು ಹೇಳಿದರು. ಮಧ್ಯಾಹ್ನ ಊಟದ ವ್ಯವಸ್ಥೆ ಮಾಡಿದಾಗ ತಮ್ಮ ಊಟದ ಬಿಲ್ಲು ಅವರೇ ಕೊಟ್ಟಾಗ ನಾವು ತತ್ತರಿಸಿದೆವು! ನಮ್ಮ ನಮ್ಮ ಆಫೀಸುಗಳ 'ಇನ್ಸ್‌ಪೆಕ್ಶನ್' ನಡೆದಾಗ ಅವರಿಗೆ ನೂರೆಂಟು ತಪ್ಪುಗಳು ದೊರೆತವು. ಸುಸಂಸ್ಕೃತ ಇಂಗ್ಲೀಷ್ ಭಾಷೆಯಲ್ಲಿ, ಮರ್ಮಭೇದಕ ವಾಕ್ಯಸರಣಿಗಳೊಂದಿಗೆ ನಮಗೆ ಫೈಯರಿಂಗ್, ಸಾಹೇಬರಿಂದ! ನಮ್ಮ ಇಲ್ಲಿಯವರೆಗಿನ ದೊಡ್ಡ ಸಾಹೇಬರುಗಳ ಮರ್ಜಿ ಕಾಯುವ 'ಗತ್ತು'ಗಳು ಇಲ್ಲಿ ನಿಷ್ಫಲವೆನಿಸಿದವು. ಅವರ ರಿಪೋರ್ಟ್ ಬಂದಾಗ ಕೊನೆಯ ೨–೩ ವಾಕ್ಯಗಳು ಈ ರೀತಿ ಇದ್ದವು– ' It is observed that the local staff is more interested in supplying food and tea as in restaurants, to higher authorities. If they show 1/4th of interest in their duty, there will be a lot of improvement in the service condition & department will be benefitted more...' ನಾವು ಬೇಸ್ತು ಬಿದ್ದಿದ್ದೆವು...!

# ಮಹಾಸ್ವಾಮಿ ನೀಡಿದ ಬಳುವಳಿ

**ಜೆ. ಕೆ. ಭೀಮರಾವ್**

**ಮ**ಧ್ಯಾಹ್ನ ಎರಡು ಗಂಟೆಯಾಗಿದ್ದಿರಬೇಕು. ನಾನು ಆಗ ತಾನೇ ಅಂದಿನ ಡ್ಯೂಟಿಯ ಮೇಲೆ ಠಾಣೆಗೆ ಬಂದಿದ್ದೆ. ನಂಜಪ್ಪ ಯುವರಾಜರ ಮನೆಯಿಂದ ಒಬ್ಬ ತರುಣಿಯನ್ನು ಎಳೆದು ತಂದ. "ಈಕೆ ಯುವರಾಜರ ಮನೆಯಲ್ಲೊಂದು ಭಾರಿ ಸೀರೆ ಕಳವು ಮಾಡಿದ್ದಾಳೆ. ಈಕೆಯೇ ಕಳ್ಳಿ ಎಂಬುದರಲ್ಲಿ ನಮಗೆ ಯಾವ ಸಂಶಯವೂ ಇಲ್ಲ. ಆದರೆ ಬಾಯಿ ಬಿಡುತ್ತಿಲ್ಲ. ನೀವೇ ಬಾಯಿ ಬಿಡಿಸಿ, ಸೀರೆ ಮರಳ ಕೊಡಿಸಿ," ಎಂದು ಹೇಳಿ ನಂತರ ಬರುವೆ ಎನ್ನುತ್ತ ಹೋಗಿಬಿಟ್ಟ.

ಅರಮನೆಯ ವಿಷಯ ಎಂದರೆ ಸೂಕ್ಷ್ಮವೇ. ಒಂದು ಹೆಜ್ಜೆ ಮುಂದಿಟ್ಟರೂ ತಪ್ಪು; ಹಿಂದಿಟ್ಟರೂ ತಪ್ಪು. "ಸೀರೆ ಎಲ್ಲಿಟ್ಟಿರುವೆ?" ಎಂದು ಕೇಳಿದ್ದಾಯಿತು. "ಹೇಳದಿದ್ದರೆ ಜೈಲು ಕಂಬಿ ಎಣಿಸಬೇಕಾಗುತ್ತೆ," ಎಂದು ಹೇಳಿದ್ದೂ ಆಯಿತು. ಬಾಯಿ ಬಿಡದಿದ್ದಾಗ ಥರ್ಡ್ ಡಿಗ್ರಿ ವಿಧಾನಗಳೂ ಮುಗಿದವು. ಆದರೂ ಆಕೆ ತನಗೆ ಸೀರೆಯ ವಿಷಯವೇ ತಿಳಿಯದೆಂದು ಪಟ್ಟು ಹಿಡಿದಳು. "ಸ್ವಾಮಿ, ಯಾವ ತಪ್ಪೂ ಮಾಡ್ದೇ ಸತ್ಯವಾಗಿ ದುಡೀತಿರೋ ನಂಗೆ ಇವ್ರು ಕೊಡೋ ಬಳುವಳಿ ಇದೇನಾ?" ಎಂದಳು ಅಳುತ್ತ.

ತಾಸೆರಡು ತಾಸು ಕಳೆದಿರಬೇಕು. ನಂಜಪ್ಪ ಬಂದವನೇ, "ಕಳೆದುಹೋದ ಸೀರೆ ಸಿಕ್ಕಿದೆ. ಲಕ್ಷ್ಮೀನ ಬಿಟ್ಬಿಡಿ," ಎಂದ. ಬಿಟ್ಟೆ.

ಹೊತ್ತು ಕಂತಿದ ಮೇಲೆ ಮನೆಗೆ ಹೊರಟಿದ್ದ ನಂಜಪ್ಪನನ್ನು ಸೀರೆಯ ವಿಷಯ ಕೇಳಿದೆ. ಆತ ಒಮ್ಮೆ ನಕ್ಕು, ಹೇಳತೊಡಗಿದ:

ಆಕೆ ಬಡ ಹುಡುಗಿ. ನಿಂಗಿ ಎಂದು ಆಕೆಯ ಹೆಸರು. ಅರಮನೆ ಚಾಕರಿಗೆ ನಿಂತ ಮೇಲೆ ಲಕ್ಷ್ಮಿ ಎಂದು ಆಕೆಯನ್ನು ಕರೆಯತೊಡಗಿದರು. ಯಾರೋ ಲಕ್ಷ್ಮಿಗೆ ಹೇಳಿದ್ದರಂತೆ, ಅರಮನೆಯಲ್ಲಿ ಆಗಾಗ ಬಳುವಳಿ ಕೊಡುತ್ತಾರೆ ಎಂದು. ಆಗ ಸಿಕ್ಕೀತು, ಈಗ ಸಿಕ್ಕೀತು ಎಂದು ಲಕ್ಷ್ಮಿ ಹಾತೊರೆಯುತ್ತಿದ್ದಳು.

ಒಮ್ಮೆ ಮದರಾಸಿನಿಂದ ಒಬ್ಬ ಸೇಠಜಿ ಯುವರಾಣಿಯವರಿಗೆ ತೋರಿಸಿ ಮಾರುವುದಕ್ಕಾಗಿ ಜರಿ ಅಂಚಿನ ಸೀರೆಗಳನ್ನು ತಂದಿದ್ದ. ಅವುಗಳನ್ನು ನೋಡಿದ ಯುವರಾಣಿಯವರು, "ಇವನ್ನು ಇಲ್ಲಿಯೇ ಇಟ್ಟು ಹೋಗಿ, ಒಂದು ವಾರದ ಮೇಲೆ ಬನ್ನಿ. ಬೇಕಾದ್ದು ಇಟ್ಟುಕೊಂಡು ಅದರ ಹಣ ಕೊಡುತ್ತೇವೆ" ಎಂದರು. ಕೊನೆಯ ಮಗಳು ಲಕ್ಷ್ಮಮ್ಮಣ್ಣಿಯವರ ಕೋಣೆಯಲ್ಲಿ ಸೇಠಜಿ ಸೀರೆಗಳನ್ನು ಇಟ್ಟು ಹೋದರು. ಲಕ್ಷ್ಮಿಯು ಲಕ್ಷ್ಮಣ್ಣಿಯವರ ಕೆಲಸದವಳು. ಆ ಸೀರೆಗಳನ್ನು ಆಗಾಗ್ಗೆ ತೆಗೆದು ಮನೆಯವರಿಗೆ ತೋರಿಸುತ್ತಿದ್ದಳು. ಒಂದು ದಿನ ಲಕ್ಷ್ಮಣ್ಣಿಯ ಅಕ್ಕ ಚಾಮುಂಡಮ್ಮಣ್ಣಿ ತಂಗಿಯ ಕೋಣೆಯ ಎದುರಿಗೆ ಹೋಗುತ್ತಿದ್ದರು. ರೂಮಿನ ಬಾಗಿಲು ಸರಿದಿತ್ತು. ಸೀರೆಗಳು ಕಾಣುತ್ತಿದ್ದವು. ತಮಗೆ ತುಂಬಾ ಒಪ್ಪಿದ ಸೀರೆಯನ್ನು ತಮ್ಮ ರೂಮಿಗೆ ತೆಗೆದುಕೊಂಡು ಹೋದರು. ಮೈಮೇಲೆ ಅದನ್ನು ಹಾಕಿಕೊಂಡು ನಿಲುವುಗನ್ನಡಿಯಲ್ಲಿ ನೋಡಿದರು. ಅವರ ಬಣ್ಣಕ್ಕೆ ಅದು ಚನ್ನಾಗಿ ಒಪ್ಪುತ್ತಿತ್ತು. ಅವರಿಗೆ ಅದನ್ನು ತಮ್ಮ ಸ್ನೇಹಿತೆ ಕಮಲಾಗೆ ತೋರಿಸಿ ಒಪ್ಪಿಗೆಯಾದರೆ ಕೊಳ್ಳೋಣವೆನಿಸಿತು. ಅಷ್ಟು ಹೊತ್ತಿಗೆ ಪಿಯಾನೊ ಕ್ಲಾಸಿಗೆ ಹೋಗುವ ಹೊತ್ತಾದುದರಿಂದ ಸೀರೆಯನ್ನು ಬೀರುವಿನಲ್ಲಿ ಇಟ್ಟು ಹೊರಟುಹೋದ ಆಕೆಗೆ ಆ ವಿಷಯ

ಮರೆತುಹೋಯಿತು. ಸೇಠಜಿ ಬಂದಾಗ ಎಣಿಸಿ ನೋಡಿದರೆ ಒಂದು ಸೀರೆ ಕಡಿಮೆ ಇರುವುದು ತಿಳಿಯಿತು.

ಒಂದು ವಾರದ ಮೇಲೆ ಚಾಮುಂಡಮ್ಮಣ್ಣಿ ಇಂಗ್ಲೀಷು ಕ್ಲಾಸಿಗೆ ಹೋಗಿದ್ದವರು ವಾಪಸ್ಸು ಬಂದರು. ಅರಮನೆಯಲ್ಲಿ ಗುಲ್ಲೋ ಗುಲ್ಲು. ಚಾಮುಂಡಮ್ಮಣ್ಣಿ ತಮ್ಮ ಸೇವಕಿ ನೀಲಮ್ಮನನ್ನು ವಿಚಾರಿಸಿದರು. ಸೀರೆ ಕಳುವಾಗಿರುವುದೂ ಲಕ್ಷ್ಮಿಯನ್ನು ಪೋಲೀಸರಿಗೆ ಕೊಟ್ಟಿರುವುದೂ ಅವರಿಗೆ ತಿಳಿಯಿತು. ತಾನು ಸೀರೆ ತಂದು ಬೀರುವಿನಲ್ಲಿಟ್ಟದ್ದು ತಕ್ಷಣ ಅವರಿಗೆ ಜ್ಞಾಪಕಕ್ಕೆ ಬಂತು. ವಾಪಸ್ಸು ಅದರ ಜಾಗಕ್ಕೆ ಸೇರಿಸಿ, ನಂಜಪ್ಪನಿಗೆ ಪೋಲೀಸರಿಂದ ಲಕ್ಷ್ಮಿಯನ್ನು ಬಿಡಿಸಿಕೊಂಡು ಬರುವಂತೆ ಹೇಳಿದರು. ಲಕ್ಷ್ಮಿ ವಾಪಸ್ಸು ಬಂದಳು.

ಸಾಯಂಕಾಲ ಎಂದಿನಂತೆ ಮಹಾರಾಜರು ಅವರ ತಾಯಿಯವರ ಮನೆಗೆ ಬಂದರು. ಹೊರಗಡೆಯ ತೋಟದಲ್ಲಿ ದುಂಡು ಮೇಜಿನ ಸುತ್ತ ಟೀ ಕುಡಿಯುವುದಕ್ಕೆ ಕುಳಿತರು. ಅವರ ತಾಯಿ ಮತ್ತು ತಂಗಿಯರು ಅವರೊಡನೆ ಟೀಗೆ ಸೇರಿದರು. ಲಕ್ಷ್ಮಿ ಎಲ್ಲರಿಗೂ ಟೀ ಮತ್ತು ಬಿಸ್ಕತ್ತುಗಳನ್ನು ತಟ್ಟೆಗಳಲ್ಲಿ ಕೊಟ್ಟಳು. ಟೀ ಮುಗಿದ ಮೇಲೆ ಮಹಾರಾಜರು ಅವರ ತಾಯಿ ಮತ್ತು ತಂಗಿಯರೊಡನೆ ಆ ಮಾತು ಈ ಮಾತು ಆಡುತ್ತಾ ಒಂದು ಸಲ ಲಕ್ಷ್ಮಿಯ ಮುಖ ನೋಡಿ, "ಯಾಕೆ ಸಪ್ಪಗಾಗಿದ್ದಿ ಲಕ್ಷ್ಮಿ?" ಎಂದು ಕೇಳಿದರು. ಕೇಳಿದ್ದೇ ತಡ ಲಕ್ಷ್ಮಿಯ ಕಣ್ಣುಗಳಿಂದ ಧಾರಾಕಾರವಾಗಿ ನೀರು ಹರಿಯಿತು. ನೆಲದ ಮೇಲೆ ಮೊಣಕಾಲೂರಿ ಲಕ್ಷ್ಮಿ, "ಮಾಸೋಮಿ, ಅಪ್ಪಣೆ ಆದರೆ ಹೇಳುತ್ತೇನೆ" ಎಂದಳು. ಮಹಾರಾಜರೆಂದರು: "ಹೇಳು ಲಕ್ಷ್ಮಿ, ಹೆದರಬೇಡ." "ಮಾಸೋಮಿ ನಾವು ಬಡವರು; ಆದರೆ ಕಳ್ಳರಲ್ಲ. ನನ್ನನ್ನು ಕಳ್ಳಿ ಎಂದು ಪೋಲೀಸರಿಗೆ ಕೊಟ್ಟರು. ಪೋಲೀಸಿನವರು ನನ್ನ ಸೀರೆ ಕುಪ್ಪಸ ಬಿಚ್ಚಿ ಮೈಯೆಲ್ಲಾ ಮುಟ್ಟಿದರು," ಎಂದು ಹೇಳಿದಳು.

ಮಹಾರಾಜರು ಕೋಪಗೊಂಡು ಯಾರ ಮೇಲೆ ಏನು ಕ್ರಮ ತೆಗೆದುಕೊಳ್ಳುವರೋ ಎಂದು ಅಲ್ಲಿದ್ದವರೆಲ್ಲಾ ದಿಗ್ಭ್ರಾಂತರಾದರು. ನಡೆದ ವಿಷಯವನ್ನು ತಮ್ಮ ತಾಯಿಯಿಂದ ತಿಳಿದುಕೊಂಡ ಮಹಾರಾಜರು, "ಲಕ್ಷ್ಮೀ ಪೋಲೀಸಿನವರು ಕೆಟ್ಟವರಮ್ಮ, ಆದರೆ ಸರಿಯಾಗಿ ವಿಚಾರಮಾಡದೆ ನಿನ್ನನ್ನು ಪೋಲೀಸರಿಗೆ ಕೊಟ್ಟದ್ದು, ಚಾಮುಂಡಮ್ಮಣ್ಣಿ ಸೀರೆಯನ್ನು ಯಾರಿಗೂ ಹೇಳದೆ ತೆಗೆದುಕೊಂಡು ಹೋಗಿ ತನ್ನ ರೂಮಿನಲ್ಲಿಟ್ಟುಕೊಂಡದ್ದರಿಂದ. ಆ ತಪ್ಪಿಗಾಗಿ ಚಾಮುಂಡಮ್ಮಣ್ಣಿ ಹತ್ತು ರೂಪಾಯಿ ನಿನಗೆ ಕೊಡಬೇಕು" ಎಂದರು. ಚಾಮುಂಡಮ್ಮಣ್ಣಿ ಹಾಗೇ ಮಾಡಿದಳು.

ಕೆಲವು ದಿವಸಗಳ ಮೇಲೆ ನಾನು ಠಾಣೆಯ ಮುಂದೆ ನಿಂತಿದ್ದೆ. ಲಕ್ಷ್ಮಿ ಎದುರು ರಸ್ತೆಯಲ್ಲಿ ಹೋಗುತ್ತಿದ್ದಳು. ನನ್ನ ಕಡೆ ನೋಡಿ ಮುಗುಳ್ನಗೆ ನಕ್ಕು, "ನಿನ್ನಿಂದಲೇ ನನಗೆ ಬಳುವಳಿ ಸಿಕ್ಕಿತು" ಎಂಬಂತೆ ಕಣ್ಸನ್ನೆಯಿಂದ ಹೇಳಿ ಹೊರಟು ಹೋದಳು. ✡



ವಯಸ್ಸು ಹೆಚ್ಚುತ್ತಿದ್ದರೂ ಇನ್ನೂ ಚಿಕ್ಕವರಾಗೇ ಇರಬೇಕೆಂದು ಬಯಸುವ ಹೆಂಗಸರಿಗೊಂದು ಸಲಹೆ. ನೀವು ಇಥಿಯೋಪಿಯದ ರಾಜಧಾನಿ ಅಡಿಸ್ ಅಬಬಾಕ್ಕೆ ಭೇಟಿಕೊಡಿ. ಆ ಊರಿನಲ್ಲಿ ಕಾಲಿರಿಸುತ್ತಿದ್ದಂತೆಯೇ ನೀವು ನಿಮ್ಮ ವಯಸ್ಸಿಗಿಂತ ಏಳು ವರ್ಷ ಎಂಟು ತಿಂಗಳುಗಳಷ್ಟು ಸಣ್ಣವರಾಗಿ ಬಿಡುತ್ತೀರಿ. ಇದಕ್ಕೆ ಕಾರಣ ಅಲ್ಲಿನವರು ಬಳಸುವ ಸ್ಥಾನಿಕ ಜೂಲಿಯನ್ ಪಂಚಾಂಗ.

ಪುಸ್ತಕ ವಿಭಾಗ

# ಸೊಲೊಮನ್ನ ರಹಸ್ಯನಿಧಿ

ಆಂಗ್ಲಮೂಲ: ಸರ್ ಹೆಚ್. ರೈಡರ್ ಹಗ್ಗಾರ್ಡ್

ಕನ್ನಡಕ್ಕೆ: ಕೇಶವ ಎಸ್. ವಟಿ.

# ಸೊಲೊಮನ್ನನ ರಹಸ್ಯನಿಧಿ

(ಹಿಂದಿನ ಸಂಚಿಕೆಯಿಂದ ಮುಂದುವರಿದದ್ದು)

ಗುಡಿಸಿಲಿನಲ್ಲಿ ಕುಳಿತ ನಂತರ ಸರ್ ಹೆನ್ರಿ ನುಡಿದರು: 'ಅಂಬೋಪಾ ನೀನು ಅದೃಷ್ಟವಂತ. ನಿನ್ನ ದೇಹದಲ್ಲೊಂದು ರಂಧ್ರವಾಗುವುದು ತಪ್ಪಿತು.'

'ನಾನು ಕೃತಜ್ಞನಾಗಿದ್ದೇನೆ. ಇದನ್ನೆಂದಿಗೂ ಮರೆಯಲಾರೆ' ಅಂಬೋಪಾ ಉತ್ತರಿಸಿದ.

## ೧೧

### ಕುರುಹು

ಮುಂಜಾನೆಯ ವೇಳೆಗೆ ಇನ್‌ಫ್ಯಾಡೂಸ್ ಆರು ಜನ ಮುಖ್ಯಸ್ಥರೊಡನೆ ಆಗಮಿಸಿದ.

'ನನ್ನ ಒಡೆಯರೆ, ಹಾಗೂ ಕುಕುವಾನಾದ ರಾಜ ಇಗ್ನೋಸಿಯೆ, ನನ್ನೊಡನೆ ಈ ಮುಖ್ಯಸ್ಥರನ್ನು ಕರೆತಂದಿರುವೆ. ಇವರು ಒಬ್ಬೊಬ್ಬರೂ ಮೂರು ಸಾವಿರ ಸೈನಿಕರಿಗೆ ಒಡೆಯರು. ಅವರಿಗೆ ನಿನ್ನ ದೇಹದ ಮೇಲಿನ ಚಿತ್ರವನ್ನು ತೋರಿಸು. ನಿನ್ನ ಕಥೆ ಹೇಳು. ನಂತರ ಅವರು ನಿನ್ನೊಡನೆ ಸೇರುವ ನಿರ್ಧಾರ ಕೈಗೊಳ್ಳಲಿ.'

ಇಗ್ನೋಸಿ ಬಟ್ಟೆ ಬಿಚ್ಚಿದ. ಪ್ರತಿಯೊಬ್ಬ ಮುಖ್ಯಸ್ಥನೂ ಮಂದ ಬೆಳಕಿನಲ್ಲಿ ಅದನ್ನು ಪರಿಶೀಲಿಸಿದ.

ಇಗ್ನೋಸಿ ಬಟ್ಟೆ ಧರಿಸಿ ತನ್ನ ಕಥೆ ಹೇಳಿದ;

'ನೀವೀಗ ಕಥೆ ಕೇಳಿದಿರಿ. ಈತ ರಾಜನಾಗಲು ಸಹಾಯ ಮಾಡುವಿರಾ? ಈ ಸಲ ಟ್ವಾಲಾನ ವಿರುದ್ಧ ಸೊಲ್ಲೆತ್ತಿದೆ. ಇಲ್ಲಿ ಜನರ ರಕ್ತ ನೀರಿನಂತೆ ಹರಿಯುತ್ತಿದೆ.'

ಆ ಜನರಲ್ಲಿ ಒಬ್ಬ ಮುಂದೆ ಬಂದು ನುಡಿದ:

'ನಿನ್ನ ಮಾತು ನಿಜ. ನೆಲ ಕೂಗುತ್ತಿದೆ. ನಿನ್ನೆ ರಾತ್ರಿ ಸತ್ತವರಲ್ಲಿ ನನ್ನ ಸೋದರನೂ ಇದ್ದ. ಕೆಲವರು ಟ್ವಾಲಾನ ಬೆಂಬಲಕ್ಕಿದ್ದಾರೆ. ಏಕೆಂದರೆ ಮಾನವ ಹುಟ್ಟಿದ ಸೂರ್ಯನಿಗಿಂತ ಪ್ರಜ್ವಲಿಸುವ ಸೂರ್ಯನಿಗೆ ತಲೆವಾಗುತ್ತಾನೆ. ಈ ಬಿಳಿಯರು ಅದ್ಭುತ ಮಂತ್ರಶಕ್ತಿ ಹೊಂದಿದ್ದಾರೆ. ಅವರ ರಕ್ಷಣೆ ಇಗ್ನೋಸಿಗಿದೆ. ಜನರಿಗೆಲ್ಲಾ ಒಂದು ಕುರುಹು ಕೊಡಿರಿ. ಆಗ ಜನರು ಇವನ ಪಕ್ಷಕ್ಕೆ ನಿಲ್ಲುತ್ತಾರೆ.'

ಉಳಿದ ಐವರು ಒಪ್ಪಿದರು.

'ನೀವು ಮೃಗದ ಚಿತ್ರದ ಕುರುಹನ್ನು ನೋಡಿದಿರಲ್ಲ?' ನಾನೆಂದೆ.

'ಅದು ಸಾಲದು. ನಮಗೆ ಬೇರೆ ಕುರುಹು ತೋರಿಸಿ. ಇಲ್ಲದಿದ್ದರೆ ನಾವು ಮುಂದುವರೆಯಲಾರೆವು.'

ಸರ್ ಹೆನ್ರಿ ಮತ್ತು ಗುಡ್‌ರತ್ತ ತಿರುಗಿ ಆ ವಿಷಯ ಹೇಳಿದೆ. ಗುಡ್ ತಮ್ಮೊಡನೆ ತಂದಿದ್ದ ಪೆಟ್ಟಿಗೆಯಿಂದ ಮುದ್ರಿತ ಪುಸ್ತಕವೊಂದನ್ನು ತೆಗೆದರು. 'ನಾಳೆ ಜೂನ್ ನಾಲ್ಕು ಅಲ್ಲವೆ?'

ನಾವು 'ಹೌದು' ಎಂದೆವು.

'ಜೂನ್ ನಾಲ್ಕರಂದು ಖಗ್ರಾಸ ಚಂದ್ರಗ್ರಹಣವಿದೆ. ಗ್ರಹಣ ಎಂಟೂಕಾಲಿಗೆ ಗ್ರೀನಿಚ್ಚಿನಲ್ಲಿ ಪ್ರಾರಂಭವಾಗುತ್ತದೆ. ಅದು ದಕ್ಷಿಣ ಆಫ್ರಿಕದಲ್ಲೂ ಕಾಣುತ್ತದೆ. ಅವರಿಗೆ ಕುರುಹು ಹೇಳಿ.

ನಾಳೆ ನಾವು ಚಂದ್ರನನ್ನು ಮರೆ ಮಾಡುತ್ತೇವೆ.'

ನಾನು ಕುಕುವಾನಾ ಮುಖ್ಯಸ್ಥರಿಗೆ ಹೇಳಿದೆ. 'ಕುಕುವಾನಾದ ದೊಡ್ಡ ಮನುಷ್ಯರೆ. ನಾವು ನಮ್ಮ ಶಕ್ತಿಯನ್ನು ಮೆರೆಸಲು ಇಚ್ಛಿಸುವುದಿಲ್ಲ. ಆದರೆ ನಾವು ರಾಜನ ವಿರುದ್ಧ ಕೋಪಗೊಂಡಿದ್ದೇವೆ. ಆದ್ದರಿಂದ ಜನರೆಲ್ಲರೂ ನೋಡುವಂತೆ ಕುರುಹು ತೋರಿಸುತ್ತೇವೆ.'

ನಾನು ಅವರನ್ನು ಬಾಗಿಲ ಬಳಿ ಕರೆದೊಯ್ದು ಮುಳುಗುತ್ತಿದ್ದ ಚಂದ್ರನನ್ನು ತೋರಿಸಿ ಕೇಳಿದೆ: 'ಅದು ಏನು?'

'ಅದು ಮುಳುಗುತ್ತಿರುವ ಚಂದ್ರ.'

'ನಾಳೆ ಮಧ್ಯರಾತ್ರಿಯಾಗುವುದಕ್ಕೆ ಎರಡು ಘಂಟೆ ಮುಂಚೆ ನಾವು ಚಂದ್ರನನ್ನು ಮರೆ ಮಾಡುತ್ತೇವೆ. ಇಡೀ ಭೂಮಿಯ ಮೇಲೆ ಕತ್ತಲಾಗುತ್ತದೆ. ನಿಮಗೆ ಈ ಕುರುಹು ತೋರಿಸಿದರೆ ತೃಪ್ತಿಯಾಗುತ್ತದೆಯೆ?'

'ಖಂಡಿತ ಸೂರ್ಯಾಸ್ತದ ಎರಡು ಘಂಟೆಯ ನಂತರ ಟ್ವಾಲಾ ನರ್ತನವೊಂದಕ್ಕೆ ಹೇಳಿ ಕಳಿಸುತ್ತಾನೆ. ಆ ಬೆಟ್ಟಗಳ ಮೇಲೆ ಕುಳಿತು ನಗರವನ್ನು ಕಾಯುವ ಸ್ತಬ್ಧ ಮೂರ್ತಿಗಳ ಅಂದರೆ ಕಲ್ಲು ದೇವರ ತೃಪ್ತಿಗಾಗಿ ಸ್ಕ್ರಾಗ್ಗಾನು ಕೊಲ್ಲುವ ಸುಂದರ ಹುಡುಗಿಯ ನರ್ತನವಿದೆ. ಆಗ ಚಂದ್ರನನ್ನು ಮರೆ ಮಾಡಿ, ಆ ಹುಡುಗಿಯ ಪ್ರಾಣ ಉಳಿಸಿ.'

ಇನ್‌ಫ್ಯಾಡೂಸ್ ಹೇಳಿದ: 'ಲೂನಿಂದ ಎರಡು ಮೈಲಿ ಆಚೆ ಚಂದ್ರಾಕೃತಿಯ ಬೆಟ್ಟವಿದೆ. ನನ್ನ ಹಾಗೂ ಈ ಮುಖ್ಯಸ್ಥರ ಸೈನ್ಯಗಳು ಅಲ್ಲಿರುತ್ತವೆ. ಚಂದ್ರನನ್ನು ಕತ್ತಲು ಮಾಡಿದ ನಂತರ ನಿಮ್ಮನ್ನು ಅಲ್ಲಿಗೆ ಕರೆದೊಯ್ಯುವೆ. ನೀವು ಅಲ್ಲಿ ಕ್ಷೇಮವಾಗಿರುವಿರಿ. ನಂತರ ಅಲ್ಲಿಂದಲೇ ಟ್ವಾಲಾನ ಮೇಲೆ ಯುದ್ಧವನ್ನು ನಿರ್ಧರಿಸಬಹುದು.'

'ಸರಿ. ನಮ್ಮನ್ನೀಗ ಮಲಗಲು ಬಿಡಿ,' ಎಂದೆ. ಎಲ್ಲರೂ ತೆರಳಿದರು.

ಮರುಹಗಲನ್ನು ಕಳೆದೆವು. ರಾತ್ರಿ ಎಂಟೂವರೆಯ ವೇಳೆಗೆ ಹುಡುಗಿಯರ ವಾರ್ಷಿಕ ನೃತ್ಯಕ್ಕೆ ಕರೆ ಬಂತು.

ನಾವು ಯುದ್ಧಕವಚವನ್ನು ತೊಟ್ಟು ಪಿಸ್ತೂಲನ್ನು ತೆಗೆದುಕೊಂಡು ಹೋದೆವು. ರಾಜಾಸ್ಥಾನ ಹಿಂದಿಗಿಂತ ಬೇರೆಯಾಗಿ ಕಾಣಿಸಿತು. ಸೈನಿಕರ ಬದಲು ಕುಕುವಾನ ತರುಣಿಯರ ತಂಡ ಕಾಣಿಸಿತು. ಪ್ರತಿ ಹುಡುಗಿಯೂ ಹೂವಿನ ಕಿರೀಟ ಧರಿಸಿದ್ದಳು. ಒಂದು ಕೈಯಲ್ಲಿ ದೊಡ್ಡ ಎಲೆಯೊಂದನ್ನು. ಇನ್ನೊಂದರಲ್ಲಿ ಬಿಳಿಯ ಹೂವನ್ನು ಹಿಡಿದಿದ್ದಳು. ಮಧ್ಯ ಭಾಗದಲ್ಲಿ ಟ್ವಾಲಾ ಕುಳಿತಿದ್ದ. ಅವನ ಕಾಲಿನ ಬಳಿ ಗಗೂಲ್ ಕುಳಿತಿದ್ದಳು. ಅತನ ಹಿಂದೆ ಸ್ಕ್ರಾಗ್ಗಾ, ಇನ್‌ಫ್ಯಾಡೂಸ್ ನಿಂತಿದ್ದರು. ಅವನ ಹಿಂದೆ ಕೆಲವು ರಕ್ಷಕರು ನಿಂತಿದ್ದರು. ಅವರಲ್ಲಿ ಕೆಲವರು ರಾತ್ರಿ ನಮ್ಮ ಬಳಿ ಬಂದಿದ್ದವರು.

ಟ್ವಾಲಾ ಸ್ವಾಗತಿಸಿದ. ಅಂಬೋಪಾನನ್ನು ಹೆದರಿಕೆಯಿಂದ ನೋಡಿದ.

'ಸ್ವಾಗತ. ಓ ಕಪ್ಪು ಬಣ್ಣದವನೆ, ನಿನಗೂ ಸ್ವಾಗತ. ಗಗೂಲ್ ಮತ್ತೆ ತನ್ನ ಮಾತನ್ನು ಹೇಳಿದರೆ ನಿನ್ನನ್ನು ಕೊಲ್ಲುವೆ.'

'ನೀನು ನನ್ನನ್ನು ಕೊಲ್ಲುವ ಮೊದಲು ನಾನು ನಿನ್ನನ್ನು ಕೊಲ್ಲುವೆ. ನನ್ನನ್ನು ಬಂಧಿಸುವ ವೇಳೆಗೆ ನೀನು ಸಾಯುವೆ,' ಅಂಬೋಪಾ ನುಡಿದ.

'ಬಹಳ ಧೈರ್ಯದಿಂದ ಮಾತಾಡುವೆ. ಅಷ್ಟೊಂದು ಧೈರ್ಯ ಬೇಡ... ನೃತ್ಯ ಪ್ರಾರಂಭವಾಗುತ್ತದೆ,' ಟ್ವಾಲಾ ಕೋಪದಿಂದ ನುಡಿದ.

ಸಮೂಹ ನೃತ್ಯ ಮುಗಿದ ನಂತರ ಸುಂದರ ಯುವತಿಯೊಬ್ಬಳು ನಮ್ಮೆದುರು ನರ್ತಿಸಿದಳು. ಅವಳ ನಂತರ ಇನ್ನೊಬ್ಬಳು, ನಂತರ ಇನ್ನೊಬ್ಬಳು, ನಂತರ ಇನ್ನೊಬ್ಬಳು, ಆದರೆ ಯಾರೂ ಮೊದಲಿನವಳಷ್ಟು ಸುಂದರಿಯಾಗಿರಲಿಲ್ಲ.

ಆಯ್ದ ಹುಡುಗಿಯರ ನರ್ತನ ಮುಗಿದ ನಂತರ ರಾಜ ತನ್ನ ಭರ್ಚಿ ಮೇಲೆತ್ತಿದ.

'ಬಿಳಿಯರೆ ಯಾರು ಅತ್ಯಂತ ಸುಂದರಿ ಎಂದು ಭಾವಿಸುವಿರಿ?'

'ಮೊದಲನೆಯವಳು,' ಎಂದೆ. ನಂತರ ಅತ್ಯಂತ ಸುಂದರ ಯುವತಿಯು ಕೊಲೆಯಾಗುತ್ತದೆಂದು ಇನ್‌ಫ್ಯಾಡೂಸ್ ಹೇಳಿದ್ದು ನೆನಪಾಯಿತು.

'ನಿಮ್ಮ ಮನಸ್ಸು ನನ್ನ ಮನಸ್ಸಿನಂತೆ, ನಿಮ್ಮ ಕಣ್ಣು ನನ್ನ ಕಣ್ಣಿನಂತೆ ಅವಳೇ ಸುಂದರಿ. ಅವಳೀಗ ಸಾಯಬೇಕು.'

'ಅವಳು ಸಾಯಬೇಕು,' ಗಗೂಲ್ ಕೂಗಿದಳು.

'ರಾಜ, ಅವಳೇಕೆ ಸಾಯಬೇಕು?' ನನ್ನ ಕೋಪವನ್ನು ಅಡಗಿಸಿಕೊಂಡು ಕೇಳಿದೆ.

ಟ್ವಾಲಾ ನಕ್ಕುಬಿಟ್ಟ. 'ಅದು ನಮ್ಮ ಪದ್ಧತಿ. ಅದರಿಂದ ದೇವರಿಗೆ ಸಂತಸವಾಗುತ್ತದೆ. ಇಲ್ಲವಾದರೆ ನಮಗೆ ತೊಂದರೆ. ಅವಳನ್ನಿಲ್ಲಿ ತನ್ನಿ. ಸ್ಕ್ರಾಗ್ಗಾ ನಿನ್ನ ಈಟಿಯನ್ನು ಚೂಪು ಮಾಡಿಕೊ.'

ಇಬ್ಬರು ಮುಂದೆ ಬಂದರು. ಆ ಹುಡುಗಿ ಚೀರಿ ಓಡಲು ಯತ್ನಿಸಿದಾಗ ಅವರು ಅವಳನ್ನು ಎಳೆದು ತಂದು ನಿಲ್ಲಿಸಿದರು.

'ನಿನ್ನ ಹೆಸರೇನು? ಮಾತಾಡುವುದಿಲ್ಲವೆ? ರಾಜಕುಮಾರ ತನ್ನ ಕೆಲಸ ಮಾಡಬೇಕೆ?'

ಸ್ಕ್ರಾಗ್ಗಾ ತನ್ನ ಭರ್ಜಿ ಎತ್ತಿ ಮುಂದೆ ಬಂದ. ಗುಡ್ ತಮ್ಮ ಪಿಸ್ತೂಲನ್ನು ಎತ್ತಿಕೊಂಡರು.

'ನನ್ನ ಹೆಸರು ಫೌಲಟಾ. ನಾನೇಕೆ ಸಾಯಬೇಕು? ನಾನೇನೂ ತಪ್ಪು ಮಾಡಿಲ್ಲ.'

ಗಗೂಲ್ ತಿರಸ್ಕಾರದ ಕ್ರೂರ ನಗು ನಕ್ಕು ನುಡಿದಳು: 'ಸಮಾಧಾನ ಮಾಡಿಕೋ. ದೇವರ ತೃಪ್ತಿಗಾಗಿ ನೀನು ಸಾಯಬೇಕು. ಬದುಕುವುದಕ್ಕಿಂತ ಸಾಯುವುದು ಒಳ್ಳೆಯದು. ನೀನು ರಾಜಕುಮಾರನ ಕೈಯಲ್ಲಿ ಸಾಯುವೆ.'

ಗುಡ್ ಕೋಪದಿಂದ ಕೂಗಿ ಮೇಲೆದ್ದರು. ಆ ಹುಡುಗಿ ಆರ್ತಳಾಗಿ ಕೂಗಿದಳು:

'ಓ ಬಿಳಿಯ ತಂದೆಯೆ ಕಾಪಾಡು.'

'ನಾನು ನಿನ್ನನ್ನು ರಕ್ಷಿಸುವೆ ಬಾ,' ಎನ್ನುತ್ತಾ ಗುಡ್ ಅವಳ ಕೈ ಹಿಡಿದರು.

ಟ್ವಾಲಾ ತನ್ನ ಮಗನತ್ತ ತಿರುಗಿ ಏನೋ ಆಜ್ಞೆ ಮಾಡಿದ. ಆತ ತನ್ನ ಭರ್ಜಿಯೊಡನೆ ನಮ್ಮತ್ತ ಬಂದ.

ನಾನು ಆ ಹುಡುಗಿ ಹಾಗೂ ಸ್ಕ್ರಾಗ್ಗಾನ ನಡುವೆ ನಿಂತು ಹೇಳಿದೆ:

'ರಾಜ. ಇದು ಸಾಧ್ಯವಿಲ್ಲ.'

'ಸಾಧ್ಯವಿಲ್ಲವೆ? ಸೈನಿಕರೆ ಅವರನ್ನು ಬಂಧಿಸಿ.'

ಸೈನಿಕರು ನಮ್ಮತ್ತ ನುಗ್ಗಿದರು. ಸರ್ ಹೆನ್ರಿ ಮತ್ತು ಅಂಬೋಪಾ ನನ್ನ ಅಕ್ಕಪಕ್ಕ ನಿಂತರು.

'ನಿಲ್ಲಿ. ನಾವು ನಕ್ಷತ್ರದಿಂದ ಬಂದವರು. ನೀವೊಂದು ಹೆಜ್ಜೆ ಮುಂದಿಟ್ಟರೆ ನಾವು ಚಂದ್ರನನ್ನು ಮರೆ ಮಾಡುತ್ತೇವೆ. ಇಡೀ ಪ್ರದೇಶ ಕತ್ತಲೆಯಿಂದ ತುಂಬುತ್ತದೆ. ಬೇಕಾದರೆ ನಮ್ಮ ಶಕ್ತಿಯನ್ನು ಪರೀಕ್ಷಿಸಿ,' ನಾನೆಂದೆ.

ಅವನ ಮಾತು ಕೇಳಿ, ಚಂದ್ರನನ್ನು ದೀಪದಂತೆ ಮರೆ ಮಾಡುತ್ತಾನಂತೆ. ಹಾಗೆ ಮಾಡಲಿ, ಅಥವಾ ಈ ಹುಡುಗಿಯೊಡನೆ ಸಾಯಲಿ,' ಗಗೂಲ್ ನುಡಿದಳು.

ನಾನು ಚಂದ್ರನನ್ನು ನೋಡಿದೆ. ಹರ್ಷವಾಯಿತು. ಆಗಲೇ ಗ್ರಹಣ ಪ್ರಾರಂಭವಾಗಿತ್ತು.

ನಾನು ನನ್ನ ಕೈಗಳನ್ನು ಮೇಲೆತ್ತಿ ಇಂಗ್ಲಿಷ್ ಪದ್ಯದ ಕೆಲವು ಸಾಲುಗಳನ್ನು ಹೇಳಿದೆ. ಸರ್ ಹೆನ್ರಿ ಇನ್ನಷ್ಟು ಸಾಲುಗಳನ್ನು ಹೇಳಿದರು. ನೆರಳು ಉಜ್ವಲ ಚಂದ್ರನ ಮೇಲೆ ಮುಂದುವರೆಯಿತು. ಜನಸಮೂಹ ನೆಟ್ಟ ದೃಷ್ಟಿಯಿಂದ ನೋಡುತ್ತಿತ್ತು. ಚಂದ್ರನ ಅರ್ಧಭಾಗ ಮುಚ್ಚಿಕೊಂಡಿತು.

'ಚಂದ್ರ ಸಾಯುತ್ತಿದ್ದಾನೆ. ಬಿಳಿಯ ಮಂತ್ರಗಾರರು ಚಂದ್ರನನ್ನು ಸಾಯಿಸಿದರು.' ಸ್ಕ್ರಾಗ್ಗಾ ಕೋಪದಿಂದ, ಭಯದಿಂದ ಕೂಗಿದ. ತನ್ನ ಭರ್ಜಿಯನ್ನು ಸರ್ ಹೆನ್ರಿಯತ್ತ ಎಸೆದ. ಕವಚ ಮೈಮೇಲಿದ್ದುದರಿಂದ ಅವರಿಗೆ ಅಪಾಯವಾಗಲಿಲ್ಲ. ಸ್ಕ್ರಾಗ್ಗಾ ಮತ್ತೊಮ್ಮೆ ಎಸೆದ. ಸರ್ ಹೆನ್ರಿ ಅದೇ ಭರ್ಜಿಯನ್ನು ಸ್ಕ್ರಾಗ್ಗಾನತ್ತ ತಿರುಗಿ ಎಸೆದರು. ಆತ ಸತ್ತು ಬಿದ್ದ.

ಕತ್ತಲೆಯಲ್ಲಿ ತರುಣಿಯರ ತಂಡ ಓಡಿಹೋಯಿತು. ರಾಜ, ಗಗೂಲ್ ಗುಡಿಸಿಲಿನೊಳಗೆ ಹೋದರು. ನಮ್ಮ ಬಳಿ ಫೌಲಟಾ, ಇನ್‌ಫ್ಯಾಡೂಸ್ ಹಾಗೂ ಅವನು ಕರೆತಂದಿದ್ದ ಮುಖ್ಯಸ್ಥರು ಮಾತ್ರ ಇದ್ದರು.

'ಮುಖ್ಯಸ್ಥರೆ, ನಿಮಗೀಗ ತೃಪ್ತಿಯಾಗಿದ್ದರೆ ಬನ್ನಿ. ನಾವು ನೀವು ಹೇಳಿದ ಜಾಗಕ್ಕೆ ಹೋಗೋಣ.'

ಮಹಾದ್ವಾರದ ಬಳಿ ಹೋಗುವಷ್ಟರಲ್ಲಿ ಸಂಪೂರ್ಣ ಕತ್ತಲಾಯಿತು. ಒಬ್ಬರನ್ನೊಬ್ಬರು ಹಿಡಿದುಕೊಂಡು ಹೊರಟೆವು.

೧೨

## ಯುದ್ಧಕ್ಕೆ ಮೊದಲು

ಮೊದಲೆ ನಿರ್ಧರಿಸಿದಂತೆ ಇನ್‌ಫ್ಯಾಡೂಸ್ ಹಾಗೂ ಇತರ ಮುಖ್ಯಸ್ಥರು ತಮ್ಮ ಸೈನ್ಯ ಇಳಿಸಿದ್ದ ಅರ್ಧ ಚಂದ್ರಾಕಾರದ ಬೆಟ್ಟದ ಬಳಿ ಹೋದೆವು. ಅಲ್ಲಿನ ಗುಡಿಸಲಿನಲ್ಲಿ ನಾವು ಲೂ ಪಟ್ಟಣದಲ್ಲಿನ ಗುಡಿಸಲಿನಲ್ಲಿ ಬಿಟ್ಟು ಬಂದಿದ್ದ ನಮ್ಮ ವಸ್ತುಗಳನ್ನು ತಂದಿಟ್ಟಿದ್ದರು. ಅವರಲ್ಲಿ ಗುಡ್‌ರ ಬಟ್ಟೆಗಳೂ ಇದ್ದವು. ಅವರು ಅವನ್ನು ಹಾಕಿಕೊಳ್ಳಲು ಯತ್ನಿಸಿದರು.

"ದಯವಿಟ್ಟು ನನ್ನ ಒಡೆಯ, ತನ್ನ ಸುಂದರ ಕಾಲುಗಳನ್ನು ಮುಚ್ಚಿಕೊಳ್ಳಬಾರದು," ಇನ್‌ಫ್ಯಾಡೂಸ್ ದುಃಖದಿಂದ ನುಡಿದ.

ಸೂರ್ಯೋದಯದ ನಂತರ ಇನ್‌ಫ್ಯಾಡೂಸ್ ಹಾಗೂ ಇಗ್ನೋಸಿಯ ಮಾತನ್ನು ಕೇಳಲು ಸೈನಿಕರು ಕಲೆತರು. ಇಗ್ನೋಸಿಯನ್ನು ರಾಜನೆಂದು ಒಪ್ಪಿಕೊಂಡುದಕ್ಕಾಗಿ ಅವರು 'ಕೂಮ್' ಎಂದರು.

ನಂತರ ನಾವು ನಾವಿರುವ ಪ್ರದೇಶವನ್ನು ಸುರಕ್ಷಿತವಾಗಿಡುವುದಕ್ಕೆ ಸಾಧ್ಯವಿದ್ದಷ್ಟು ಕೆಲಸ ಮಾಡಿದೆವು.

೧೩

## ಯುದ್ಧ

ಮರುದಿನದ ಸೂರ್ಯೋದಯದ ನಂತರ ನಾವೆಲ್ಲ ಯುದ್ಧದ ಉಡುಗೆ ಧರಿಸಿದೆವು. ಸಂಪೂರ್ಣ ಕುಕುವಾನಾ ಉಡುಗೆ ಧರಿಸಿದ್ದ ಸರ್ ಹೆನ್ರಿ ಬಹಳ ಚೆನ್ನಾಗಿ ಕಾಣುತ್ತಿದ್ದರು.

ನಾವು ಸೈನ್ಯದ ಮಧ್ಯಭಾಗದಲ್ಲಿದ್ದ ಇನ್‌ಫ್ಯಾಡೂಸನ ಬಳಿ ಹೋದೆವು. ಸೈನಿಕರು ಟ್ವಾಲಾನ ಸೈನ್ಯ ನಮ್ಮತ್ತ ಬರುತ್ತಿರುವುದನ್ನು ನೋಡುತ್ತಿದ್ದರು.

ಇಗ್ನೋಸಿ ಹೇಳಿದ: "ಚಿಕ್ಕಪ್ಪ, ನೋಡು, ಬೆಟ್ಟ ನಮ್ಮನ್ನು ಹೇಗೆ ಸುತ್ತುವರೆದಿದೆ, ಅರ್ಧಚಂದ್ರನಂತೆ. ನಿನ್ನ ಸೈನ್ಯವನ್ನು ಇನ್ನೆರಡು ತುಕಡಿಗಳೊಡನೆ ಬಯಲಿನಲ್ಲಿ ನಿಲ್ಲಿಸು. ಅದನ್ನು ನೋಡಿ ಟ್ವಾಲಾ ತನ್ನೆಲ್ಲಾ ಸೈನ್ಯವನ್ನು ಅದರತ್ತ ನುಗ್ಗಿಸುತ್ತಾನೆ.



ಆಗ ಉಳಿದೆರಡು ತಂಡಗಳು ಬೆಟ್ಟದ ಎರಡೂ ತುದಿಯಿಂದ ಟ್ಯಾಲಾನ ಮೇಲೆ ಬೀಳಲಿ. ಆಗ ಟ್ಯಾಲಾನ ಸೈನ್ಯ ಸಂಪೂರ್ಣ ನಾಶವಾಗುತ್ತದೆ."

ಯುದ್ಧಸಿದ್ಧತೆಗಳನ್ನು ಬೇಗ ಬೇಗ ಮಾಡಲಾಯಿತು. ಸೈನಿಕರಿಗೆ ತಿಳುವಳಿಕೆ ಕೊಡಲಾಯಿತು. ಸೈನಿಕರು ಊಟ ಮಾಡಿ ತಮ್ಮ ತಮ್ಮ ಜಾಗಗಳಿಗೆ ಹೋದರು.

ಗುಡ್ ನಮ್ಮ ಬಳಿ ಬಂದು, "ನಾನು ಎಡ ಭಾಗದ ಸೈನ್ಯದೊಡನೆ ಇರುವೆ. ನಾವು ಮತ್ತೆ ಸಂಧಿಸುತ್ತೇವೋ ಇಲ್ಲವೋ. ಅದಕ್ಕಾಗಿ ವಂದನೆ ಹೇಳಲು ಬಂದೆ," ಎಂದರು.

"ನಾನು ಇನ್‌ಫ್ಯಾಡೂಸನ ಜನರೊಡನೆ ಇರುವೆ. ಇವರು ಕೊನೆಯುಸಿರಿರುವತನಕ ಹೋರಾಡುತ್ತಾರೆ," ಎಂದರು ಸರ್ ಹೆನ್ರಿ. ಗುಡ್ ಅಲ್ಲಿಂದ ಹೊರಟು ಹೋದರು. ಇನ್‌ಫ್ಯಾಡೂಸ್ ಸರ್ ಹೆನ್ರಿಯನ್ನು ಅಲ್ಲಿಂದ ಕರೆದೊಯ್ದ. ಹಿಂಭಾಗದಲ್ಲಿದ್ದ ಎರಡನೆ ತಂಡದ ಕಡೆಗೆ ನಾನು ಇಗ್ನೋಸಿಯೊಡನೆ ಹೋದೆ.ಟ್ಯಾಲಾನ ಸೈನ್ಯ ಕಣಿವೆಯ ಬಳಿ ಬಂದಿತ್ತು. ಇನ್‌ಫ್ಯಾಡೂಸ್‌ನ ಸೈನ್ಯ ಬಯಲಿನ ಮಧ್ಯ ಭಾಗಕ್ಕೆ ಬಂದು ನಿಂತಿತ್ತು.

ಟ್ಯಾಲಾನ ಸೈನ್ಯ ಕಣಿವೆಯನ್ನು ಪ್ರವೇಶಿಸಲು ಪ್ರಾರಂಭಿಸಿತು. ಆ ಇಕ್ಕಟ್ಟಿನಲ್ಲಿ ಒಮ್ಮೆಲೆ ಒಂದು ಸೈನ್ಯದ ತುಕಡಿ ಮಾತ್ರ ಇರಬಹುದೆಂದು ಅವನಿಗೆ ಗೊತ್ತಿತ್ತು. ಎದುರಿನಲ್ಲೇ ಅವರು ಇನ್‌ಫ್ಯಾಡೂಸನ ಸೈನ್ಯವನ್ನು ನೋಡಿದರು. ಮುಂಭಾಗದಲ್ಲೇ ಸೈನ್ಯಕ್ಕೆ ಆದೇಶ ನೀಡುತ್ತಾ ಟ್ಯಾಲಾ ಬರುತ್ತಿದ್ದ.

ನಲವತ್ತು ಗಜದವರೆಗೂ ಶತ್ರುಸೈನ್ಯ ಬರುವುದನ್ನು ನೋಡುತ್ತಿದ್ದ ಇನ್‌ಫ್ಯಾಡೂಸನ ಸೈನ್ಯ ಇದ್ದಕ್ಕಿದ್ದಂತೆ ಕೂಗುತ್ತಾ ನುಗ್ಗಿತು. ಎರಡು ಸೈನ್ಯಗಳೂ ಸಂಧಿಸಿದವು. ಯುದ್ಧದ ಏಳು ಬೀಳಿನ ನಂತರ ಇನ್‌ಫ್ಯಾಡೂಸನ ಸೈನ್ಯ ಸ್ವಲ್ಪ ಮಾತ್ರ ಉಳಿದಿತ್ತು. ಮೊದಲ ತಂಡದ ಮುಕ್ಕಾಲು ಭಾಗ ನಾಶವಾಗಿತ್ತು.

ಉಳಿದ ಸೈನ್ಯವನ್ನು ಒಗ್ಗೂಡಿಸುತ್ತಾ ಸರ್ ಹೆನ್ರಿ ಓಡಾಡುತ್ತಿದ್ದರು. ಅವರಿನ್ನೂ ಬದುಕಿದ್ದನ್ನು ನೋಡಿ ನನಗೆ ಸಂತೋಷವಾಯಿತು.

ಮತ್ತೊಮ್ಮೆ ಭರ್ಜಿ ಗುರಾಣಿಗಳ ಸಮ್ಮಿಳನವಾಯಿತು. ಈ ಬಾರಿ ಯುದ್ಧ ದೀರ್ಘವಾಗಿ ನಡೆಯಿತು. ಸರ್ ಹೆನ್ರಿ ಕೂಗು ಹಾಕುತ್ತಾ, ತಮ್ಮ ಕೊಡಲಿಯನ್ನು ಎತ್ತಿ ಎತ್ತಿ ಬೀಸುತ್ತಾ ರಣರಂಗದಲ್ಲಿ ಸುತ್ತುತ್ತಿದ್ದರು. ಇನ್‌ಫ್ಯಾಡೂಸ ಸೈನ್ಯ ಈ ಬಾರಿ ಕ್ಷಿಪ್ರ ಆಕ್ರಮಣ ಮಾಡಿತು. ಆಕ್ರಮಣಕಾರರು ಚದುರಿ ಓಡಿದರು. ಅವರನ್ನು ನಮ್ಮವರು ಓಡಿಸಿಕೊಂಡು ಹೋದರು.

"ಟ್ಯಾಲಾನ ಸೈನ್ಯ ನಮ್ಮ ಸೋದರರನ್ನು ನುಂಗುತ್ತಿರುವಾಗ ನಾವಿನ್ನೂ ಸುಮ್ಮನೆ ಇರಬೇಕೆ ಇಗ್ನೋಸಿ?" ಎಂದು ಕೇಳಿದೆ.

"ಇದು ಸಕಾಲ" ಎನ್ನುತ್ತಾ ಇಗ್ನೋಸಿ ತನ್ನ ಕೊಡಲಿಯನ್ನು ಎತ್ತಿಕೊಂಡು ಸೈನ್ಯಕ್ಕೆ ಸನ್ನೆಮಾಡಿದ. ನಾವು ಸಮುದ್ರದ ಹೆದ್ದೆರೆಗಳಂತೆ ನುಗ್ಗಿದೆವು.

ಆಗ ನಡೆದ ಯುದ್ಧವನ್ನು ಯಾರು ವರ್ಣಿಸಬಲ್ಲರು ? ಅವರು ಪದೆ ಪದೆ ನಮ್ಮ ಮೇಲೆ ಬೀಳುತ್ತಿದ್ದರು. ನಾವು ಪದೆ ಪದೆ ಅವರನ್ನು ಹಿಮ್ಮೆಟ್ಟಿಸುತ್ತಿದ್ದೆವು. ಪ್ರತಿ ಬಾರಿಯೂ ನಮ್ಮ ವ್ಯೂಹ ಕರಗುತ್ತಿತ್ತು.

ಇನ್‌ಫ್ಯಾಡೂಸ್ ಸೈನಿಕರಿಗೆ ಆದೇಶ ನೀಡುತ್ತಾ, ನಗುತ್ತಾ, ಹಾಸ್ಯ ಮಾಡುತ್ತಾ ಅಳಿದುಳಿದ ಸೈನಿಕರನ್ನುಹುರಿದುಂಬಿಸುತ್ತಿದ್ದ. ಸರ್ ಹೆನ್ರಿಯ ಎದುರು ಯಾರೂ ನಿಲ್ಲುತ್ತಿರಲಿಲ್ಲ. ಕೊನೆ ಕೊನೆಗೆ ಆ ಬಿಳಿಯ ಮಾಂತ್ರಿಕನ ಬಳಿಗೆ ಯಾರೂ ಹೋಗುತ್ತಿರಲಿಲ್ಲ.

ಸೈನ್ಯದಲ್ಲಿ "ಟ್ಯಾಲಾ ಟ್ಯಾಲಾ" ಎಂಬ ಕೂಗು ಕೇಳಿಬಂತು. ಸೈನಿಕರ ನಡುವಿನಿಂದ ಒಕ್ಕಣ್ಣ ದೈತ್ಯ ಟ್ಯಾಲಾ ಬಂದ.

"ನನ್ನ ಮಗನನ್ನು ಕೊಂದವನು ಎಲ್ಲಿ ? ನೀನು ನನ್ನನ್ನು ಕೊಲ್ಲುವಿಯಾ?" ಎಂದು ಸರ್ ಹೆನ್ರಿಯನ್ನು ಕೇಳಿದ.

ಮುಂದಿನ ಐದು ನಿಮಿಷದಲ್ಲಿ ಯುದ್ಧದ ಗತಿ ನಿರ್ಣಯವಾಯ್ತು. ಟ್ಯಾಲಾನ ಸೈನ್ಯ ಚದುರಿ ಓಡಿತು. ನಮಗೂ ಲೂ ಹಳ್ಳಿಗೂ ನಡುವಿನ ಜಾಗ ಚದುರಿ ಓಡುತ್ತಿದ್ದ ಸೈನಿಕರಿಂದ ತುಂಬಿ ಹೋಯಿತು. ಇನ್‌ಫ್ಯಾಡೂಸನ ಸೈನ್ಯದಲ್ಲಿ ಮೂರು ಸಾವಿರದ ನಾನ್ನೂರಕ್ಕೂ ಹೆಚ್ಚು ಜನ ಮೃತರಾಗಿದ್ದರು.

ನಾವು ಲೂ ಕಡೆ ಹೊರಟೆವು.

ನಾವು ಲೂ ತಲುಪಿದಾಗ ಅದನ್ನು ಕಾಯುತ್ತಿದ್ದ ತಂಡದ ಅಧಿಕಾರಿ ಇಗ್ನೋಸಿಯನ್ನು ಗೌರವಿಸಿ ಟ್ಯಾಲಾ ಮತ್ತು ಸಂಗಡಿಗರು ಹಳ್ಳಿಯ ಒಳಗೆ

ಪ್ಪಾರೆಂದು ತಿಳಿಸಿದ. ಇಗ್ನೋಸಿ ಒಬ್ಬ ದೂತನನ್ನು ಕಳಿಸಿ ಶರಣಾಗತರಾದವರಿಗೆ ಅಭಯದಾನ ಮಾಡು ವುದಾಗಿ ತಿಳಿಸಿ ಬಾಗಿಲು ತೆರೆಯಲು ಆಜ್ಞಾಪಿಸಿದ. ಬಾಗಿಲು ತೆರೆಯಿತು. ನಾವು ಒಳಗೆ ಹೋದೆವು.

ರಸ್ತೆಯ ಪಕ್ಕದಲ್ಲಿ ಸೈನಿಕರು ನಿಂತಿದ್ದರು. ಇಗ್ನೋಸಿ ಮುಂದುವರೆದಂತೆ ಎಲ್ಲರೂ ರಾಜ ಗೌರವ ಸೂಚಿಸಿದರು. ನಾವು ನೇರವಾಗಿ ಟ್ವಾಲಾನ ಬಳಿ ಹೋದೆವು. ಆ ವಿಶಾಲ ಬಯಲಿನಲ್ಲಿ ಟ್ವಾಲಾ ಕುಳಿತಿದ್ದ. ಅವನ ಬಳಿಯಿದ್ದ ಏಕೈಕ ವ್ಯಕ್ತಿಯೆಂದರೆ ಗಗೂಲ್.

ಅದೊಂದು ದುಃಖಕರ ದೃಶ್ಯ. ಅವನ ಗುರಾಣಿ ಕೊಡಲಿಗಳು ಪಕ್ಕದಲ್ಲಿದ್ದವು. ಒಬ್ಬನೇ ಒಬ್ಬ ಸೈನಿಕನಾಗಲಿ ಹೆಂಡತಿ ಮಕ್ಕಳಾಗಲಿ ಅವನ ಹಣೆಯ ಬರಹವನ್ನು ಹಂಚಿಕೊಳ್ಳಲು ಜೊತೆ-ಯಲ್ಲಿರಲಿಲ್ಲ. ಅವನು ತಲೆ ಎತ್ತಿದ. ಅವನ ಒಂದು ಕಣ್ಣು ಅವನ ಹಣೆಯ ಮೇಲಿನ ವಜ್ರ ಕ್ಕಿಂತ ಜೋರಾಗಿ ಹೊಳೆಯುತ್ತಿತ್ತು. ಅವನು ಇಗ್ನೋಸಿಯನ್ನು ಕೋಪದಿಂದ ದಿಟ್ಟಿಸಿ ಕೇಳಿದ:

"ರಾಜನಿಗೆ ಅಭಿನಂದನೆಗಳು. ಓ ರಾಜನೆ, ನನ್ನ ಹಣೆ ಬರಹವನ್ನು ಏನೆಂದು ನಿರ್ಧರಿಸಿರುವೆ?"

"ನನ್ನ ತಂದೆಯ ಹಣೆ ಬರಹವನ್ನು ನೀನು ಏನು ಮಾಡಿದೆಯೋ ಅದೇ."

"ಒಳ್ಳೆಯದು. ನಾನು ಕುಕುವಾನಾ ರಾಜ ವಂಶದ ಪಕ್ಕಿನಂತೆ ಸಾವಿನ ಹೊಡೆದಾಟಕ್ಕೆ ಅವ ಕಾಶ ಬೇಡುತ್ತೇನೆ."

"ಒಪ್ಪಿಗೆ. ನೀನು ಯಾರೊಡನೆ ಯುದ್ಧ ಮಾಡುವೆ? ನನ್ನೊಡನೆ , ಮಾಡುವಿಯಾ? ಇಲ್ಲ. ನಾನು ಯುದ್ಧ ಮಾಡುವುದಿಲ್ಲ. ರಾಜನಾದವನು ರಣರಂಗದಲ್ಲಿ ಮಾತ್ರ ಕಾದಾಡುವ."

ಟ್ವಾಲಾನ ಕಣ್ಣು ನಮ್ಮ ಮೇಲೆ ಹರಿದಾ ಡಿತು. ಆತನ ದೃಷ್ಟಿ ನನ್ನ ಮೇಲೆ ನೆಲಸಿದಂತೆ ಅನಿಸಿತು. ಈ ದೈತ್ಯನೊಡನೆ ನಾನು ಕಾದಾಡ ಬೇಕೆ? ಎಲ್ಲರೂ ನನ್ನನ್ನು ಹಾಸ್ಯ ಮಾಡಿ ನಕ್ಕರೂ ಸರಿ, ನಾನು ಒಪ್ಪಲಾರೆ. ಟ್ವಾಲಾ ಸರ್ ಹೆನ್ರಿ ಯತ್ತ ತಿರುಗಿ ಕೇಳಿದ,

"ನೀನೇನು ಹೇಳುವೆ? ಇಂದು ಪ್ರಾರಂಭಿಸಿ ದ್ದನ್ನು (ಯುದ್ಧ) ಇಂದೇ ಮುಗಿಸೋಣವೆ? ಅಥವಾ ನಿನಗೆ ಹೆದರಿಕೆಯೇ?"

"ಇಲ್ಲ. ಅವರೊಡನೆ ನೀನು ಯುದ್ಧ ಮಾಡ ಲಾರೆ," ಇಗ್ನೋಸಿ ಆತುರದಿಂದ ಹೇಳಿದ.

"ಅವನು ಹೆದರಿರಬೇಕು," ಟ್ವಾಲಾ ಹೇಳಿದ.

ಸರ್ ಹೆನ್ರಿಗೆ ಅವನ ಮಾತು ಅರ್ಥವಾಯಿತು. ಅವರ ಮುಖ ಕೋಪದಿಂದ ಕೆಂಪಾಯಿತು. ಅವರು ನುಡಿದರು,

"ನಾನು ಅವನೊಡನೆ ಹೋರಾಡುವೆ. ಅವನೇ ನೋಡಲಿ, ನಾನು ಹೆದರಿದ್ದೇನೋ ಹೇಗೆಂಬುದನ್ನು."

"ದಯವಿಟ್ಟು ಬೇಡ. ಸಾಯಲು ಸಿದ್ಧನಾ ಗಿರುವ ಅವನೊಡನೆ ನಿಮ್ಮ ಪ್ರಾಣವನ್ನು ಪಣವಾಗಿಡಬೇಡಿ," ನಾನು ಬೇಡಿಕೊಂಡೆ.

"ಇಲ್ಲ. ನಾನು ಹೋರಾಡುವೆ. ಬದುಕಿರುವ ಯಾರೇ ಆದರೂ ನನ್ನನ್ನು ಹೇಡಿ ಎನ್ನಕೂಡದು," ಎನ್ನುತ್ತಾ ಸರ್ ಹೆನ್ರಿ ತಮ್ಮ ಕೊಡಲಿಯನ್ನು ಕೈಗೆತ್ತಿಕೊಂಡರು.

ಟ್ವಾಲಾ ನಕ್ಕ. ಎದ್ದು ಸರ್ ಹೆನ್ರಿಯ ಎದುರು ನಿಂತ. ಮುಳುಗುವ ಸೂರ್ಯನ ಕೆಂಪು ಬಣ್ಣ ಅವರಿಬ್ಬರ ಮೇಲೂ ಬೀಳುತ್ತಿತ್ತು. ಪಟ್ಟು ಹಾಕಲು ಇಬ್ಬರೂ ಸುತ್ತತೊಡಗಿದರು. ಇಬ್ಬರ ಕೊಡಲಿಗಳೂ ಮೇಲೇರಿದವು.

ಸರ್ ಹೆನ್ರಿ ಮುಂದೆ ನೆಗೆದು ಕೊಡಲಿಯನ್ನು ಬಲವಾಗಿ ಬೀಸಿದರು. ಟ್ವಾಲಾ ಪಕ್ಕಕ್ಕೆ ನೆಗೆದು ತಪ್ಪಿಸಿಕೊಂಡು ತನ್ನ ಕೊಡಲಿಯನ್ನು ಬಲವಾಗಿ ಬೀಸಿದ. ನನ್ನ ಹೃದಯ ಬಾಯಿಗೆ ಬಂತು. ಯುದ್ಧ ಮುಗಿಯಿತೆಂದೇ ಭಾವಿಸಿದೆ. ಆದರೆ ಸರ್ ಹೆನ್ರಿ ಚಾಕಚಕ್ಯತೆಯಿಂದ ತಮ್ಮ ಗುರಾಣಿ ಯನ್ನು ಆ ಪ್ರಹಾರಕ್ಕೆ ಅಡ್ಡ ಹಿಡಿದರು. ಗುರಾ ಣಿಯ ತುದಿ ಹಾರಿ ಹೋಯಿತು. ಸರ್ ಹೆನ್ರಿ ಮತ್ತೊಮ್ಮೆ ಬೀಸಿದ ಹೊಡೆತ ಟ್ವಾಲಾನ ಗುರಾ ಣಿಯ ಮೇಲೆ ಬಿತ್ತು. ಮತ್ತೊಂದು ಹೊಡೆತ, ಇನ್ನೊಂದು ಹೊಡೆತ. ನೋಡುತ್ತಿದ್ದವರು ಪ್ರತಿ ಹೊಡೆತ ಬಿದ್ದಾಗಲೂ ಕೂಗುತ್ತಿದ್ದರು. ಗುಡ್ ಯುದ್ಧದಲ್ಲಿ ಗಾಯಗೊಂಡಿದ್ದರು. ಸುಸ್ತಿನಿಂದ ಮೂರ್ಛಾವಸ್ಥೆಯಲ್ಲಿದ್ದರೂ ನನ್ನ ಬಳಿಯೇ ಮಲಗಿ ಯುದ್ಧವನ್ನು ನೋಡುತ್ತಿದ್ದರು.

ಟ್ವಾಲಾನ ಹೊಡೆತವನ್ನು ನಿವಾರಿಸಿಕೊಂಡು ಹೆನ್ರಿ ಬಲವಾದ ಪ್ರಹಾರವೊಂದನ್ನು ನೀಡಿದರು. ಆ ಹೊಡೆತ ಗುರಾಣಿಯನ್ನು ಮುರಿದು, ಕವಚ

ವನ್ನು ಛೇದಿಸಿ ಟ್ವಾಲಾನ ಭುಜದ ಮೇಲೆ ಅಪ್ಪಳಿಸಿತು. ನೋವಿನಿಂದ ಚೀತ್ಕರಿಸುತ್ತಾ ಟ್ವಾಲಾ ಮರುಪ್ರಹಾರ ಮಾಡಿದ. ಆ ಹೊಡೆತ ಸರ್ ಹೆನ್ರಿಯ ಕೊಡಲಿಯ ಹಿಡಿಯನ್ನು ಮುರಿದು ಅವರ ಮುಖದ ಮೇಲೆ ಅಪ್ಪಳಿಸಿ ಗಾಯ ಮಾಡಿತು.

ನೋಡುತ್ತಿದ್ದವರೆಲ್ಲ ಚೀರಿದರು. ಸರ್ ಹೆನ್ರಿಯ ಕೈಯಿಂದ ಆಯುಧ ಜಾರಿತು. ಟ್ವಾಲಾ ಭಯಂಕರವಾಗಿ ಕೂಗುತ್ತ ತನ್ನ ಕೊಡಲಿಯನ್ನು ಬೀಸಿದ. ನಾನು ಭಯದಿಂದ ಕಣ್ಣು ಮುಚ್ಚಿದೆ.

ನಾನು ಕಣ್ಣು ಬಿಟ್ಟಾಗ ಸರ್ ಹೆನ್ರಿ ತಮ್ಮ ನೀಳ ಬಾಹುಗಳಿಂದ ಟ್ವಾಲಾನನ್ನು ಬಂಧಿಸಿದ್ದರು. ಬಿಡಿಸಿಕೊಳ್ಳಲು ಹೋರಾಡುತ್ತಲೇ ಟ್ವಾಲಾ ತನ್ನ ಕೊಡಲಿಯಿಂದ ಹೊಡೆಯಲು ಯತ್ನಿಸುತ್ತಿದ್ದ. ಸರ್ ಹೆನ್ರಿ ತಮ್ಮ ಚಾಕುವನ್ನು ಅವನ ಕವಚದೊಳಗೆ ಚುಚ್ಚಲು ಯತ್ನಿಸುತ್ತಿದ್ದರು.

"ಕೊಡಲಿಯನ್ನು ಕಿತ್ತುಕೊಳ್ಳಿ" ಗುಡ್ ಕೂಗಿದರು. ಚರ್ಮದ ದಾರದಿಂದ ಟ್ವಾಲಾನ ಕೈಗೆ ಕಟ್ಟಲಾಗಿದ್ದ ಕೊಡಲಿಯನ್ನು ಕಿತ್ತುಕೊಳ್ಳುವ ಪ್ರಯತ್ನದಲ್ಲಿ ಇಬ್ಬರೂ ಕ್ರೂರ ಬೆಕ್ಕುಗಳಂತೆ ಹೋರಾಡಲಾರಂಭಿಸಿದರು. ಚರ್ಮದ ದಾರ ಹರಿದು ಕೊಡಲಿ ಸರ್ ಹೆನ್ರಿಯ ಕೈಗೆ ಬಂತು. ಅವರು ಎದ್ದು ನಿಂತರು. ಟ್ವಾಲಾ ಎದ್ದು ನಿಂತು ತನ್ನ ಚಾಕುವಿನಿಂದ ತಿವಿದ. ಸರ್ ಹೆನ್ರಿಯ ಕವಚ ಅದನ್ನು ತಡೆಯಿತು. ಕೊಡಲಿಯನ್ನು ಎತ್ತಿದ ಹೆನ್ರಿ ತಮ್ಮೆಲ್ಲಾ ಶಕ್ತಿಯನ್ನು ಬಿಟ್ಟು ಬೀಸಿದರು. ಸಾವಿರಾರು ಕಂಠಗಳು ಉದ್ವೇಗದಿಂದ ಕೂಗಿದವು. ಟ್ವಾಲಾನ ತಲೆ ಹಾರಿ ಬಿತ್ತು. ಸರ್ ಹೆನ್ರಿ ಸುಸ್ತಾಗಿ ಮೃತರಾಜನ ದೇಹದ ಮೇಲೆ ಬಿದ್ದರು.

೧೪

## ಮರಣದ ಜಾಗ

ಕದನದ ನಂತರ ಗುಡ್ ಹಾಗೂ ಸರ್ ಹೆನ್ರಿ ಇಬ್ಬರನ್ನೂ ಟ್ವಾಲಾನ ಗುಡಿಸಿಲಿನ ಒಳಕ್ಕೆ ಸಾಗಿಸಿದೆವು. ಸರ್ ಹೆನ್ರಿ ತಮ್ಮ ಗಾಯಗಳಿಂದ ಬಹುಬೇಗ ಚೇತರಿಸಿಕೊಂಡರು. ಆದರೆ ಗುಡ್ ಕಾಯಿಲೆಯಿಂದ ನರಳತೊಡಗಿದರು. ಫೌಲಟಾ ಅವರ ಸೇವೆ ಮಾಡತೊಡಗಿದಳು. ಕಾಯಿಲೆಯ ತಾಪಕ್ಕೆ ಗುಡ್ ಏನೇನೋ ಬಡಬಡಿಸತೊಡಗಿದರು. ಎರಡು ದಿನಗಳ ನಂತರ ಅವರು ಸಾಯುತ್ತಾರೆಂದು ತೀರ್ಮಾನಿಸಿದೆವು. ಆದರೆ ಫೌಲಟಾ ಅವರು ಬದುಕುತ್ತಾರೆ ಎನ್ನುತ್ತಿದ್ದಳು. ಗುಡ್ ಚೇತರಿಸಿಕೊಂಡರು. ಸರ್ ಹೆನ್ರಿ ಅವರಿಗೆ ಫೌಲಟಾಳ ಸೇವೆಯ ಬಗ್ಗೆ ಹೇಳಿದರು.

"ನಾನವಳಿಗೆ ಕೃತಜ್ಞನಾಗಿದ್ದೇನೆ. ನನ್ನ ಜನ್ಮದಲ್ಲಿ ಅವಳನ್ನು ಮರೆಯುವುದಿಲ್ಲ" ಎಂದರು ಗುಡ್.

ಫೌಲಟಾ ಉತ್ತರಿಸಿದಳು, "ಇಲ್ಲ ಒಡೆಯ, ಅವರು ಅಂದು ನನ್ನನ್ನು ಕಾಪಾಡದಿದ್ದರೆ ನಾನಿಂದು ಅವರ ಸೇವಕಿಯಾಗುತ್ತಿರಲಿಲ್ಲ."

ಗುಡ್ ಚೆನ್ನಾಗಿ ಚೇತರಿಸಿಕೊಂಡ ನಂತರ ಇಗ್ನೋಸಿ ಒಂದು ದೊಡ್ಡ ಸಭೆ ಸೇರಿಸಿದ. ಎಲ್ಲ ಮುಖ್ಯಸ್ಥರೂ ಅವನನ್ನು ರಾಜನೆಂದು ಒಪ್ಪಿಕೊಂಡರು. ಇನ್‌ಫ್ಯಾಡೂಸನ ಉಳಿದ ಸೈನಿಕರಿಗೆ ವಂದನೆ ಅರ್ಪಿಸಲಾಯಿತು. ರಾಜ ಅವರಿಗೆಲ್ಲ ಪಾರಿತೋಷಕ ನೀಡಿ ಗೌರವಿಸಿದ.

ನಂತರದಲ್ಲಿ ಇಗ್ನೋಸಿ ನಮ್ಮ ಭೇಟಿಗೆ ಬಂದ. ಅವನ ಹಣೆಯ ಮೇಲೆ ರಾಜಗೌರವದ ವಜ್ರವಿತ್ತು.

"ರಾಜನಿಗೆ ವಂದನೆಗಳು," ನಾನು ನುಡಿದೆ.

"ಹೌದು ರಾಜ, ನಿಮ್ಮ ಸಹಾಯದಿಂದ," ಸಿದ್ಧ ಉತ್ತರ ಬಂತು. ಅವನು ಗಗೂಲಳ ಬಗ್ಗೆ ಏನು ಯೋಚಿಸಿದ್ದಾನೆಂದು ಕೇಳಿದೆ.

'ಅವಳನ್ನು ಕೊಲ್ಲಲಿಲ್ಲ. ಅವಳೊಡನಿರುವ ಇತರ ಮಾಟಗಾತಿಯರನ್ನೂ ಸಾಯಿಸುವೆ. ಅವರು ಯಾವಾಗಲೂ ಈ ಭೂಮಿಯಲ್ಲಿ ಅಕೃತ್ಯಗಳನ್ನು ಮಾಡುತ್ತಿರುತ್ತಾರೆ.'

'ಆದರೆ ಅವಳಿಗೆ ಬಹಳ ವಿಷಯ ತಿಳಿದಿದೆ.'

'ಅದು ಸರಿ. ನಾನೂ ಸ್ವಲ್ಪ ವಿಷಯ ಸಂಗ್ರಹಿಸಿದ್ದೇನೆ. ಆ ಪರ್ವತದಲ್ಲಿ ಒಂದು ಆಳವಾದ ಗವಿ ಇದೆ. ಅಲ್ಲಿ ಸತ್ತ ರಾಜರ ದೇಹಗಳನ್ನಿಡುತ್ತಾರೆ. ಅಲ್ಲೇ ಟ್ವಾಲಾನ ದೇಹವಿರಬೇಕು. ಅಲ್ಲೇ ಬೆಲೆ ಬಾಳುವ ವಜ್ರಗಳಿರುವುದು. ಆ ಸತ್ತವರ ಜಾಗದಲ್ಲೇ ಗಗೂಲಳಿಗೆ ಮಾತ್ರ ತಿಳಿದಿರುವ ರಹಸ್ಯವಿರುವುದು. ನೀವು ಆ ರಹಸ್ಯ ಕೋಣೆಯಲ್ಲಿರುವ ವಜ್ರಗಳನ್ನು ಬೇಕಾದಷ್ಟು ಕೊಂಡೊಯ್ಯಿರಿ.'

'ಮೊದಲು ನಾವು ರಹಸ್ಯ ಕೋಣೆಯನ್ನು ಹುಡುಕಬೇಕು.'

'ಅವನ್ನು ತೋರಿಸುವ ಪಕ್ಕೈಕ ವ್ಯಕ್ತಿಯೆಂದರೆ ಗಗೂಲ್.'

'ಅವಳು ಒಪ್ಪದಿದ್ದರೆ ?'

'ಅವಳು ಸಾಯಬೇಕು. ಅದಕ್ಕಾಗಿಯೇ ಅವಳನ್ನು ಜೀವದಿಂದ ಬಿಟ್ಟಿರುವೆ. ಅವಳು ಬೇಕಾದ್ದನ್ನು ಆಯ್ದುಕೊಳ್ಳಬಹುದು.' ಇಗ್ನೋಸಿ ಗಗೂಲಳನ್ನು ಕರೆತರಲು ಸೈನಿಕನನ್ನು ಕಳಿಸಿದ.

ಕೆಲವು ನಿಮಿಷಗಳಲ್ಲಿ ಇಬ್ಬರು ರಕ್ಷಕರೊಡನೆ ಗಗೂಲ್ ಬಂದಳು.

'ಇಗ್ನೋಸಿ, ನನ್ನಿಂದ ನಿನಗೇನು ಬೇಕು? ನೀನು ನನ್ನನ್ನು ಮುಟ್ಟಿದರೆ ನಿನ್ನನ್ನು ನನ್ನ ಮಂತ್ರದಿಂದ ಕೊಲ್ಲುವೆ' ಎಂದಳು.

'ನಿನ್ನ ಮಂತ್ರ ಟ್ವಾಲಾನನ್ನು ಉಳಿಸಲು ಸಮರ್ಥವಾಗಲಿಲ್ಲ. ಅದು ನನ್ನನ್ನೇನೂ ಮಾಡಲಾರದು. ನೀನು ಹೊಳೆಯುವ ಕಲ್ಲುಗಳಿರುವ ರಹಸ್ಯ ಕೋಣೆ ಎಲ್ಲಿದೆ ಎಂದು ಹೇಳಬೇಕು.'

ಗಗೂಲ್ ಗಹಗಹಿಸಿ ನಕ್ಕು ಹೇಳಿದಳು: 'ಅದು ನನ್ನ ಬಿಟ್ಟು ಮತ್ತಾರಿಗೂ ಗೊತ್ತಿಲ್ಲ. ನಾನೆಂದೂ ಅದನ್ನು ಹೇಳುವುದಿಲ್ಲ.'

'ಹೇಳದಿದ್ದರೆ ನೀನು ಸಾಯುವೆ.'

'ನಾನು ತೋರಿಸುವುದಿಲ್ಲ. ನನ್ನನ್ನು ಕೊಲ್ಲಲು, ನಿನಗೆ ಧೈರ್ಯವಿಲ್ಲ.'

ಇಗ್ನೋಸಿ ತನ್ನ ಭರ್ಜಿಯನ್ನೆತ್ತಿ ಅವಳಿಗೆ ತಗುಲಿಸಿದ. ಗಗೂಲ್ ಕಿರುಚುತ್ತ ಎದ್ದುನಿಂತು, ಕುಸಿದು ಹೇಳಿದಳು:

'ತೋರಿಸುವೆ ನನ್ನನ್ನು ಕೊಲ್ಲಬೇಡ.'

'ಒಳ್ಳೆಯದು. ನಾಳೆ ನೀನು ಇನ್‌ಫ್ಯಾಡೂಸ್ ಹಾಗೂ ನನ್ನೀ ಬಿಳಿಯ ಸೋದರರೊಡನೆ ಹೋಗಬೇಕು. ನೀನು ಸುಳ್ಳು ಹೇಳಿದರೆ ನೀನು ಸಾಯುವೆ.'

'ಇಗ್ನೋಸಿ, ನಾನೆಂದೂ ಮಾತಿಗೆ ತಪ್ಪುವುದಿಲ್ಲ ಹಿಂದೊಮ್ಮೆ ಒಬ್ಬಳು ಹೆಂಗಸು ಒಬ್ಬ ಬಿಳಿಯನಿಗೆ ರಹಸ್ಯಕೊಠಡಿಯನ್ನು ತೋರಿಸಿದಳು. ಅವನಿಗೆ ಅನಿಷ್ಟ ಅಂಟಿತು. ಅವಳ ಹೆಸರು ಗಗೂಲ್.ಅದು ನಾನೆ.'

'ನೀನು ಸುಳ್ಳು ಹೇಳುವೆ ಅದು ನೂರಾರು ವರ್ಷ ಹಳೆಯ ವಿಷಯ' ನಾನೆಂದೆ.

'ಇರಬಹುದು ಒಬ್ಬರು ದೀರ್ಘಕಾಲ' ಜೀವಿಸಿದರೆ ಮರೆತು ಹೋಗುತ್ತಾರೆ. ನನ್ನ ತಾಯಿಯ ತಾಯಿ ಇವನ್ನು ಹೇಳಿದ್ದರು. ಅವಳ ಹೆಸರೂ ಗಗೂಲ್. ಅಲ್ಲಿ ಆ ಮನುಷ್ಯ ಚೀಲಕ್ಕೆ ಕಲ್ಲುಗಳನ್ನು ತುಂಬಿಟ್ಟಿರುವುದನ್ನು ನೋಡಬಹುದು. ಆದರೆ ಅವನಿಗೆ ಅದನ್ನು ಒಯ್ಯಲಾಗಲಿಲ್ಲ.'

ನಮ್ಮೊಡನೆ ಫೌಲಟಾ ಹಾಗು ಇನ್‌ಫ್ಯಾಡುಸ್ ಬಂದರು. ನಾವು ಸೊಲೊಮನ್ ರಸ್ತೆಯಲ್ಲಿ ನಡೆದು ಪರ್ವತದ ಪಾದವನ್ನು ತಲಪಿದೆವು. ಮತ್ತು ಒಂದೂವರೆ ಘಂಟೆಯ ನಡುಗೆಯ ನಂತರ ಸುಮಾರು ಮೂರು ನೂರು ಅಡಿ ಆಳದ ಗುಂಡಿಯೊಂದನ್ನು ಕಂಡೆವು.

'ಇದೇನೆಂದು ಊಹಿಸಬಲ್ಲಿರಾ?' ಸರ್ ಹೆನ್ರಿಯನ್ನು ಕೇಳಿದೆ. ಅವರು ಇಲ್ಲವೆಂಬಂತೆ ತಲೆ ಆಡಿಸಿದರು.

'ಹಾಗಾದರೆ ನೀವು ಕಿಂಬರ್ಲಿಯ ವಜ್ರದ ಗಣಿಯನ್ನು ನೋಡಿಲ್ಲವೆಂದು ಕಾಣುತ್ತದೆ. ಇದು ಖಂಡಿತ ಸೋಲೋಮನ್ ರಾಜನ ವಜ್ರದ ಗಣಿ.'

ದಾರಿ ಎರಡಾಗಿ ಒಡೆದಿತ್ತು. ಮೂರು ಗೋಪುರದಂತಹ ಆಕೃತಿಯನ್ನು ನೋಡಿ ಅದರ ಬಳಿ ಹೋದೆವು. ಹತ್ತಿರ ಹೋದಾಗ ಕಡೆದ ಶಿಲಾಕೃತಿಗಳೆಂದು ಗೊತ್ತಾಯಿತು. ಮಧ್ಯದ ಆಕೃತಿ ಹೆಣ್ಣಿನದು. ಅದರ ಮುಖ ಗಾಳಿಯ ಸವೆತದಿಂದ ನಾಶವಾಗಿತ್ತು. ಬಲಭಾಗದ್ದು ದೆವ್ವದ ವಿಗ್ರಹ. ಎಡಭಾಗದ ವಿಗ್ರಹದ ಮುಖ ಒಂದು ರೀತಿಯ ಕ್ರೂರ ಶಾಂತಿಯಿಂದ ಕೂಡಿತ್ತು. ಅವೇ 'ಸ್ತಬ್ಧ ಮೂರ್ತಿಗಳು'.

ಗಗೂಲಳನ್ನು ಹೊತ್ತಿದ್ದ ಜನ ನಮ್ಮ ಬಳಿ ಬಂದರು. ಫೌಲಟಾ ಒಣ ಮಾಂಸ ಹಾಗು ಎರಡು ಹೂಜಿ ನೀರನ್ನು ಬುಟ್ಟಿಯಲ್ಲಿಟ್ಟು ಕೊಟ್ಟಳು.

ನಮ್ಮ ಎದುರಿಗೆ ಎಂಭತ್ತು ಅಡಿಗೂ ಎತ್ತರದ ಒಂದು ಗೋಡೆಯಿತ್ತು. ಒಂದು ಕೈದೀಪವನ್ನು ಹಿಡಿದ ಗಗೂಲ್ ನಮ್ಮತ್ತ ಕ್ರೂರ ನೋಟ ಬೀರಿ ಆ ಗೋಡೆಯತ್ತ ನಡೆದಳು. ಬಾಗಿಲು ಸಿಗುವವರೆಗೂ ಅವಳನ್ನು ಹಿಂಬಾಲಿಸಿದೆವು.

'ನಕ್ಷತ್ರದಿಂದ ಬಂದ ಬಿಳಿಯರೆ, ನನ್ನ ಒಡೆಯ ರಾಜನ ಆಜ್ಞೆಯಂತೆ ನಿಮಗೆ ಹೊಳೆಯುವ ಕಲ್ಲುಗಳನ್ನು ತೋರಿಸುವೆ. ಸಿದ್ಧರಿರುವಿರಾ?' ಎಂದು ಗಗೂಲ್ ಕೇಳಿದಳು.

'ನಾವು ಸಿದ್ಧ' ನಾನೆಂದೆ.

ಓಂ ನಮೋ ಭಗವತೇ ಶಂಕರಾನಂದಾಯ

ಸನಾತನ ಧರ್ಮಿಗಳ ಧರ್ಮಗ್ರಂಥವಾದ

# ಶ್ರೀಮದ್ಭಗವದ್ಗೀತಾ ಮೂಲ

**ದಪ್ಪಕ್ಷರಗಳಲ್ಲಿ ಪಾರಾಯಣ ವಿಧಿ ಸಹಿತ ಅಂದವಾದ ತಪ್ಪಿಲ್ಲದ ಮುದ್ರಣ**

೧/೧೬ ಡೆಮ್ಮಿ ಸೈಜ. ೨೯೨+೩೨ ಪುಟಗಳು ಅಂದವಾದ ಕ್ಯಾಲಿಕೋ ಮತ್ತು ಮುದ್ರಿತ ಪ್ಲಾಸ್ಟಿಕ್ ಕವಚಗಳಲ್ಲಿ ಸೇವಾ ದೃಷ್ಟಿಯಿಂದ ಉತ್ಪಾದನೆಯ ವೆಚ್ಚಕ್ಕಿಂತ ಕಡಿಮೆ ದರದಲ್ಲಿ ಮಾರಾಟ.

ಕ್ಯಾಲಿಕೋ ಕವಚಗಳದ್ದು ಕೇವಲ ೩ ರೂಪಾಯಿಗಳು

ಪ್ಲಾಸ್ಟಿಕ್ ಕವಚಗಳದ್ದು ಕೇವಲ ೪ ರೂಪಾಯಿಗಳು

ಆಂಧ್ರ ಮತ್ತು ಕರ್ನಾಟಕ ಪ್ರದೇಶಗಳಲ್ಲಿ
"ಗೀತಾ ಸ್ವಾಮೀಜಿ" ಎಂದು ಪ್ರಖ್ಯಾತರಾದ
**ಶ್ರೀ ಶ್ರೀ ಶ್ರೀ ಸ್ವಾಮಿ ಶಂಕರಾನಂದಜಿ**
ಇವರಿಂದ ವಿನ್ಯಾಸ.





ಬ್ರಹ್ಮಲೀನ
ಶ್ರೀಶ್ರೀಶ್ರೀ ಸ್ವಾಮಿ ಶಂಕರಾನಂದಜೀಯವರು

ತಾರೀಖು ೧-೧೧-೭೯ ರಂದು ಬಿಡುಗಡೆಯಾದ ಇವರ ಇತರ ಸದ್ಗ್ರಂಥಗಳು.

೧) ಶ್ರೀ ಗೀತಾ ತಾತ್ಪರ್ಯಪ್ರದೀಪ (ಕನ್ನಡ ಮತ್ತು ತೆಲುಗು)

೨) ಶ್ರೀ ಸ್ವಾಮೀಜಿಯವರ ಗೀತೋಪನ್ಯಾಸಗಳು – ಮೂರನೆಯ ಅಧ್ಯಾಯ – ಕರ್ಮಯೋಗ

೩) ವಿಚಾರ ಸಾಗರ – ಎರಡನೆಯ ಭಾಗ

ಪುಸ್ತಕಗಳು ದೊರಕುವ ಸ್ಥಳ —

ದೂರವಾಣಿ : ಅಜ್ಜಂಪುರ - ೨೫
ಬೆಂಗಳೂರು - ೫೬೩೦೯೫

**ಶ್ರೀ ಶಿವಾನಂದಾಶ್ರಮ,**
**ಅಜ್ಜಂಪುರ ೫೭೭೫೪೭**

**ಹಾಗೂ ಶ್ರೀ ಗೀತಾ ಏಜನ್ಸೀಸ್ ಬಳೇಪೇಟೆ ಚೌಕ, ಬೆಂಗಳೂರು-೫೩**

ನಿಮ್ಮ ಹತ್ತಿರದ ಪುಸ್ತಕ ವ್ಯಾಪಾರಿಗಳಲ್ಲಿ ವಿಚಾರಿಸಿ ☆ ಪುಸ್ತಕ ವ್ಯಾಪಾರಿಗಳಿಗೆ ಧಾರಾಳ ಕಮಿಷನ್

'ಬಳಿಯದು ನಿಮ್ಮ ಎದೆಯನ್ನು ಗಟ್ಟಿಮಾಡಿಕೊಳ್ಳಿ. ಇನ್‌ಫ್ಯಾಡೂಸ್ ನೀನೂ ಬರುವೆಯಾ?'

'ಇಲ್ಲ. ಆದರೆ ಎಚ್ಚರ, ಈ ನನ್ನ ಒಡೆಯರ ಒಂದು ಕೂದಲು ಕೊಂಕಿದರೂ ನೀನು ಸಾಯುವೆ. ತಿಳಿಯಿತೆ?' ಎಂದ ಇನ್‌ಫ್ಯಾಡೂಸ್.

'ತಿಳಿಯಿತು. ನಾನು ಅನೇಕ ರಾಜರ ಮಾತನ್ನು, ಅವರು ನನ್ನ ಮಾತು ಕೇಳುವವರೆಗೂ ಕೇಳಿದ್ದೇನೆ. ಬನ್ನಿ. ದೀಪವಿದೆ.'

'ಫೌಲಟಾ ನೀನೂ ಬರುವಿಯಾ?' ಗುಡ್ ಕೇಳಿದರು.

'ನನಗೆ ಭಯ.'

'ಸರಿ ಆ ಬುಟ್ಟಿ ಕೊಡು.'

'ಇಲ್ಲ ಒಡೆಯ. ನೀವೆಲ್ಲಿ ಹೋದರೂ ನಾನಲ್ಲಿ ಬರುವೆ.'

ಐವತ್ತು ಗಜ ದೂರ ಹೋಗುವಷ್ಟರಲ್ಲಿ ಬೆಳಕು ಕಡಿಮೆಯಾಯಿತು. ಮರು ನಿಮಿಷದಲ್ಲಿ ನಾವೊಂದು ಅದ್ಭುತ ಜಾಗದಲ್ಲಿದ್ದೆವು.

ಪಕ್ಕದಲ್ಲಿ ಹಿಮದ ಗಡ್ಡೆಗಳು ಕಂಡವು. ಆದರೆ ಅವು ನಿಜವಾಗಿ ಲವಣ ಮಿಶ್ರಿತ ನೀರು ಮೇಲ್ಛಾವಣಿಯಿಂದ ಬಿದ್ದು ಒಣಗಿ ಹಿಮದಂತಾಗುತ್ತಿತ್ತು. ನೂರಾರು ವರ್ಷಗಳಿಂದ ಸಂಗ್ರಹಗೊಂಡಿದ್ದ ಆ ವಸ್ತುವಿನ ಸೌಂದರ್ಯವನ್ನು ವರ್ಣಿಸುವುದು ಸಾಧ್ಯವಿಲ್ಲ. ಆದರ ಸೌಂದರ್ಯವನ್ನು ಸವಿಯಲೂ ನಮಗೆ ಸಮಯವಿರಲಿಲ್ಲ. ಗಗೂಲ್ ತನ್ನ ಕಾರ್ಯ ನಿರ್ವಹಿಸಲು ಕಾತರಳಾಗಿದ್ದಂತಿತ್ತು. ಆ ಗವಿಯಲ್ಲಿ ಇನ್ನೊಂದು ಬಾಗಿಲು ಸಿಕ್ಕಿತು.

'ಮರಣದ ಜಾಗಕ್ಕೆ ಬರಲು ಸಿದ್ಧರಿರುವಿರಾ ?' ಗಗೂಲ್ ಕೇಳಿದಳು.

'ಕರೆದೊಯ್ಯಿ.' ಗುಡ್ ನುಡಿದರು.

ಒಳಗೆ ಇಣುಕಿ ನೋಡಿದ ಸರ್ ಹೆನ್ರಿ, 'ಇದೇನೂ ಮನೋಹರವಾಗಿಲ್ಲ ಬನ್ನಿ ಮಿ. ಕ್ವಾಟರ್‌ಮನ್. ಹಿರಿಯರು ಮೊದಲು ಹೋಗಬೇಕು. ಮುದುಕಿಯನ್ನು ಕಾಯಿಸಬೇಡಿ' ಎಂದರು.

ಇಪ್ಪತ್ತು ಹೆಜ್ಜೆ ಹೋದನಂತರ ನಲವತ್ತು ಅಡಿ ಉದ್ದ ಮುವ್ವತ್ತು ಅಡಿ ಅಗಲದ ಕಡಿದು ಮಾಡಿದ್ದ ಕೊಠಡಿಯೊಂದನ್ನು ಕಂಡೆ. ಅಲ್ಲಿನ ಉದ್ದವಾದ ಕಲ್ಲು ಮಂಚದ ಶಿರೋಭಾಗದಲ್ಲಿ ಒಂದು ದೊಡ್ಡ ಬಿಳಿ ಆಕೃತಿಯನ್ನು, ಅದರ ಸುತ್ತಲಿನ ಇನ್ನಿತರ ಬಿಳಿಯ ಆಕೃತಿಗಳನ್ನು, ಮಂಚದ ಮಧ್ಯದಲ್ಲಿ ಒಂದು ಕಂದು ಆಕೃತಿಯನ್ನು ನೋಡಿದೆ. ಅಲ್ಲಿಂದ ಹಿಂದಕ್ಕೆ ನನ್ನ ಕಾಲಿನಲ್ಲಿ ಶಕ್ತಿಯಿದ್ದಷ್ಟೂ ವೇಗವಾಗಿ ಹೊರಕ್ಕೆ ಓಡಿದೆ.

ಸಾಮಾನ್ಯವಾಗಿ ನಾನು ಇಂಥವುಗಳಿಗೆ ಹೆದರುವುದಿಲ್ಲ. ಆದರೆ ಅಲ್ಲಿನ ಇಡೀ ದೃಶ್ಯ ನನ್ನನ್ನು ಬೆದರಿಸಿತು. ಸರ್ ಹೆನ್ರಿ ನನ್ನನ್ನು ಹಿಡಿದು ನಿಲ್ಲಿಸಿದರು. ಇಲ್ಲದಿದ್ದರೆ ನಾನು ಐದೇ ನಿಮಿಷಗಳಲ್ಲಿ ಗವಿಯ ಹೊರಭಾಗದಲ್ಲಿರುತ್ತಿದ್ದೆ. ನಂತರ ಪ್ರಪಂಚದ ಎಲ್ಲಾ ವಜ್ರಗಳು ಸೇರಿದರೂ ನನ್ನನ್ನು ಒಳ ಹೋಗುವಂತೆ ಮಾಡಲು ಶಕ್ಯವಾಗುತ್ತಿರಲಿಲ್ಲ. ಸರ್ ಹೆನ್ರಿ ನನ್ನನ್ನು ಒಳ ಕರೆದೊಯ್ದರು.

'ಇವೇನು?' ನಾನು ಕೇಳಿದೆ.

'ಅವು ಏನು?' ಗುಡ್ ಕೇಳಿದರು.

'ಹ್ಹ! ಹ್ಹ! ಹ್ಹ!' ಗಗೂಲ್ ನಕ್ಕಳು. 'ಮೃತರ ಕೋಣೆಯೊಳಗೆ ಪ್ರವೇಶಿಸಿದವರಿಗೆ ಅನಿಷ್ಟ ಕಾದಿರುತ್ತದೆ ಬನ್ನಿ, ಓ ಶೂರನೆ ಬಾ. ನೀನು ಕೊಂದವನನ್ನು ನೋಡು,' ಗಗೂಲ್ ಸರ್ ಹೆನ್ರಿಯನ್ನು ಆ ಆಕೃತಿಗಳತ್ತ ಕರೆದೊಯ್ದಳು. ಮಂಚದ ಮೇಲಿದ್ದ ಕಂದು ಆಕೃತಿಯನ್ನು ತೋರಿಸಿದಳು. ಸರ್ ಹೆನ್ರಿ ಅಚ್ಚರಿಯಿಂದ ಕೂಗಿದರು. ಅಲ್ಲಿದ್ದದ್ದು ಟ್ವಾಲಾನ ಬತ್ತಲೆ ದೇಹ. ಅದರ ಮೇಲಾಗಲೆ ಗಾಜಿನಂತಹ ತೆಳು ಆವರಣ ರಚಿತವಾಗಿತ್ತು.

ಮಂಚದ ಸುತ್ತಲೂ ಇದ್ದ ಬಿಳಿಯ ಆಕೃತಿಗಳೆಲ್ಲ ಮಾನವ ದೇಹಗಳೇ. ಅಲ್ಲಿ ಕುಕುವಾನಾ ಜನರು ತಮ್ಮ ರಾಜರ ಶವಗಳನ್ನು ತಂದಿಡುತ್ತಿದ್ದರು. ವರ್ಷಾಂತರಗಳಿಂದ ಅವುಗಳ ಮೇಲೆ ನೀರು ಜಿನುಗಿ ಹಿಮ ಕಲೆತು ಆ ದೇಹಗಳು ಸುರಕ್ಷಿತವಾಗಿರುತ್ತಿದ್ದವು.

## ೧೫

## ಸೊಲೊಮನ್ ನಿಧಿ

ಮತಿ ಭ್ರಮೆಯಿಂದ ಚೇತರಿಸಿಕೊಳ್ಳುತ್ತಿದ್ದಂತೆ ಗಗೂಲ್ ಕಲ್ಲು ಮಂಚವನ್ನು ಹತ್ತಿ ಟ್ವಾಲಾನ ಬಳಿ ಹೋದಳು. ಏನೇನೋ ಮಾತನಾಡಿದಳು. ಅದು ನಮಗೆ ಅರ್ಥವಾಗಲಿಲ್ಲ. ನಂತರ ದೊಡ್ಡ ದೇಹದ ಬಳಿ ಹೋಗಿ ಪ್ರಾರ್ಥಿಸಿದಳು.

'ಗಗೂಲ್ ನಮ್ಮನ್ನು ನಿಧಿಯಿರುವ ಕೋಣೆಗೆ ಕರೆದೊಯ್ಯಿ ಬಾ' ನಾನೆಂದೆ. ಮುದುಕಿ ತಟ್ಟಕ್ಕನೆ ಮಂಚದಿಂದ ಇಳಿದು ಬಂದು ನನ್ನ ಮುಖ ದಿಟ್ಟಿಸಿ ನೋಡಿದಳು. 'ನನ್ನ ಒಡೆಯರಿಗೆ ಹೆದರಿಕೆಯಾಗಿಲ್ಲ ಕರೆದೊಯ್ಯಿ.'

'ಬನ್ನಿ ಒಡೆಯರೆ' ಎಂದು ಆಕೆ ದೈತ್ಯ ಆಕೃತಿಯ ಹಿಂಭಾಗಕ್ಕೆ ಹೋದಳು. 'ಇಲ್ಲಿ ಆ ಕೋಠಡಿಯಿದೆ. ದೀಪ ಹಚ್ಚಿ ಒಳಗೆ ಪ್ರವೇಶಿಸಿ.'

ನಾನು ದೀಪ ಹತ್ತಿಸಿ ಕೋಠಡಿಯ ಬಾಗಿಲಿಗಾಗಿ ಹುಡುಕಿದೆ. ಆದರೆ ಅಲ್ಲಿ ಗೋಡೆಯ ಹೊರತಾಗಿ ಬೇರೇನೂ ಕಾಣಲಿಲ್ಲ.

'ದಾರಿ ಅಲ್ಲೇ ಇದೆ ಹ್ಹ ಹ್ಹ!' ಗಗೂಲ್ ನಕ್ಕಳು.

'ನನಗೆ ಕಾಣುತ್ತಿಲ್ಲ' ನಾನು ಕೋಪದಿಂದ ನುಡಿದೆ.

'ನೋಡಿ' ಎಂದು ಆಕೆ ಕಲ್ಲಿನ ಮೇಲೆ ಬೆರಳಿಟ್ಟು ತೋರಿಸಿದಳು. ಅವಳು ಹಾಗೆ ಮಾಡಿದ ಕೂಡಲೆ ಒಂದು ಕಲ್ಲು ಮೇಲೇಳತೊಡಗಿತು. ಅದು ಪೂರ್ತಿ ಮೇಲೆದ್ದ ನಂತರ ಒಂದು ದೊಡ್ಡ ಕಪ್ಪು ರಂಧ್ರ ಕಾಣಿಸಿತು.

ನಮ್ಮ ಉದ್ವೇಗ ಎಷ್ಟಿತ್ತೆಂದರೆ ನಾನು ಕಂಪಿಸತೊಡಗಿದೆ. ಜೋಸ್ ಡ. ಸಿಲ್ವೆಸ್ಟ್ರಿಯ ಮಾತು ನಿಜವೆ? ಇಲ್ಲಿ ದೊಡ್ಡ ನಿಧಿಯಿದೆಯೆ? ನಾವು ಪ್ರಪಂಚದ ಅತ್ಯಂತ ದೊಡ್ಡ ಶ್ರೀಮಂತರಾಗುತ್ತೇವೆಯೆ? ಇದನ್ನೆಲ್ಲ ಇನ್ನೆರಡು ನಿಮಿಷಗಳಲ್ಲಿ ತಿಳಿಯುತ್ತೇವೆ.

'ನಕ್ಷತ್ರದಿಂದ ಬಂದ ಬಿಳಿಯರೆ ಒಳಗೆ ಬನ್ನಿ' ಗಗೂಲ್ ಕರೆದಳು. 'ಆದರೆ ಮೊದಲು ನನ್ನ ಮಾತನ್ನು ಕೇಳಿ. ನೀವು ನೋಡಿದ ಮೂರ್ತಿಗಳ ಬಳಿಯ ಗಣಿಯಿಂದ ವಜ್ರಗಳನ್ನು ತಂದು ಇಲ್ಲಿಡಲಾಗಿದೆ. ಒಮ್ಮೆ ಒಬ್ಬ ಬಿಳಿಯ ಪರ್ವತಗಳನ್ನು ದಾಟಿ ಇಲ್ಲಿಗೆ ಬಂದಿದ್ದ. ಹೇಗೋ ಇದರ ರಹಸ್ಯವನ್ನು ತಿಳಿಸಿದ ಹೆಂಗಸೊಬ್ಬಳು ಇದ್ದಳು. ಅವಳೊಡನೆ ಬಿಳಿಯ ಒಳ ಬಂದ. ತನ್ನ ಆಡಿನ ಚರ್ಮದ ಚೀಲದಲ್ಲಿ ವಜ್ರಗಳನ್ನು ತುಂಬಿಕೊಂಡ. ಹೊರಡುವಾಗ ದೊಡ್ಡದೊಂದು ವಜ್ರವನ್ನು ಕೈಯಲ್ಲಿ ತೆಗೆದುಕೊಂಡು...' ಗಗೂಲ್ ಮಾತು ನಿಲ್ಲಿಸಿದಳು.

ನಾನು ಕುತೂಹಲದಿಂದ ಕೇಳಿದೆ: 'ಡ. ಸಿಲ್ವೆಸ್ಟ್ರಿಗೆ ಕೊನೆಗೇನಾಯ್ತು?'

ಮುದುಕಿಗೆ ಆಶ್ಚರ್ಯವಾದಂತೆ ಕಾಣಿಸಿತು.

'ನಿಮಗೆ ಅವನ ಹೆಸರು ಹೇಗೆ ಗೊತ್ತು?' ಆಕೆ ತಟಕ್ಕನೆ ಕೇಳಿ ನಮ್ಮ ಉತ್ತರಕ್ಕಾಗಿ ಕಾಯದೆ ಮುಂದುವರಿಸಿದಳು. 'ಕೆಲವು ಕಾರಣಗಳಿಂದ ಬಿಳಿಯ ಹೆದರಿದ. ಆಡಿನ ಚರ್ಮದ ಚೀಲವನ್ನು ಬಿಸುಟು ದೊಡ್ಡ ವಜ್ರದೊಡನೆ ಓಡಿಹೋದ. ಅದೇ ಕಲ್ಲನ್ನು ರಾಜ ತೆಗೆದುಕೊಂಡ. ಟ್ವಾಲಾನ ಹಣೆಯಲ್ಲಿದ್ದುದು ಅದೆ. ಈಗ ಇಗ್ನೋಸಿ ಧರಿಸುವುದೂ ಅದೆ.'

'ಯಾರಾರೂ ಇದನ್ನು ಪ್ರವೇಶಿಸಲಿಲ್ಲವೆ?' ನಾನು ಕೇಳಿದೆ.

'ಇಲ್ಲ ಒಡೆಯರೆ, ಪ್ರತಿ ರಾಜನೂ ಇದನ್ನು ತೆರೆಯುತ್ತಾನೆ. ಆದರೆ ಒಳಗೆ ಹೋಗುವುದಿಲ್ಲ. ಇದರೊಳಗೆ ಪ್ರವೇಶಿಸಿದವರು ಒಂದು ಹುಣ್ಣಿಮೆಯೊಳಗಾಗಿ ಸಾಯುತ್ತಾರೆ. ಆ ಬಿಳಿಯನೂ ನೀವು ನೋಡಿದ ಗವಿಯೊಳಗೆ ಸತ್ತ.'

ಈ ಮುದುಕಿಗೆ ಎಲ್ಲ ವಿಷಯವೂ ಹೇಗೆ ತಿಳಿಯಿತೆಂದು ಆಶ್ಚರ್ಯವಾಯಿತು.

'ಬನ್ನಿ ಒಡೆಯರೆ, ಇಲ್ಲಿ ನಿಧಿಯನ್ನು ಸಂಗ್ರಹಿಸಿದವರು ರಹಸ್ಯ ಕಂಡು ಹಿಡಿದವರಿಂದ ರಕ್ಷಿಸಲು ಈ ಗೋಡೆ ಕಟ್ಟುತ್ತಿದ್ದರು. ಆದರೆ ಅವರಿಗೆ ಸಮಯ ಸಾಲಲಿಲ್ಲ.' ಅವಳು ಅಪೂರ್ಣವಾದ ಗೋಡೆಯೊಂದನ್ನು ತೋರಿಸಿದಳು.

ಫೌಲಟಾ ತನಗೆ ಬಹಳ ಭಯವಾಗುತ್ತದೆಂದೂ, ತಾನು ಮುಂದೆ ಬರುವುದಿಲ್ಲವೆಂದೂ ಹೇಳಿದಳು. ಅವಳನ್ನು ಆ ಅಪೂರ್ಣವಾದ ಗೋಡೆಯ ಬಳಿ ಕುಳ್ಳಿರಿಸಿ ನೀರು ಹಾಗೂ ಮಾಂಸದ ಬುಟ್ಟಿಯನ್ನು ಅವಳ ಬಳಿಯಿರಿಸಿ ಮುಂದೆ ಹೋದೆವು.

ಮುಂದೆ ಹದಿನೈದು ಗಜಗಳ ನಂತರ ಒಂದು ಮರದ ಬಾಗಿಲು ಕಾಣಿಸಿತು. ತೆರೆದವರಾರೋ ಅದನ್ನು ಮುಚ್ಚಲು ಮರೆತಿದ್ದರು. ಬಾಗಿಲ ಬಳಿಯೇ ಆಡಿನ ಚರ್ಮದ ಚೀಲ ಬಿದ್ದಿತ್ತು.

'ಹಿ! ಹ್ಹಿ! ಗಗೂಲ್ ಗಹಗಹಿಸಿ ನಕ್ಕಳು. ಅವಳ ಕೈಯಲ್ಲಿದ್ದ ದೀಪದ ಬೆಳಕು ಅದರ ಮೇಲೆ ಬಿದ್ದಿತ್ತು. 'ನಾನು ಹೇಳಲಿಲ್ಲವೆ? ಆ ಬಿಳಿಯ ಚೀಲವನ್ನು ಬಿಟ್ಟು ಹೋದ ಎಂದು.'

ಗುಡ್ ಬಾಗಿ ಅದನ್ನು ಕೈಗೆತ್ತಿಕೊಂಡರು.

'ಓ ದೇವರೆ! ಇದರ ತುಂಬಾ ವಜ್ರಗಳಿರಬೇಕು' ಅವರು ಪಿಸುಗುಟ್ಟಿದರು. ನಂತರ ಸೊಲೊಮನ್ ನಿಧಿಯಿದ್ದ ಕೋಣೆಗೆ ಹೋದೆವು. ಅದೊಂದು ಕಲ್ಲಿನಲ್ಲಿ ಕಟೆದ ಕೊಠಡಿ. ಅದರಲ್ಲಿ ಕೆಂಪು ಬಣ್ಣ ಬಳಿದ ಹನ್ನೆರಡು ಪೆಟ್ಟಿಗೆಗಳಿದ್ದವು.

'ಅಲ್ಲಿ ವಜ್ರಗಳಿವೆ. ದೀಪ ತನ್ನಿರಿ' ನಾನೆಂದೆ.

ಸರ್ ಹೆನ್ರಿ ದೀಪ ತಂದರು. ಪೆಟ್ಟಿಗೆಯ ಬಾಗಿಲು ತೆರೆದೆ. ವಜ್ರಗಳಿರಲಿಲ್ಲ. ಬದಲಾಗಿ ಅಪರಿಚಿತ ಭಾಷೆಯ ಅಕ್ಷರಗಳಿದ್ದ ಚಿನ್ನದ ಪಟ್ಟಿಗಳಿದ್ದವು. ಪ್ರತಿ ಪೆಟ್ಟಿಗೆಯಲ್ಲೂ ಎರಡು ಸಾವಿರ ಚಿನ್ನದ ತುಂಡುಗಳಿದ್ದವು.

'ಡ. ಸಿಲ್ವೆಸ್ಟ್ರ ಚೀಲದಲ್ಲಿ ತುಂಬಿದ ವಜ್ರಗಳಲ್ಲದೆ ಬೇರೆ ವಜ್ರಗಳೇ ಕಾಣುತ್ತಿಲ್ಲ' ಗುಡ್ ನುಡಿದರು.

'ಒಡೆಯರೆ, ಆ ಕತ್ತಲಿನಲ್ಲಿವೆ ನೋಡಿ. ಅಲ್ಲಿ ಮೂರು ತಿಜೋರಿಗಳಿವೆ'

'ಸರ್ ಹೆನ್ರಿ ಆ ಮೂಲೆಯಲ್ಲಿ ನೋಡಿ' ನಾನೆಂದೆ.

'ಓ ದೇವರೆ! ಇಲ್ಲಿ ನೋಡಿ' ಅವರು ಕೂಗಿದರು.

ಅಲ್ಲಿ ಮೂರು ಕಲ್ಲಿನ ತಿಜೋರಿಗಳಿದ್ದವು. ಪ್ರತಿಯೊಂದು ಎರಡು ಚದರಡಿ ಇದ್ದವು. ಅವುಗಳೊಳಗೆ ಸಾಣೆಹಿಡಿದ ದೊಡ್ಡ ದೊಡ್ಡ ವಜ್ರಗಳಿದ್ದವು.

'ನಾವು ಪ್ರಪಂಚದಲ್ಲೇ ಅತ್ಯಂತ ಶ್ರೀಮಂತರಾಗುತ್ತೇವೆ' ನಾನೆಂದೆ. ನಾವು ವಜ್ರದ ಹೊಳಪನ್ನು ನೋಡುತ್ತಾ ನಿಂತೆವು.

'ಹ್ಹ! ಹ್ಹ! ಹ್ಹ!' ಗಗೂಲ್ ಗಹಗಹಿಸಿದಳು. 'ನೀವು ಪ್ರೀತಿಸುವ ಹೊಳೆಯುವ ಕಲ್ಲುಗಳು. ತೆಗೆದುಕೊಳ್ಳಿರಿ ತಿನ್ನಿರಿ, ಕುಡಿಯಿರಿ ಹ್ಹ! ಹ್ಹ!'

ಲಕ್ಷಾಂತರ ಪೌಂಡು ವಜ್ರಗಳು, ಸಾವಿರಾರು ಪೌಂಡು ಚಿನ್ನ ಅಲ್ಲಿದ್ದವು. ನಾವು ಇನ್ನೆರಡು ತಿಜೋರಿ ತೆರೆದೆವು. ಒಂದರಲ್ಲಿ ತುದಿಯ ತನಕ ವಜ್ರಗಳಿದ್ದವು. ಇನ್ನೊಂದರಲ್ಲಿ ಕಾಲು ಭಾಗ ಮಾತ್ರವಿತ್ತು.

ಈ ನಡುವೆ ನಿಧಿಯ ಕೋಣೆಯಿಂದ ನುಸುಳಿಕೊಂಡ ಗಗೂಲ್ ಕಲ್ಲಿನ ದೊಡ್ಡ ಬಾಗಿಲಿನತ್ತ ಹೋಗಿದ್ದಳು.

*

ಫೌಲಟಾಳ ಕೂಗು ಅಲೆಯಲೆಯಾಗಿ ಕೇಳಿಬಂತು. 'ಕಾಪಾಡಿ, ಕಾಪಾಡಿ. ಕಲ್ಲು ಬೀಳುತ್ತಿದೆ. ಕಾಪಾಡಿ ಕಾಪಾಡಿ ಇವಳು ನನ್ನನ್ನು ಕೊಲ್ಲುತ್ತಾಳೆ.' ನಾವು ಓಡಿದೆವು. ಕಲ್ಲಿನ ಬಾಗಿಲು ಕೆಳಗಿಳಿಯುತ್ತಿತ್ತು. ಅದು ನೆಲದಿಂದ ಕೇವಲ ಮೂರಡಿ ಮೇಲಿತ್ತು. ಅದರ ಬಳಿ ಫೌಲಟಾ ಹಾಗೂ ಗಗೂಲ್ ಹೋರಾಡುತ್ತಿದ್ದರು. ಫೌಲಟಾಳ ದೇಹದಿಂದ ರಕ್ತ ಇಳಿಯುತ್ತಿತ್ತು. ಆದರೂ ಆ ಧೀರ ಹುಡುಗಿ ಮುದಿ ಮಾಟಗಾತಿಯನ್ನು ಬಿಗಿಯಾಗಿ ಹಿಡಿದಿದ್ದಳು. ಹೋರಾಟದಲ್ಲಿ ಗಗೂಲ್ ಜಾರಿ ಹೋಗಿ ಇಳಿಯುತ್ತಿದ್ದ ಕಲ್ಲು ಬಾಗಿಲಿನ ಕೆಳಗೆ ಬಿದ್ದಳು. ಕಲ್ಲು ಅವಳನ್ನು ಒತ್ತಿತು. ನೋವಿನಿಂದ ಅವಳು ಭಯಂಕರವಾಗಿ ಚೀರಿದಳು. ಬಾಗಿಲು ಪೂರ್ಣ ಮುಚ್ಚಿಕೊಂಡಿತು.

ಇದೆಲ್ಲಾ ಕೆಲವೇ ಕ್ಷಣಗಳ ನಡೆಯಿತು.

ನಾವು ಫೌಲಟಾಳತ್ತ ತಿರುಗಿದೆವು. ದೊಡ್ಡ ಚಾಕುವೊಂದು ಅವಳ ಎದೆಯಲ್ಲಿ ನಾಟಿಕೊಂಡಿತ್ತು. ಅವಳು ಬದುಕುವಂತೆ ಕಾಣಲಿಲ್ಲ.

'ಬಡಪಾಯಿ, ಬಡಪಾಯಿ,' ಗುಡ್ ಉದ್ಗರಿಸಿದರು. ಆಕೆ ಸುತ್ತ ನೋಡುತ್ತ ಕೇಳಿದಳು.

'ನಿಮ್ಮ ಸ್ನೇಹಿತರು ಇಲ್ಲಿದ್ದಾರೆಯೇ? ನಾನು ಕೆಲವೊಂದು ಮಾತು ಕೇಳಬೇಕು. ಕಗ್ಗತ್ತಲಾಗುತ್ತಿದೆ. ನನಗೇನೂ ಕಾಣುತ್ತಿಲ್ಲ.'

'ಹೇಳು ಫೌಲಟಾ.'

'ನನ್ನ ಒಡೆಯನಿಗೆ ಹೇಳಿ ನಾನವನನ್ನು ಪ್ರೀತಿಸಿದೆ. ಅವನ ಜೀವ ನನ್ನದರೊಡನೆ ಬೆರೆಯುವುದಿಲ್ಲವೆಂದು ಗೊತ್ತು. ನನ್ನ ಹೃದಯದಲ್ಲಿ ಸಾಯುತ್ತಿದ್ದೇನೆಂದೆ ಅನಿಸುತ್ತಿಲ್ಲ. ಅದರ ತುಂಬಾ ಚಿರಯೌವನವಾದ ಪ್ರೀತಿಯೇ ತುಂಬಿದೆ. ನಾನು ಅವನನ್ನು ನಕ್ಷತ್ರ ಲೋಕದಲ್ಲಿ ಕಾಣುವೆ. ಅವನಿಗೆ ಹೇಳಿ ನಾನವನನ್ನು ಪ್ರೀತಿಸುವೆ.'

'ಅವಳು ಸತ್ತಳು...ಸತ್ತಳು' ಗುಡ್ ಕಂಬನಿ ಸುರಿಸುತ್ತಾ ನುಡಿದರು. 'ದುಃಖಿಸಬೇಡಿ ಬಿಡಿ' ಸರ್ ಹೆನ್ರಿ ನುಡಿದರು.

'ಏನು ಅದರರ್ಥ?' ಎಂದರು ಗುಡ್.

ಅಂದರೆ ನೀವೂ ಬೇಗದಲ್ಲೇ ಅವಳನ್ನು ಸೇರುವಿರಿ. ಬಾಗಿಲು ಮುಚ್ಚಿಕೊಂಡಿರುವುದು ಕಾಣುತ್ತಿಲ್ಲವೆ? ಇದೇ ನಮ್ಮ ಗೋರಿ.'

ಕೆಲವು ನಿಮಿಷಗಳ ಕಾಲ ನಾವು ಫೌಲಟಾಳ ಮೃತದೇಹದ ಬಳಿ ನಿಂತೆವು. ನಮ್ಮ ಶಕ್ತಿಯೆಲ್ಲ


464
ಡಿಟರ್ಜೆಂಟ್ ಬಾರ್
ಬೇರೆ ಯಾವುದೇ ಸಾಬೂನುಗಳನ್ನು ಮೀರಿಸುತ್ತದೆ
464
SUPER POWER
464
more wash at low cost
DETERGENT WASHING BAR
464
UHP
ಈಗ ಅರಶಿನ ಹಾಗೂ ನೀಲಿ ಬಣ್ಣಗಳಲ್ಲಿ ದೊರೆಯುತ್ತದೆ.
ಈಗ ಸೂಪರ್ ಪವರ್ 464 ಡಿಟರ್ಜೆಂಟ್ ಒಗೆಯುವ ಬಾರ್ ಇಮ್ಮಡಿ ಒಗೆತದ ಶಕ್ತಿ ನಿಮಗೆ ನೀಡುವುದಲ್ಲದೆ ಬೇರೆ ಸಾಬೂನುಗಳಿಗಿಂತ ಶೇಕಡ 50 ರಷ್ಟು ಹೆಚ್ಚಿನ ಒಗೆತವನ್ನು ನೀಡುತ್ತದೆ. ಈಗ 464 ಡಿಟರ್ಜೆಂಟ್ ಬಾರ್‌ನಿಂದ ದುಬಾರಿ ಉಳಿತಾಯ ಮತ್ತು ಆದರ್ಶ ಒಗೆತವನ್ನು ಪಡೆಯಿರಿ.
UHP
ಯೂನಿಯನ್ ಹೋಮ್ ಪ್ರಾಡಕ್ಟ್ಸ್ ಲಿ.
ಮಂಗಳೂರು-575 001.
ಬೇರೆ ಯಾವುದೇ ಸಾಬೂನುಗಳಿಗಿಂತ 464 ಡಿಟರ್ಜೆಂಟ್ ಬಾರ್ ಹೆಚ್ಚಿನ ಪ್ರಕಾಶಮಯವಾದ ಒಗೆತವನ್ನು ನೀಡುತ್ತದೆ

mpa/uhp/176

ದೇಹದಿಂದ ಬಸಿದು ಹೋದಂತೆ ಭಾಸವಾಯಿತು. ನಾವು ಬಯಸಿ ಬಂದ ನಿಧಿಯೊಡನೆ ನಾವು ಮೂವರೂ ಬಾಯಾರಿಕೆಯಿಂದ, ಹಸಿವಿನಿಂದ ಸಾಯಬೇಕೆಂದು ಗಗೂಲ್ ಮೊದಲಿನಿಂದಲೂ ಹಂಚಿಕೆ ಹಾಕಿಕೊಂಡಂತೆ ಕಾಣಿಸಿತು.

'ನಾವೀಗ ಏನಾದರೂ ಮಾಡಬೇಕು. ದೀಪ ಆರಿ ಹೋಗುವುದರಲ್ಲಿದೆ. ಕಲ್ಲನ್ನು ಚಲಿಸುವಂತೆ ಮಾಡುವ ಹಿಡಿಯೇನಾದರೂ ಕಾಣುತ್ತದೇನೋ ನೋಡೋಣ' ಸರ್ ಹೆನ್ರಿ ನುಡಿದರು.

ನಾವು ಬಾಗಿಲ ಬಳಿ ಹೋದೆವು. ಬಾಗಿಲಿನ ಸುತ್ತಮುತ್ತ ಯಾವ ಹಿಡಿಯೂ ಸಿಗಲಿಲ್ಲ.

'ಇದನ್ನು ಒಳಗಿನಿಂದ ತೆರೆಯಲು ಸಾಧ್ಯವಿಲ್ಲ. ಅದಕ್ಕಾಗಿಯೆ ಗಗೂಲ್ ಕಲ್ಲು ಬಾಗಿಲಿನ ಕೆಳಗಿನಿಂದ ನುಸುಳಲು ಯತ್ನಿಸಿದ್ದು' ನಾನೆಂದೆ.

'ಬಾಗಿಲಿನಿಂದೇನೂ ಪ್ರಯೋಜನವಿಲ್ಲ. ನಿಧಿಯ ಕೋಣೆಗೆ ಹೋಗೋಣ ಬನ್ನಿ' ಸರ್ ಹೆನ್ರಿ ನುಡಿದರು.

ಫೌಲಟಾಳ ದೇಹವನ್ನು ಚಿನ್ನದ ಪೆಟ್ಟಿಗೆಯ ಬಳಿ ಇರಿಸಿದೆವು. ನಾನು ಆಹಾರದ ಬುಟ್ಟಿಯನ್ನು ತೆಗೆದುಕೊಂಡೆ.

'ಆಹಾರವನ್ನು ಹಂಚಿಕೊಳ್ಳೋಣ. ಎಷ್ಟು ದಿನದ ವರೆಗೆ ಇಟ್ಟುಕೊಳ್ಳಲು ಸಾಧ್ಯವೋ ಅಷ್ಟು ದಿನ ಇಟ್ಟುಕೊಳ್ಳಬೇಕು.' ಎಂದರು ಸರ್ ಹೆನ್ರಿ. ಒಂದು ಚೂರು ಆಹಾರ ಸೇವಿಸಿ, ಹೊರಹೋಗಲು ದಾರಿಯೇನಾದರೂ ಇದೆಯೇನೋ ಎಂಬ ಆಸೆಯಿಂದ ನಮ್ಮ ಜೈಲಿನ ನೆಲ, ಗೋಡೆಗಳನ್ನೆಲ್ಲಾ ಹುಡುಕತೊಡಗಿದೆವು. ಏನೂ ಸಿಗಲಿಲ್ಲ. ಬಹುಶಃ ಆ ಕೋಣೆಗೆ ಎರಡನೆಯ ಪ್ರವೇಶವೇ ಇರಲಿಲ್ಲವೇನೋ.

'ಕ್ವಾಟರ್‌ಮನ್ ಈಗ ಸಮಯ ಎಷ್ಟು?' ಸರ್ ಹೆನ್ರಿ ಕೇಳಿದರು. ಸಮಯ ಆರು ಗಂಟೆಯಾಗಿತ್ತು. ನಾವು ಗವಿಯನ್ನು ಪ್ರವೇಶಿಸಿದಾಗ ಹನ್ನೊಂದು ಗಂಟೆ.

'ನಾವು ರಾತ್ರಿ ಹಿಂದಿರುಗದಿದ್ದರೆ ಬೆಳಿಗ್ಗೆ ಇನ್‌ಫ್ಯಾಡೂಸ್ ನಮ್ಮನ್ನು ಹುಡುಕುತ್ತಾನೆ' ನಾನೆಂದೆ.

'ಅವನಿಗೆ ಬಾಗಿಲಿನ ರಹಸ್ಯ ಗೊತ್ತಿಲ್ಲ. ಬಾಗಿಲು ಎಲ್ಲಿದೆ ಎಂದೂ ಗೊತ್ತಿಲ್ಲ. ಗೊತ್ತಾದರೂ ಬಿಡಿ ದಪ್ಪದ ಕಲ್ಲನ್ನು ಒಡೆಯಲು ಸಾಧ್ಯವಿಲ್ಲ. ಈಗ ದೇವರ ಇಚ್ಛೆಗೆ ತಲೆಬಾಗುವುದಲ್ಲದೆ ಬೇರೆ ದಾರಿಯಿಲ್ಲ. ನಿಧಿಯನ್ನು ಹುಡುಕುವವರನೇಕರು ದುರದೃಷ್ಟ ಅಂತ್ಯವನ್ನು ಹೊಂದಿದ್ದಾರೆ. ನಾವೀಗ ಅವರ ಸಂಖ್ಯೆಯನ್ನು ಹೆಚ್ಚಿಸುತ್ತೇವಷ್ಟೇ' ಸರ್ ಹೆನ್ರಿ ನುಡಿದರು.

ದೀಪ ಮಂಕಾಗುತ್ತಿತ್ತು. ಅದೊಮ್ಮೆ ಜೋರಾಗಿ ಪ್ರಜ್ವಲಿಸಿ ಚಿನ್ನದ ಪೆಟ್ಟಿಗೆ, ಫೌಲಟಾಳ ದೇಹ, ಆದರೆ ಚರ್ಮದ ಚೀಲ, ವಜ್ರಗಳು, ಸಾವನ್ನು ನಿರೀಕ್ಷಿಸುತ್ತಾ ಕುಳಿತ ನಮ್ಮ ಮುಖ-ಗಳೆಲ್ಲವನ್ನೂ ತೋರಿಸಿ ಆರಿಹೋಯಿತು.

## ೧೬

## ನಂಬಿಕೆ ಕಳೆದುಕೊಂಡೆವು

ನಾವು ಕಳೆದ ರಾತ್ರಿಯ ಸಂಪೂರ್ಣ ಚಿತ್ರಣವನ್ನು ಕೊಡಲಾರೆ. ನನ್ನ ಜೊತೆಗಾರರು ಸ್ವಲ್ಪ ಕಾಲ ನಿದ್ರಿಸಿದರು. ಹಿಮಾವೃತ ಪರ್ವತದ ಮಧ್ಯೆ ನಾವು ಬಂಧಿಗಳಾಗಿದ್ದೆವು. ಸಾವಿರಾರು ಅಡಿ ಮೇಲೆ ಸ್ವಚ್ಛ ಗಾಳಿ ಬೀಸುತ್ತಿತ್ತು. ನಾವು ಸತ್ತವರಂತೆ ಇದ್ದೆವು.

ನಮ್ಮೊಡನೆ ಒಂದು ದೇಶಕ್ಕೆ ಸಾಲುವಷ್ಟು ಸಂಪತ್ತಿತ್ತು. ತಪ್ಪಿಸಿಕೊಳ್ಳಲು ದಾರಿ ತೋರಿಸಿದವರಿಗೆ ಅದೆಲ್ಲವನ್ನೂ ಕೊಡಲು ಸಿದ್ಧರಿದ್ದೆವು. ಒಂದು ಚೂರು ಆಹಾರ ಹಾಗೂ ಒಂದು ಲೋಟ ನೀರಿಗೆ ಅದೆಲ್ಲವನ್ನೂ ಬದಲಾಯಿಸಿಕೊಳ್ಳಲು ಸಿದ್ಧರಿದ್ದೆವು.

'ನಿಮ್ಮ ಬಳಿ ಎಷ್ಟು ಬೆಂಕಿಕಡ್ಡಿಗಳಿವೆ?' ಸರ್ ಹೆನ್ರಿ ಕೇಳಿದರು.

'ಎಂಟು'

'ಒಂದು ಹಚ್ಚಿರಿ ಸಮಯ ನೋಡೋಣ'

ಐದು ಗಂಟೆಯಾಗಿತ್ತು.

'ನಮ್ಮ ಶಕ್ತಿಯನ್ನು ಕಾಯ್ದುಕೊಳ್ಳಲು ನಾವೀಗ ಆಹಾರ ಸೇವಿಸಬೇಕು.' ನಾನೆಂದೆ.

'ಏನು ಪ್ರಯೋಜನ? ನಾವು ಸಧ್ಯದಲ್ಲೇ ಸಾಯುತ್ತೇವೆ' ಗುಡ್ ನುಡಿದರು. 'ಎಲ್ಲಿ ಜೀವವಿದೆಯೋ ಅಲ್ಲಿ ಆಸೆ ಇದೆ.' ಸರ್ ಹೆನ್ರಿ ನುಡಿದರು. ಸ್ವಲ್ಪ ಮಾಂಸ ತಿಂದು ನೀರು ಕುಡಿದೆವು.

ಬಾಗಿಲಿನ ಬಳಿ ಹೋಗಿ ಹೊರಭಾಗದಲ್ಲಿರುವವರಿಗೇನಾದರೂ ಕೇಳುತ್ತದೇನೋ ಎಂಬ ಆಸೆ



# ಸೊಳ್ಳೆಗಳ ಕಾಟ ತಪ್ಪುವುದು...ಗಾಢ ನಿದ್ದೆ ಬರುವುದು




ಓಡೊಮಸ್ ಹಚ್ಚಿಕೊಂಡಾಗ ಸೊಳ್ಳೆಗಳು ನಿಮ್ಮ ಹತ್ತಿರ ಕೂಡ ಬರುವುದಿಲ್ಲ. ಆದ್ದರಿಂದ ನಿಮಗೆ ರಾತ್ರಿಯಿಡೀ ಗಾಢ ನಿದ್ದೆಯ ಸುಖ ಪ್ರಾಪ್ತವಾಗುತ್ತದೆ. ಓಡೊಮಸ್ ನಿಮ್ಮ ತ್ವಚೆಗೂ ಸುರಕ್ಷಿತವಾಗಿರುತ್ತದೆ.

ದೀರ್ಘಕಾಲ

ಸೊಳ್ಳೆಗಳ ವೈರಿ—ಬಲ್ಸಾರಾದವರ

# ಓಡೊಮಸ್

ಬಲ್ಸಾರಾ
ಸುಖಮಯ ಜೀವನಕ್ಕೆ ಆಧುನಿಕ ಸಾಧನಗಳು
BALSARA

100 ಗ್ರಾಂನ ಮಿತವ್ಯಯಕರ ಪ್ಯಾಕಿಂಗ್‌ನಲ್ಲಿ ಈಗಲೂ ಸಹ ಲಭ್ಯವಿದೆ.

CHAITRA-BLS-243 KAN

ಯಿಂದ ಜೋರಾಗಿ ಕೂಗಿದೆವು. ಸಮುದ್ರಯಾನದಲ್ಲಿ ಪಳಗಿದ್ದ ಗುಡ್ ಭಯಂಕರ ಶಬ್ದ ಮಾಡಿದರು. ಅಷ್ಟು ಜೋರಾದ ಶಬ್ದವನ್ನು ನಾನು ಕೇಳಿರಲಿಲ್ಲ. ಆದರೆ ಅದರಿಂದೇನೂ ಪ್ರಯೋಜನವಾಗಲಿಲ್ಲ.

ನಿಷ್ಪ್ರಯೋಜಕ ವಜ್ರದೆದುರು ಮತ್ತೆ ಹೋಗಿ ಕುಳಿತೆವು. ನಾನು ಸರ್ ಹೆನ್ರಿಯ ಭುಜದ ಮೇಲೆ ತಲೆಯಿಟ್ಟು ಅಳತೊಡಗಿದೆ. ಇನ್ನೊಂದು ಮೂಲೆಯಿಂದ ಗುಡ್ ಅಳುವುದು ಕೇಳಿಸಿತು.

ನಾವಿಬ್ಬರೂ ಮಕ್ಕಳಂತೆ ಅಳತೊಡಗಿದಾಗ ಸರ್ ಹೆನ್ರಿ ನಮ್ಮನ್ನು ದುಃಖದಿಂದ ವಿಮುಖವಾಗುವಂತೆ ಮಾಡಲು ಕಥೆ ಹೇಳತೊಡಗಿದರು. ಸಮಯ ನೋಡಲು ಬೆಂಕಿಕಡ್ಡಿ ಹಚ್ಚಿದೆ. ಏಳು ಗಂಟೆಯಾಗಿತ್ತು.

'ಇಲ್ಲಿನ ಗಾಳಿ ಸ್ವಚ್ಛವಾಗಿದೆಯಲ್ಲ! ಹೇಗೆ?' ನಾನು ಕೇಳಿದೆ.

'ಈ ಬಗ್ಗೆ ನಾನು ಯೋಚಿಸಿಯೇ ಇರಲಿಲ್ಲ. ಕಲ್ಲು ಬಾಗಿಲಿನಿಂದಂತೂ ಗಾಳಿ ಬರುವುದು ಸಾಧ್ಯವಿಲ್ಲ. ಇನ್ನೆಲ್ಲಿಂದಲೋ ಬರುತ್ತಿರಬೇಕು. ನೋಡೋಣ' ಗುಡ್ ನುಡಿದರು.

ಗಾಳಿ ಬರುತ್ತಿರುವುದನ್ನು ಕಂಡುಹಿಡಿಯಲು ನಮ್ಮ ಕೈಗಳಿಂದ ತಡವತೊಡಗಿದೆವು. ಒಂದು ಘಂಟೆ ನಂತರ ನಾನು ಹಾಗೂ ಸರ್ ಹೆನ್ರಿ ಸುಮ್ಮನಾದೆವು. ಆದರೆ ಗುಡ್ ಮುಂದುವರೆಸಿದರು.

'ಕ್ವಾಟರ್‌ಮನ್ ಇಲ್ಲಿ ಕೈಯಿಡಿ. ನಿಮಗೇನಾದರೂ ಅನುಭವವಾಗುತ್ತಿದೆಯೆ?'

'ಗಾಳಿ ಬರುತ್ತಿರುವ ಅನುಭವವಾಗುತ್ತಿದೆ'

ಒಂದು ಬೆಂಕಿ ಕಡ್ಡಿ ಹಚ್ಚಿದೆವು. ಕಲ್ಲಿನ ಒಂದು ಉಂಗುರ ಕಾಣಿಸಿತು. ನಾವು ಮಾತನಾಡಲಾರದಷ್ಟು ಉದ್ವೇಗಗೊಂಡಿದ್ದೆವು. ಗುಡ್ ಚಾಕುವಿನಿಂದ ಉಂಗುರವನ್ನು ಎಬ್ಬಿ ಎಳೆದರು. ಏನೂ ಪ್ರಯೋಜನವಾಗಲಿಲ್ಲ.

ನಾನೂ ಎಳೆದೆ. ಪ್ರಯೋಜನವಾಗಲಿಲ್ಲ. ಸರ್ ಹೆನ್ರಿಯೂ ಪ್ರಯತ್ನಿಸಿ ಸೋತರು.

ಗುಡ್ ತಮ್ಮ ಗಟ್ಟಿಯಾದ ರೇಷ್ಮೆ ಕರವಸ್ತ್ರವನ್ನು ಉಂಗುರಕ್ಕೆ ಸುತ್ತಿ 'ಕ್ವಾಟರ್‌ಮನ್, ಸರ್ ಹೆನ್ರಿ ನಾನು ಸೂಚನೆ ಕೊಟ್ಟಾಗ ಎಳೆಯಿರಿ' ಎಂದರು.

ಪ್ರಕೃತಿ ನಮಗೆ ಕೊಟ್ಟ ಶಕ್ತಿಯನ್ನೆಲ್ಲಾ ಒಗ್ಗೂಡಿಸಿ ಎಳೆದೆವು. ಒಂದು ಶಬ್ದದೊಡನೆ ನುಗ್ಗಿದ ಗಾಳಿಯೊಡನೆ ನಾವೆಲ್ಲ ನೆಲದ ಮೇಲೆ ಬಿದ್ದೆವು.

'ಬೆಂಕಿ ಕಡ್ಡಿ ಹಚ್ಚಿರಿ ಕ್ವಾಟರ್‌ಮನ್' ಎಂದರು ಸರ್ ಹೆನ್ರಿ. ಹಚ್ಚಿದೆ. ಕಲ್ಲು ಮೆಟ್ಟಲುಗಳು ಕಾಣಿಸಿದವು. 'ಏನು ಮಾಡೋಣ?' ಗುಡ್ ಕೇಳಿದರು.

'ಮೆಟ್ಟಿಲು ಹತ್ತಿ ಹೋಗೋಣ.'

'ನಿಲ್ಲಿ ಕ್ವಾಟರ್‌ಮನ್, ಉಳಿದ ಆಹಾರವನ್ನು ತನ್ನಿ. ಮುಂದೆ ಬೇಕಾಗುತ್ತದೆ' ಸರ್ ಹೆನ್ರಿ ನುಡಿದರು.

ಆಹಾರ ತರಲು ಹೋದಾಗ ಯೋಜನೆಯೊಂದು ಹೊಳೆಯಿತು. ಮೊದಲ ತಿಜೋರಿಯಿಂದ ವಜ್ರಗಳನ್ನು ತೆಗೆದು ಕೋಟಿನ ಜೇಬಿಗೆಲ್ಲಾ ತುಂಬಿಕೊಂಡೆ. ನಂತರ ಮೂರನೆ ತಿಜೋರಿಯಿಂದ ದೊಡ್ಡ ವಜ್ರಗಳನ್ನು ತುಂಬಿಕೊಂಡೆ.

'ಬನ್ನಿ ಕ್ವಾಟರ್‌ಮನ್' ಎಂದರು ಸರ್ ಹೆನ್ರಿ. ಅವರಾಗಲೆ ಮೊದಲ ಮೆಟ್ಟಲೇರಿದ್ದರು.

'ಎಚ್ಚರಿಕೆಯಿಂದ ನಡೆಯಿರಿ. ನೆಲದಲ್ಲಿ ಬಿಲಗಳಿರಬಹುದು.' ನಾನೆಂದೆ. ಹದಿನೈದು ಮೆಟ್ಟಲೇರಿದ ನಂತರ ಸರ್ ಹೆನ್ರಿ ನಿಂತರು. 'ಇದೇ ಕೊನೆ. ಮುಂದೆ ಬೇರೆ ದಾರಿ ಇರುವಂತಿದೆ ಬನ್ನಿ.'

ಉಳಿದ ಎರಡು ಕಡ್ಡಿಗಳಲ್ಲಿ ಒಂದನ್ನು ಹಚ್ಚಿದೆ. ಆ ಬೆಳಕಿನಲ್ಲಿ ಎಡ ಹಾಗೂ ಬಲಭಾಗಗಳಲ್ಲಿ ಎರಡು ಬಾಗಿಲುಗಳು ಕಾಣಿಸಿದವು. ಗುಡ್ ಎಡ ಬಾಗಿಲಿನಿಂದ ಗಾಳಿ ಬರುತ್ತಿರುವುದನ್ನು ಗಮನಿಸಿದರು. ಅವರು ಹೇಳಿದರು. 'ಗಾಳಿ ಯಾವಾಗಲೂ ಒಳಕ್ಕೆ ಬೀಸುತ್ತದೆ, ಹೊರಕ್ಕಲ್ಲ. ನಾವು ಗಾಳಿಯ ವಿರುದ್ಧ ದಿಕ್ಕಿನಲ್ಲಿ ಹೋಗೋಣ' ನಾವು ಬಲ ಬಾಗಿಲಿನಲ್ಲಿ ಹೊರಟೆವು.

ಅನೇಕ ಗಂಟೆಗಳ ಕಾಲ ನಡೆದ ನಂತರ ನಾವು ದಣಿದು ನಿಂತೆವು. ನಮ್ಮ ಬಳಿ ಇದ್ದ ಆಹಾರದ ಕೊನೆಯ ತುಂಡನ್ನೂ ತಿಂದೆವು. ಕತ್ತಲೆಯ ಗವಿಯಿಂದ ಕತ್ತಲೆಯ ಸುರಂಗಕ್ಕೆ ಬಂದಂತಾಯಿತು.

ಏನೋ ಸದ್ದು ಕೇಳಿದಂತೆ ಭಾಸವಾಯಿತು. ಉಳಿದವರಿಗೆ ಅದನ್ನು ಕೇಳಲು ಹೇಳಿದೆ.

'ಓ ದೇವರೆ! ಹರಿಯುವ ನೀರಿನ ಶಬ್ದ' ಗುಡ್ ನುಡಿದರು. ನಾವು ನೀರಿನ ಬಳಿಗೆ ಹೋದೆವು.

ಇದ್ದಕ್ಕಿದ್ದಂತೆ ಗುಡ್ ಚೀತ್ಕರಿಸಿದರು. ಅವರು ನೀರಿಗೆ ಬಿದ್ದಿದ್ದರು.

'ಗುಡ್ ಗುಡ್ ಎಲ್ಲಿದ್ದೀರಿ ?' ಭಯದಿಂದ ಕೂಗಿದೆವು.

'ನಾನೊಂದು ಕಲ್ಲು ಹಿಡಿದಿದ್ದೇನೆ. ಕಡ್ಡಿಗೀರಿ ನೀವೆಲ್ಲಿದ್ದೀರೆಂದು ತೋರಿಸಿ' ಗುಡ್‌ರ ಧ್ವನಿ ಕೇಳಿಸಿತು. ಉಳಿದ ಒಂದೇ ಒಂದು ಕಡ್ಡಿ ಗೀರಿದೆ. ಅದರ ಮಂದ ಬೆಳಕು ನಮ್ಮ ಜೊತೆಗಾರರನ್ನು ತೋರಿಸಿತು.

'ನನ್ನನ್ನು ಹಿಡಿಯಲು ಸಿದ್ಧರಾಗಿ. ಈಜಿಬರುವೆ' ಗುಡ್ ಕೂಗಿದರು.

ಮುಂದುವರೆಯಲು ಭಯವಾಯಿತು. ಬಂದ ದಾರಿಯಲ್ಲೇ ಹಿಂದಿರುಗಿದೆವು. ನಂತರ ಎಡಭಾಗದ ಬಾಗಿಲಿನಲ್ಲಿ ಹೊರಟೆವು. ಈ ಬಾರಿ ಸರ್ ಹೆನ್ರಿ ಮುಂದೆ ಹೊರಟರು. ಅವರು ಇದ್ದಕ್ಕಿದ್ದಂತೆ ನಿಂತರು.

'ನೋಡಿ ನನಗೆ ತಲೆ ಕೆಟ್ಟಿದೆಯೋ ಅಥವಾ ಅದು ಬೆಳಕೋ?' ನಾವು ದಿಟ್ಟಿಸಿದೆವು. ದೂರದಲ್ಲಿ ಮಂದ ಬೆಳಕು ಕಾಣಿಸಿತು.

ಸಂತೋಷದಿಂದ ಕೂಗುತ್ತಾ ಮುಂದುವರೆದೆವು. ಐದು ನಿಮಿಷಗಳಲ್ಲಿ ಸ್ವಚ್ಛ ಗಾಳಿ ಬರತೊಡಗಿತು. ಕೊನೆಗೂ ನೆಲ ಸಿಕ್ಕಿತು. ನಮ್ಮ ಮೇಲ್ಗಡೆ ನಕ್ಷತ್ರಗಳು ಹೊಳೆಯುತ್ತಿದ್ದವು.

ಹುಲ್ಲಿನ ಮೇಲೆ ಕುಳಿತು ಸಂತಸದಿಂದ ಕೂಗಿದೆವು. ನಮ್ಮ ಗೋರಿಯಾಗಲಿದ್ದ ಗವಿಯಿಂದ ತಪ್ಪಿಸಿಕೊಂಡಿದ್ದೆವು. ಮತ್ತು ನಾವೆಂದೂ ನೋಡಲಾರೆವೆಂದುಕೊಂಡಿದ್ದ ಅರುಣೋದಯವನ್ನು ನೋಡಿದೆವು. ಬೆಳಕಿನಲ್ಲಿ ನೋಡಿದೆವು. ನಾವು ಪರ್ವತದ ಬುಡದ ಗವಿಯ ಪ್ರಾರಂಭದಲ್ಲಿನ ಗಣಿಯ ಎದುರಿದ್ದೆವು.

ನಾವು ಮೇಲೆದ್ದು ಸೋತ ಹೆಜ್ಜೆಗಳನ್ನಿಡುತ್ತಾ ಹೊರಟೆವು. ಪೂರ್ಣ ಸೂರ್ಯೋದಯವಾಗುವ ವೇಳೆಗೆ ದೊಡ್ಡ ರಸ್ತೆಯನ್ನು ಸೇರಿದೆವು. ರಸ್ತೆಯಿಂದ ನೂರು ಗಜ ದೂರದಲ್ಲಿ ಗುಡಿಸಲಿನ ಮುಂದೆ ಜನರೂ ಬೆಂಕಿಯೂ ಕಾಣಿಸಿದವು. ನಾವು ಅವರತ್ತ ಹೋದೆವು.

ಅವರಲ್ಲೊಬ್ಬ ನಮ್ಮನ್ನು ನೋಡಿ ಭಯದಿಂದ ಕೂಗುತ್ತಾ ಕುಸಿದು ಕುಳಿತ.

'ಇನ್‌ಫ್ಯಾಡೂಸ್! ಇನ್‌ಫ್ಯಾಡೂಸ್! ನಾವು ನಿನ್ನ ಸ್ನೇಹಿತರು' ಆತ ಎದ್ದು ಓಡಿ ಬಂದ. 'ನನ್ನ ಒಡೆಯರೆ, ನೀವು ಸಾವಿನಿಂದ ಪಾರಾಗಿ ಬಂದಿರಿ!'

## ೧೭

## ಕಂಡು ಹಿಡಿದೆವು

ಇಗ್ನೋಸಿ ಕುತೂಹಲದಿಂದ ನಮ್ಮ ಕಥೆ ಕೇಳಿದ. ಗಗೂಲ್ ಸತ್ತ ಸುದ್ದಿ ಹೇಳಿದಾಗ ಆತ, 'ಅವಳೊಬ್ಬಳು ವಿಚಿತ್ರ ಹೆಂಗಸು, ಅವಳು ಸತ್ತಿದ್ದರಿಂದ ನನಗೆ ಸಂತೋಷವಾಗಿದೆ' ಎಂದ.

ನಾನು ಹೇಳಿದೆ 'ಇಗ್ನೋಸಿ ನಿನ್ನನ್ನು ಬಿಟ್ಟು ಹೋಗುವ ಕಾಲ ಬಂದಿದೆ. ನೀನು ನಮ್ಮೊಡನೆ ಸೇವಕನಾಗಿ ಬಂದೆ. ಈಗ ರಾಜನಾದೆ. ನ್ಯಾಯದಿಂದ ರಾಜ್ಯವಾಳು. ಯಶಸ್ಸು ಸಿಗಲಿ. ನಾಳೆ ಬೆಳಿಗ್ಗೆ ಪರ್ವತ ದಾಟಲು ನಮಗೆ ಜನರನ್ನು ಒದಗಿಸು.'

ಇಗ್ನೋಸಿ ತನ್ನೆರಡು ಕೈಗಳಿಂದ ಮುಖ ಮುಚ್ಚಿಕೊಂಡ. ಬಹಳ ಹೊತ್ತಿನ ನಂತರ ಹೇಳಿದ: 'ನನ್ನ ಹೃದಯ ಭಾರವಾಗಿದೆ. ನೀವು ಹೊರಟು ಹೋಗುವಂತಹ ಅಪರಾಧ ನಾನೇನು ಮಾಡಿದೆ? ಯುದ್ಧದಲ್ಲಿ ನನ್ನೊಡನೆ ಇದ್ದವರು ಜಯದ, ಶಾಂತಿಯ ಕಾಲದಲ್ಲಿ ಹೋಗುವಿರಾ?'

'ನೀನು ಜುಲು ಪ್ರದೇಶದಲ್ಲಿದ್ದರೂ ನಿನ್ನ ತಾಯಿಯ ಮಾತು ಕೇಳಿದನಂತರ ನಿನ್ನ ಮನಸ್ಸು ನಿನ್ನ ಜನ್ಮಸ್ಥಳದೆಡೆ ಎಳೆಯುತ್ತಿರಲಿಲ್ಲವೆ?'

'ಹೌದು'

'ಅದೇ ರೀತಿ, ಇಗ್ನೋಸಿ, ನಮ್ಮ ಹೃದಯವೂ ನಮ್ಮ ಸ್ವಂತ ಜಾಗಕ್ಕೆ ಹೋಗಲು ಬಯಸುತ್ತಿದೆ.'

ನಿಶ್ಯಬ್ದ ತಲೆ ಹಾಕಿತು. ಇಗ್ನೋಸಿ ಅದನ್ನು ಮುರಿದ.

'ಚಿಕ್ಕಪ್ಪ ಇನ್‌ಫ್ಯಾಡೂಸ್ ನಿಮಗೆ ದಾರಿ ತೋರುವ. ಪರ್ವತ ದಾಟಲು ಬೇರೊಂದು ದಾರಿ ಇದೆ. ಓ ಸ್ನೇಹಿತರೆ ನಮಸ್ಕಾರ. ನನ್ನನ್ನು ಹೆಚ್ಚುಕಾಲ ನೋಡಬೇಡಿ ನನ್ನ ಹೃದಯ ಸಹಿಸಲಾರದು. ನಾನು ಹೆಂಗಸಿನಂತೆ ಅಳುವುದನ್ನು ತಪ್ಪಿಸಿ. ಓ ನನ್ನ ಒಡೆಯರೆ ಹಾಗೂ ಸ್ನೇಹಿತರೆ ಅಂತಿಮ ನಮಸ್ಕಾರ.'

ಇಗ್ನೋಸಿ ಎದ್ದುನಿಂತು ಕೆಲವು ನಿಮಿಷಕಾಲ ನಮ್ಮನ್ನು ನೋಡಿದ. ನಂತರ ತನ್ನ ವಸ್ತ್ರವನ್ನು ಮುಖದ ಮೇಲೆ ಹಾಕಿ ಮುಚ್ಚಿಕೊಂಡ.

ನಾವು ನಿಶ್ಶಬ್ದವಾಗಿ ಅಲ್ಲಿಂದ ಹೊರ ಹೋದೆವು.

ನಾವು ಪ್ರಯಾಣ ಮಾಡುತ್ತಿದ್ದಾಗ ಇನ್ ಫ್ಯಾಡೂಸ್ ನಮಗೆ ಎರಡನೆ ದಾರಿಯ ಬಗ್ಗೆ ಹೇಳಿದ ಮತ್ತು ಕೆಲವು ದಿನದ ಪ್ರಯಾಣದ ನಂತರ ಮರುಳುಗಾಡಿನ ನಡುವೆ ಒಂದು ಸಸ್ಯ ಸಮೃದ್ಧ ಜಾಗ ಇದೆಯೆಂದೂ ಹೇಳಿದ. ಇಗ್ನೋಸಿಯ ತಾಯಿ ತನ್ನ ಮಗುವಿನೊಡನೆ ವಿಶಾಲ ಮರುಭೂಮಿಯನ್ನು ಹೇಗೆ ದಾಟಿದಳೆಂದು ಆಶ್ಚರ್ಯವಿತ್ತು. ಈಗ ಸ್ಪಷ್ಟವಾಯ್ತು.

ನಮ್ಮ ಮಿತ್ರ ಇನ್‌ಫ್ಯಾಡೂಸ್‌ನನ್ನು ಬೀಳ್ಕೊಡುವ ಸಮಯ ಬಂದಿತು. ಆತ ಅತ್ತುಬಿಟ್ಟ. ಇನ್‌ಫ್ಯಾಡೂಸನ ಕೈ ಕುಲುಕಿದೆವು. ಅವನ ಸೈನಿಕರು ಬೀಳ್ಕೊಡುವಾಗ 'ಕೂಮ್' ಎಂದರು. ನಾವು ನಮ್ಮ ಮರುಪ್ರಯಾಣ ಪ್ರಾರಂಭಿಸಿದೆವು.

ಪ್ರಯಾಣದ ಮೂರನೆ ದಿನ ಇನ್‌ಫ್ಯಾಡೂಸ್ ಹೇಳಿದ್ದ ಸಸ್ಯಸಮೃದ್ಧ ಜಾಗ ಸಿಕ್ಕಿತು. ನನ್ನ ಜೊತೆಗಾರರೊಡನೆ ನಡೆಯುತ್ತಿದ್ದ ನಾನು ಕಣ್ಣುಜ್ಜಿಕೊಂಡು ನೋಡಿದೆ. ಇಪ್ಪತ್ತು ಗಜ ಆಚೆ ಮರದ ನೆರಳಿನಲ್ಲಿ ಒಂದು ಸುಂದರ ಗುಡಿಸಲು ಕಾಣಿಸಿತು.

'ಇಲ್ಲೇಕೆ ಗುಡಿಸಲು?' ನಾನೆಂದೆ. ಹಾಗೆನ್ನುತ್ತಿದ್ದಾಗ ಗುಡಿಸಲಿನ ಬಾಗಿಲು ತೆರೆಯಿತು. ಅದರೊಳಗಿಂದ ಚರ್ಮದ ಬಟ್ಟೆ ಧರಿಸಿದ್ದ ಬಿಳಿಯ ಮನುಷ್ಯನೊಬ್ಬ ಹೊರಬಂದ. ಆತನ ಬಲಗಾಲು ಮುರಿದಂತೆ ಕಾಣುತ್ತಿತ್ತು. ಆತನಿಗೆ ಉದ್ದವಾದ ಕಪ್ಪುಗಡ್ಡವಿತ್ತು. ನಾನು ಹುಚ್ಚನಾದೆನೋ ಎನಿಸಿತು. ಅಲ್ಲಿಗೆ ಯಾವ ಬೇಟೆಗಾರನೂ ಬರುವುದು ಸಾಧ್ಯವಿರಲಿಲ್ಲ.

'ನೋಡಿ ಆತ ಬಿಳಿಯ ಮನುಷ್ಯನೋ ಅಥವಾ ನಾನು ಹುಚ್ಚನೋ' ನಾನೆಂದೆ.

ಸರ್ ಹೆನ್ರಿ ಹಾಗೂ ಗುಡ್ ಅವನತ್ತ ನೋಡಿದರು. ಆ ಗಡ್ಡದಾರಿ ಕೂಗುತ್ತಾ ನಮ್ಮೆಡೆಗೆ ಬರಲಾರಂಭಿಸಿದ. ಸರ್ ಹೆನ್ರಿ ಒಂದೇ ನೆಗೆತಕ್ಕೆ ಅವನ ಬಳಿ ಹಾರಿದರು.

'ಓ ದೇವರೆ ಇವನು ನನ್ನ ತಮ್ಮ ಜಾರ್ಜ್‌ನೇ' ಅವರು ಕೂಗಿದರು. ಕೂಗಿನ ಶಬ್ದ ಕೇಳಿ ಗುಡಿಸಲಿನಿಂದ ಮತ್ತೊಬ್ಬ ಬಂದೂಕುಧಾರಿ ಬಂದ. ನನ್ನನ್ನು ನೋಡಿ ಕೇಳಿದ.

'ನನ್ನ ಗುರುತು ಸಿಗಲಿಲ್ಲವೇ ಸ್ವಾಮಿ. ನಾನು ಬೇಟೆಗಾರ ಜಿಮ್. ನಾವಿಲ್ಲಿ ಎರಡು ವರ್ಷದಿಂದ ಇದ್ದೇವೆ' ಆತ ಹರ್ಷದಿಂದ ನನ್ನ ಕಾಲಿಗೆರಗಿದ.

ಹೆನ್ರಿ ಮಾತನಾಡಿದರು. 'ನೀನು ಸತ್ತಿದ್ದೀಯೆಂದು ತಿಳಿದಿದ್ದೆ. ಕೊನೆಗೂ ಸೊಲೊಮನ್ ಪರ್ವತಗಳಲ್ಲಿ ನಿನ್ನನ್ನು ಕಂಡುಹಿಡಿದೆ.'

'ನಾನು ಸೊಲೊಮನ್ ಪರ್ವತ ದಾಟಲು ಯತ್ನಿಸಿದೆ. ಆದರೆ ನನ್ನ ಮೇಲೆ ಬಂಡೆಯೊಂದು ಉರುಳಿ ಕಾಲು ಮುರಿದು ಮುಂದುವರಿಯಲಾಗದಂತೆಯೂ ಹಿಂದಿರುಗಲಾರದಂತೆಯೂ ಆಯಿತು.'

ನಾನು ಮುಂದೆ ಬಂದೆ. 'ಹೇಗಿದ್ದೀರಿ ನೀವಿಲ್ಲಿ? ನನ್ನನ್ನು ಗುರುತಿಸುವಿರಾ?' ನಾನೆಂದೆ.

'ಏಕಿಲ್ಲ? ನೀವು ಕ್ವಾಟರ್‌ಮನ್‌ರಲ್ಲವೆ? ಮತ್ತು ಇವರು ಗುಡ್'

ಆ ರಾತ್ರಿ ಬೆಂಕಿಯ ಎದುರು ಕುಳಿತಾಗ ಜಾರ್ಜ್ ಕರ್ಟಿಸ್ ತನ್ನ ಕಥೆ ಹೇಳಿದ. ಸೊಲೊಮನ್ ಪರ್ವತಕ್ಕೆ ಈ ದಾರಿ ಒಳ್ಳೆಯದೆಂದು ತಿಳಿದು ಇಲ್ಲಿಗೆ ಬಂದಾಗ ಆಘಾತವಾಯಿತು. ನಡೆಯುವುದೇ ಅಸಾಧ್ಯವಾದಾಗ ಇಲ್ಲೇ ನೆಲೆಸಿದೆ. ಅವರ ಬಳಿ ಬೇಕಾದಷ್ಟು ಬಂದೂಕು ಹಾಗೂ ಗುಂಡುಗಳಿದ್ದವು. ಪ್ರಾಣಿಗಳನ್ನು ಹೊಡೆದು ತಿನ್ನುತ್ತಿದ್ದರು. ಚರ್ಮ ಉಡುಪಿಗಾಗುತ್ತಿತ್ತು.

'ಮತ್ತು ಎರಡು ವರ್ಷಗಳಿಂದ ನಾವಿಲ್ಲಿ ಎರಡನೆಯ ರಾಬಿನ್‌ಸನ್ ಕ್ರೂಸೋ ಮತ್ತು ಅವನ ಮನುಷ್ಯ ಶುಕ್ರನಂತೆ ಸ್ಥಳೀಯರಾರಾದರೂ ಸಹಾಯ ಮಾಡಬಹುದೇ ಎಂಬ ಆಸೆಯಿಂದ ಇದ್ದೆವು. ಈಗ ನೀವು ಬಂದಿರಿ. ನೀವು ಇಂಗ್ಲೆಂಡಿನಲ್ಲಿ ಸುಖವಾಗಿದ್ದೀರಿ ಎಂದು ಭಾವಿಸಿದ್ದೆ' ಎಂದು ಮಾತು ಮುಗಿಸಿದ.

*

ಆರು ತಿಂಗಳ ನಂತರ ನಾನು ಡರ್ಬಾನ್‌ನ ನನ್ನ ಚಿಕ್ಕ ಮನೆಯಲ್ಲಿ ಕ್ಷೇಮವಾಗಿ ಕುಳಿತಿದ್ದೆ. ಅಲ್ಲೇ ನಾನಿದನ್ನು ಬರೆಯುತ್ತಿರುವುದು.

ಇದೀಗ, ಈ ಕೊನೆಯ ಶಬ್ದವನ್ನು ಬರೆದು ಮುಗಿಸಿದ ನಂತರ ಸ್ಥಳೀಯ ಅಂಚೆಪಾಲೊಬ್ಬ

ಕಾಗದವೊಂದನ್ನು ಕೊಟ್ಟು ಹೋದ. ಅದು ಸರ್ ಹೆನ್ರಿಯದು. ಅದನ್ನು ಇಲ್ಲಿ ಪೂರ್ಣ ಕೊಟ್ಟಿದ್ದೇನೆ.

ಬ್ರೇಯ್ಲಿ. ಹಾಲ್
ಯಾರ್ಕ್‌ಶೈರ್
ಅಕ್ಟೋಬರ್ ೧–೧೮೮೪

ಪ್ರಿಯ ಕ್ವಾರ್ಟರ್‌ಮನ್, ನಾನು ಗುಡ್ ಹಾಗು ಜಾರ್ಜ್ ಕ್ಷೇಮವಾಗಿ ಇಂಗ್ಲೆಂಡ್ ತಲುಪಿದ ಬಗ್ಗೆ ಕೆಲವು ವಾರದ ಹಿಂದೆ ಕಾಗದ ಬರೆದಿದ್ದೆ.

ಲಂಡನ್ನಿಗೆ ಒಟ್ಟಿಗೆ ಹೋದೆವು. ನೀವಿದ್ದಿದ್ದರೆ ಮರುದಿನ ಹೊಸ ಬಟ್ಟೆ ತೊಟ್ಟು ಹೊಸ ಐ-ಗ್ಲಾಸ್ ಹಾಕಿಕೊಂಡಿದ್ದ ಗುಡ್‌ರನ್ನು ನೋಡ ಬಹುದಿತ್ತು. ನನ್ನ ಪರಿಚಯದವರಿಗೆ ಗುಡ್‌ರ ಸುಂದರ ಬಿಳಿಯ ಕಾಲುಗಳ ಕಥೆ ಹೇಳಿದರೆ ಅವರಿಗೆ ಕೋಪ ಬರುತ್ತಿತ್ತು. ಯಾರೋ ಅದನ್ನು ಪತ್ರಿಕೆಯಲ್ಲಿ ಪ್ರಕಟಿಸಿಬಿಟ್ಟರು.

ಹಣದ ವಿಷಯಕ್ಕೆ ಬಂದರೆ, ಗುಡ್ ಹಾಗು ನಾನು ವಜ್ರವನ್ನು ಬೆಲೆ ಕಟ್ಟಿಸಲು ಕೊಂಡೊಯ್ದೆವು. ಬೆಲೆ ಹೇಳಲೇ ಹೆದರಿಕೆಯಾಗುತ್ತದೆ. ಒಂದು ಸಣ್ಣ ತುಂಡಿಗೆ ಒಂದು ಲಕ್ಷ ಎಂಭತ್ತು ಸಾವಿರ ಪೌಂಡ್ ಬೆಲೆ ಬಂತು.

ಪ್ರಿಯ ಸ್ನೇಹಿತ, ನೀವು ನಮ್ಮಲ್ಲಿಗೆ ಬರಬೇಕು. ಇಲ್ಲೆ ಒಂದು ಮನೆ ಕೊಂಡುಕೊಳ್ಳಿರಿ. ನೀವು ಕೊಳ್ಳಬಹುದಾದಂಥ ಮನೆಯೊಂದು ಇಲ್ಲಿದೆ. ಬೇಗ ಬಂದರೆ ಒಳ್ಳೆಯದು. ನೀವು ಇಲ್ಲೇ ಇರುವುದಾಗಿ ಮಾತು ಕೊಡಬೇಕು.

ಒಳ್ಳೆಯದು, ನಾನೇನೂ ಹೆಚ್ಚಿಗೆ ಹೇಳಲಾರೆ. ನೀವು ಬರುತ್ತೀರೆಂದು ನಂಬಿರುವೆ.

ನಿಮ್ಮ ಸ್ನೇಹಿತ.
ಹೆನ್ರಿ ಕರ್ಟಿಸ್

ಟ್ವಾಲಾನ ತಲೆಯನ್ನು ಕಡಿದ ಕೊಡಲಿಯನ್ನು ನನ್ನ ಬರೆಯುವ ಮೇಜಿನ ಮೇಲಿರಿಸಿದ್ದೇನೆ. ನಮ್ಮ ಯುದ್ಧಕವಚಗಳನ್ನು ತರಬೇಕಾಗಿತ್ತು.

ಹೆ. ಕ

*

ಇವತ್ತು ಮಂಗಳವಾರ; ಶುಕ್ರವಾರ ಹೊರಡುವ ಒಂದು ಹಡಗಿದೆ. ಕರ್ಟಿಸ್ ಹೇಳಿದಂತೆ ಮಾಡಬೇಕು.



## ಯೋಗ್ಯತೆ

ಚರ್ಚಿಲ್ಲರು ಕರೆದಿದ್ದ ಪತ್ರಿಕಾಗೋಷ್ಠಿಯಲ್ಲಿ ಪತ್ರಕರ್ತನೊಬ್ಬ ಕೇಳಿದ: "ರಾಜಕಾರಣಿಯಾಗಬೇಕೆನ್ನುವ ತರುಣರಿಗೆ ಇರಬೇಕಾದ ಅರ್ಹತೆ ಯಾವವು?"

ಗಂಭೀರವಾಗಿ ಒಮ್ಮೆ ಸುತ್ತಲೂ ನೋಡಿದರು ಚರ್ಚಿಲ್. ಮಹತ್ವದ ಸಂಗತಿಗಳನ್ನು ಹೇಳುವ ಮುಂಚೆ ಹಾಗೊಮ್ಮೆ ನೋಡುವುದು ಅವರ ವಾಡಿಕೆ.

"ಯೋಗ್ಯತೆ......" ಎಂದರು ಚರ್ಚಿಲ್. "ಮುಂದೇನಾಗುವುದೆಂಬುದನ್ನು ಇಂದೇ ಹೇಳಿಬಿಡಬಲ್ಲ ಯೋಗ್ಯತೆ. ನಾಳೆ, ನಾಡಿದ್ದು, ಮುಂದಿನ ವಾರ, ಬರುವ ತಿಂಗಳು, ವರ್ಷಾನಂತರ ಏನಾದೀತೆಂಬುದನ್ನು ಕರಾರುವಾಕ್ಕಾಗಿ ಹೇಳಿಬಿಡುವ ಯೋಗ್ಯತೆ...." ಇಷ್ಟು ಹೇಳಿ ತಡೆದು ಮತ್ತೊಮ್ಮೆ ಮೊದಲಿನ ಹಾಗೇ ಗಂಭೀರವಾಗಿ ಸುತ್ತಲೂ ನೋಡಿ ಮತ್ತೆ ಹೇಳಿದರು: "ಅಷ್ಟೇ ಅಲ್ಲ – ತಾನು ಹೇಳಿದ್ದು ಆಗದೇ ಹೋದರೆ ಏಕೆ ಆಗಲಿಲ್ಲ ಎಂಬುದನ್ನು ಮನದಟ್ಟಾಗುವಂತೆ ಹೇಳಿಬಿಡುವ ಯೋಗ್ಯತೆಯೂ ಬೇಕು..."

Printed & published by P. S. Bhat for the Jayakarnatak News Printers Ltd., at the Samyukta Karnataka Press, Koppikar Road, Hubli–580 020. Rept. Bombay: V. Satyamurty Phone: 522412; Calcutta: H. Muzamdar 46–4233: Madras: K. A. Subramanian Phone: 842201; New Delhi. P. R. Chopra Phone: 714130.

# ರ್‍ಯಾಲಿ-ಕ್ಲಿಯರ್‌ಟೋನ್‌ನ 6 ಕೆಚ್ಚೆದೆಯ ಯೋಧರು



ಬಟ್ಟೆಗಳ ಮಡಿಕೆಗಳ ಶತ್ರು—

## ರ್‍ಯಾಲಿ ಕ್ಲಿಯರ್‌ಟೋನ್

**ಇಸ್ತ್ರಿ ಪೆಟ್ಟಿಗೆಗಳು .**

ಗೃಹೋಪಕರಣಗಳ ಕ್ಷೇತ್ರದಲ್ಲಿನ ಒಂದು ಹೊಸ, ಮಹಾನ್ ಜೋಡಿ ನಿಮಗೆ ಇಸ್ತ್ರಿಪೆಟ್ಟಿಗೆಗಳ ಹೊಸ ಶ್ರೇಣಿಯನ್ನೀಯುತ್ತದೆ—ರ್‍ಯಾಲಿ ಕ್ಲಿಯರ್‌ಟೋನ್. ಈ ಬ್ರ್ಯಾಂಡ್‌ನಲ್ಲಿ ಕ್ಲಿಯರ್‌ಟೋನ್‌ನ ಉಚ್ಚ ಮಟ್ಟದ ಗುಣಗಳು ಮತ್ತು ರ್‍ಯಾಲೀಸ್‌ನ ವಿಶ್ವಾಸಾರ್ಹತೆ ಸಮ್ಮಿಲಿತವಾಗಿವೆ. ನೀವು ಈ ಇಸ್ತ್ರಿಪೆಟ್ಟಿಗೆಗಳ ಶ್ರೇಣಿಯಿಂದ ನಿಮಗೆ ಬೇಕಾದುದನ್ನು ಆಯ್ದುಕೊಳ್ಳಿರಿ.

ಆರು ಉತ್ತಮ ಮಾಡೆಲುಗಳಿವೆ—ಇಷ್ಟವಾದುದನ್ನು ಕೊಳ್ಳಿರಿ:

ಆಟೊಮ್ಯಾಟಿಕ್—ನೋವಾ, ಕ್ವೀನ್, ಇಂಪೀರಿಯಲ್.

ನಾನ್-ಆಟೊಮ್ಯಾಟಿಕ್—ಪಾಪ್ಯುಲರ್, ಸೀನಿಯರ್, ಡಿಲೈಟ್.

**ರ್‍ಯಾಲಿ ಕ್ಲಿಯರ್‌ಟೋನ್—ಹೊಸ ಜೋಡಿಯ ಕೆಲಸ ನೋಡಿ,**
**ಅನುಪಮವು ಅದರ ಮೋಡಿ!**

"ನನ್ನ ರ್‍ಯಾಲಿ ಕ್ಲಿಯರ್‌ಟೋನ್ ಇಸ್ತ್ರಿಪೆಟ್ಟಿಗೆ
ಕಷ್ಟಪಟ್ಟು ಕೆಲಸ ಮಾಡುತ್ತದೆ—
ನನ್ನ ಕಷ್ಟವನ್ನು ತಪ್ಪಿಸುವುದಕ್ಕೆ!"



Registered with the Registrar of Newspapers for India under No 3533/57



